ಸೇವಾಸದನ ಗ್ರಂಥಮಾಲೆ :

# ಭಾವ
# - ಭಾಗವತ ★ ಪ್ರಕಾಶ

॥ ಭಾಗ ೨ ॥



ಶ್ರೀ ಚಿದಂಬರ

ಬೆಲೆ ರೂ. 2-00

ಸೇವಾಸದನ-ಚಿದಂಬರಾಶ್ರಮ, ಗುಬ್ಬಿ.

ಸೇವಾಸದನ ಗ್ರಂಥಮಾಲೆ !

# ಭಾಗವತ ಭಾವ ಪ್ರಕಾಶ

॥ ಭಾಗ ೩ ॥




ಶ್ರೀ ಚಿದಂಬರ

ಬೆಲೆ ರೂ. 2-00

ಸೇವಾಸದನ-ಚಿದಂಬರಾಶ್ರಮ, ಗುಬ್ಬಿ.

# ಭಾಗವತ ಭಾವ ಪ್ರಕಾಶ

॥ ೩ ॥

## ಏಕವಿಂಶ ಕಿರಣ

### ಸ್ವಾಯಂಭುವಮನುವಿನ
### ಉಳಿದ ಇಬ್ಬರು ಹೆಣ್ಣುಮಕ್ಕಳ ವಂಶದ ವರ್ಣನೆ
### ದಕ್ಷ ಶಿವರ ವೈರ

ಮೈತ್ರೇಯರು ವಿದುರನಿಗೆ ಹೇಳುತ್ತಿದ್ದಾರೆ—

ವಿದುರ! ಸ್ವಾಯಂಭುವಮನುವಿಗೆ ಶತರೂಪಾರಾಣಿಯಿಂದ ಪ್ರಿಯವ್ರತ, ಉತ್ತಾನಪಾದ ಎಂಬ ಇಬ್ಬರು ಗಂಡುಮಕ್ಕಳಲ್ಲದೆ, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಹೆಣ್ಣುಮಕ್ಕಳಾದರೆಂದು ಹೇಳಿದೆನಷ್ಟೆ. ಅವರಲ್ಲಿ ದೇವಹೂತಿಯ ಚರಿತ್ರೆಯನ್ನಿದುವರೆಗೂ ತಿಳಿಸಿದ್ದೇನೆ. ಈಗ ಉಳಿದಿಬ್ಬರ ವಂಶವನ್ನು ಹೇಳುತ್ತೇನೆ—

ಮನುವು ಆಕೂತಿ ಎಂಬ ಮಗಳನ್ನು ರುಚಿಪ್ರಜಾಪತಿಗೆ × ಪುತ್ರಿಕಾ ಧರ್ಮದ ನಿಯಮದಂತೆ ವಿವಾಹಮಾಡಿಕೊಟ್ಟನು. ಗಂಡುಮಕ್ಕಳಿಲ್ಲದವನಿಗೆ ಪುತ್ರಿಕಾ ಧರ್ಮವು ಅನ್ವಯಿಸುವುದಾದರೂ, ಈ ಆಕೂತಿಗೆ ಇಬ್ಬರು ಸೋದರರಿದ್ದರೂ, ಮನುವಿನ ಅಪೇಕ್ಷೆಯು ಮಗಳ ಮಗನನ್ನು ದತ್ತುತೆಗೆದುಕೊಳ್ಳಬೇಕೆಂದು ಇದ್ದುದರಿಂದ ಶತರೂಪಾರಾಣಿಯ ಒಪ್ಪಿಗೆಯನ್ನು ತೆಗೆದುಕೊಂಡೇ ಈ ರೀತಿ ಮಾಡಬೇಕಾಯಿತು. ಬ್ರಹ್ಮವರ್ಚಸ್ವಿಯಾದ ರುಚಿಪ್ರಜಾಪತಿಯು

---

× ಪುತ್ರಿಕಾ ಧರ್ಮವೆಂದರೆ, ಗಂಡುಮಕ್ಕಳಿಲ್ಲದವನು ತನ್ನ ಮಗಳನ್ನು ಮದುವೆ ಮಾಡಿಕೊಡುವಾಗ, ಅವಳಲ್ಲಿ ಹುಟ್ಟಿದ ಹಿರಿಯಮಗನನ್ನು ತನಗೇ ಕೊಡಬೇಕೆಂದು ಒಪ್ಪಿಸಿ, ಆ ಒಪ್ಪಿಗೆಯ ಮೇಲೆ ವಿವಾಹಮಾಡಿಕೊಡುವ ಕ್ರಮ.

ಈಶ್ವರ ಧ್ಯಾನ ಪೂರ್ವಕವಾಗಿ ಆಕೂತಿಯಲ್ಲಿ ಒಬ್ಬ ಕನ್ಯೆಯನ್ನೂ ಒಬ್ಬ ಪುತ್ರನನ್ನೂ ಪಡೆದನು.

ರುಚಿಯ ಪುತ್ರನಾದ ಯಜ್ಞನು ಸಾಕ್ಷಾತ್ ವಿಷ್ಣುವಿನ ಅಂಶದಿಂದ ಹುಟ್ಟಿದನು. ಪುತ್ರಿಯಾದ ದಕ್ಷಿಣೆಯು ಲಕ್ಷ್ಮಿಯ ಅಂಶದಿಂದ ಹುಟ್ಟಿದಳು. ಸ್ವಾಯಂಭುವಮನುವು ಸಂತೋಷದಿಂದ ಪರಮ ತೇಜಸ್ವಿಯಾದ ಯಜ್ಞನೆಂಬ ಹೆಸರುಳ್ಳ ಮೊಮ್ಮಗನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ರುಚಿಯು ದಕ್ಷಿಣೆ ಎಂಬ ಮಗಳನ್ನು ತನ್ನೊಡನೆ ಇಟ್ಟುಕೊಂಡನು. ದಕ್ಷಿಣೆಯು ಲಕ್ಷ್ಮಿಯ ಅಂಶವಾದುದರಿಂದ ವಿಷ್ಣುವಿನ ಅಂಶವಾದ "ಯಜ್ಞ"ನನ್ನೇ ವಿವಾಹವಾಗಲು ಅಪೇಕ್ಷಿಸಿದಳು. ಆ ಯಜ್ಞಪುರುಷನು ಸಂತೋಷದಿಂದ ಅವಳನ್ನು ಮದುವೆಯಾದನು. ಆತನ ವೀರ್ಯದಿಂದ ದಕ್ಷಿಣೆಯಲ್ಲಿ ತೋಷ, ಪ್ರತೋಷ, ಸಂತೋಷ, ಭದ್ರ, ಶಾಂತಿ, ಇಡಸ್ಪತಿ, ಇಧ್ಮ, ಕವಿ, ವಿಭು, ಸ್ವಹ್ನ, ಸುದೇವ, ರೋಚನ ಎಂಬ ಹನ್ನೆರಡು ಜನ ಮಕ್ಕಳಾದರು. ಸ್ವಾಯಂಭುವ ಮನ್ವಂತರದಲ್ಲಿ ಈ ಯಜ್ಞಪುರುಷನ ಮಕ್ಕಳೇ ತುಷಿತ ನಾಮಕ ದೇವಗಣಗಳಾದರು. ಮರೀಚ್ಯಾದಿಗಳು ಸಪ್ತರ್ಷಿಗಳಾದರು. ಹರಿಯ ಅವತಾರನಾದ ಯಜ್ಞನೇ ಇಂದ್ರನಾದನು. ಪ್ರಿಯವ್ರತ, ಉತ್ತಾನಪಾದ ರೆಂಬ ಮಹಾ ಪ್ರತಾಪಿಗಳಾದ ಮನುಪುತ್ರರು ಪೃಥ್ವೀಪಾಲಕರಾದ ರಾಜ ರಾದರು. ಸ್ವಯಂಭುವೇ ಮನುವಾದನು. ಅವನ ಮಕ್ಕಳು, ಮೊಮ್ಮಕ್ಕಳು ಗಳಿಂದ ಸ್ವಾಯಂಭುವ ಮನ್ವಂತರವು ತುಂಬಿಹೋಯಿತು.

ಬ್ರಹ್ಮಪುತ್ರನಾದ ದಕ್ಷನಿಗೆ ಪ್ರಸೂತಿ ಎಂಬ ಕನ್ಯೆಯನ್ನು ಕೊಟ್ಟು ಮದುವೆಮಾಡಿದನು. ಆತನ ಮಹಾ ಸೃಷ್ಟಿಯಿಂದ ಲೋಕತ್ರಯವೂ ವ್ಯಾಪಿಸಲ್ಪಟ್ಟಿದೆ.

ಕರ್ದಮನ ಒಂಭತ್ತು ಹೆಣ್ಣುಮಕ್ಕಳನ್ನು ಬ್ರಹ್ಮರ್ಷಿಗಳಿಗೆ ಮದುವೆ ಮಾಡಿಕೊಟ್ಟಿತೆಂದು ಹಿಂದೆಯೇ ತಿಳಿಸಿದ್ದೇನೆ. ಈಗ ಅವರ ವಂಶವನ್ನು ಹೇಳುತ್ತೇನೆ.

ಕರ್ದಮ ಕನ್ಯೆಯಾದ ಕಲಾ ಎಂಬುವಳನ್ನು ಮರೀಚಿಋಷಿಯು ಮದುವೆಯಾದನು. ಈತನಿಗೆ ಕಶ್ಯಪ, ಪೂರ್ಣಿಮಾನ ಎಂಬ ಇಬ್ಬರು ಮಕ್ಕಳಾದರು. ಅವರ ವಂಶದಿಂದ ಈ ಜಗತ್ತೆಲ್ಲಾ ತುಂಬಿಕೊಂಡಿದೆ. ಪೂರ್ಣಿಮಾನನಿಗೆ ವಿರಜ, ವಿಶ್ವಗ ಎಂಬ ಗಂಡುಮಕ್ಕಳೂ, ದೇವಕುಲ್ಯ ಎಂಬ ಮಗಳೂ ಹುಟ್ಟಿದರು. ಈ ದೇವಕುಲ್ಯೆಯೇ ಮತ್ತೊಂದು ಜನ್ಮದಲ್ಲಿ ಹರಿಯ ಪಾದಪ್ರಕ್ಷಾಳನೆಯಿಂದ ಹುಟ್ಟಿದ ದೇವನದಿಯಾದ ಗಂಗೆಯಾದಳು.

## ತ್ರಿಮೂರ್ತಿಗಳ ಅವತಾರ

ಕರ್ದಮ ಕನ್ಯೆಯಾದ ಅನಸೂಯೆಯು ಅತ್ರಿಋಷಿಯನ್ನು ವಿವಾಹ ವಾದಳು. ಅವಳಿಗೆ ಪರಮ ಯಶಸ್ವಿಗಳಾದ ವಿಷ್ಣು, ಈಶ್ವರ, ಬ್ರಹ್ಮರ ಅಂಶದಿಂದ ಯಥಾಕ್ರಮವಾಗಿ ಹುಟ್ಟಿದ ದತ್ತ, ದೂರ್ವಾಸ, ಸೋಮ ಎಂಬ ಮಕ್ಕಳಾದರು.

**ವಿದುರ**—ಗುರುವರ್ಯ! ಜಗತ್ತಿನ ಸೃಷ್ಟಿಸ್ಥಿತಿಲಯಕರ್ತೃಗಳಾದ ತ್ರಿಮೂರ್ತಿಗಳು ಅನಸೂಯೆಯಲ್ಲೇಕೆ ಹುಟ್ಟಿದರು ?

**ಮೈತ್ರೇಯ**—ಏಕೆನ್ನುವಿಯೋ ? ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಅತ್ರಿಋಷಿಗೆ ಸೃಷ್ಟಿಮಾಡೆಂದು ಬ್ರಹ್ಮನು ಆಜ್ಞೆಮಾಡಿದನು. ಆಗ ಅತ್ರಿಯು ಅನಸೂಯೆಯೊಡಗೂಡಿ ಋಕ್ಷನಾಮ ಪರ್ವತಕ್ಕೆ ( ಈಗಿನ ಗಿರಿನಾರಕ್ಕೆ ) ತಪಸ್ಸಿಗೆ ತೆರಳಿದನು. ಅಲ್ಲಿ ಪಲಾಶ ಮತ್ತು ಅಶೋಕ ವೃಕ್ಷಗಳ ವನವು ಪುಷ್ಪಗುಚ್ಛಗಳಿಂದ ತುಂಬಿ ಸುಶೋಭಿತವಾಗಿತ್ತು. ನಿರ್ವಿಂಧ್ಯಾ ನದಿಯಲ್ಲಿನ ನೀರಿನ ಜಲಪಾತದ ಶಬ್ದವು ಕೇಳಿಬರುತ್ತಿತ್ತು. ಅತ್ರಿಮುನಿಯು ಪ್ರಾಣಾಯಾಮದಿಂದ ಮನಸ್ಸನ್ನು ಏಕಾಗ್ರವಾಗಿಮಾಡಿ, ಶೀತೋಷ್ಣ ಮುಂತಾದವುಗಳನ್ನು ಸಹಿಸಿಕೊಂಡು ತಪಸ್ಸನ್ನು ಮಾಡಲಾರಂಭಿಸಿದನು. ಒಂಟಿಕಾಲಿನಲ್ಲಿ ನಿಂತು, ವಾಯುವನ್ನೇ ಆಹಾರವಾಗಿ ಮಾಡಿಕೊಂಡು, ಒಂದು ನೂರು ವರ್ಷಗಳವರೆಗೂ ಘೋರ ತಪಸ್ಸನ್ನು ಮಾಡುತ್ತಾ “ ಜಗತ್ತಿನ ತುಂಬ ತುಂಬಿಕೊಂಡಿರುವ ಮಹಾಶಕ್ತಿರೂಪನಾದ ಈಶ್ವರನು ನನ್ನನ್ನು

ಅನುಗ್ರಹಿಸಿ ತನ್ನಂತೆ ಗುಣ ಶೀಲಗಳುಳ್ಳ ಪುತ್ರನನ್ನು ನನಗೆ ಕೊಡಲಿ" ಎಂದು ಮನಸ್ಸಿನಲ್ಲಿಯೇ ಶರಣುಹೋಗಿ ಪ್ರಾರ್ಥಿಸಿದನು. ಮುನಿಯ ಪ್ರಾಣಾಯಾಮದಿಂದ ವೃದ್ಧಿಯಾಗುತ್ತಿರುವ ಯೋಗಾಗ್ನಿಯು ಬ್ರಹ್ಮರಂಧ್ರ ದಿಂದ ಹೊರಹೊರಟು ಲೋಕತ್ರಯವನ್ನೂ ಸುಡಲಾರಂಭಿಸಿತು. ಇದನ್ನು ನೋಡಿ ಅಪ್ಸರ, ಮುನಿ, ಗಂಧರ್ವ, ಸಿದ್ಧ, ವಿದ್ಯಾಧರ, ನಾಗರುಗಳಿಂದ ಸ್ತೋತ್ರಮಾಡಲ್ಪಡುತ್ತಿರುವ ಬ್ರಹ್ಮ, ವಿಷ್ಣು, ಮಹೇಶ್ವರರು ಮುನಿಯ ಆಶ್ರಮಕ್ಕೆ ಅವನನ್ನು ಅನುಗ್ರಹಿಸುವುದಕ್ಕಾಗಿ ಬಂದರು.

ಈ ದೇವ ಶ್ರೇಷ್ಠರ ಪ್ರಾದುರ್ಭಾವದಿಂದ ಒಂಟಿಕಾಲಿನಿಂದ ನಿಂತಿದ್ದ ಆ ತಪಸ್ವಿಯ ಮನಸ್ಸು ಪ್ರಸನ್ನವಾಯಿತು. ಹಂಸದ ಮೇಲೆ ಬ್ರಹ್ಮನೂ, ಗರುಡನ ಮೇಲೆ ವಿಷ್ಣುವೂ, ವೃಷಭನ ಮೇಲೆ ಶಿವನೂ ತಮ್ಮತಮ್ಮ ಚಿಹ್ನೆ ಗಳೊಡನೆ ದೇದೀಪ್ಯಮಾನವಾದ ಕೃಪಾದೃಷ್ಟಿಯನ್ನು ಬೀರುತ್ತಾ ಪ್ರಕಟ ರಾದಾಗ ಆ ತೇಜಸ್ಸಿನಿಂದ ಚಕಿತನಾಗಿ ಆತನು ಕಣ್ಣುಬಿಟ್ಟನು. ತಟ್ಟನೆ ದೀರ್ಘದಂಡ ನಮಸ್ಕಾರಮಾಡಿ ಪೂಜಾಸಾಮಗ್ರಿಗಳಿಂದವರನ್ನು ಪೂಜಿಸಿ ಕೈಗಳನ್ನು ಜೋಡಿಸಿಕೊಂಡು ಕಣ್ಣುಮುಚ್ಚಿ ಏಕಾಗ್ರಮನಸ್ಸಿನಿಂದ ಅವರ ದಿವ್ಯ ತೇಜೋಮೂರ್ತಿಗಳನ್ನು ಧ್ಯಾನಮಾಡುತ್ತಾ ಅರ್ಥಗರ್ಭಿತಗಳಾದ ಮೃದುಮಧುರ ವಾಕ್ಯಗಳಿಂದವರನ್ನು ಸ್ತೋತ್ರಮಾಡಲಾರಂಭಿಸಿದನು—

"ಎಲೈ ದೇವತ್ರಯವೆ! ನೀವು ಲೋಕತ್ರಯವನ್ನು ಸೃಷ್ಟಿಸಿ, ಕಾಪಾಡಿ, ನಾಶಮಾಡಬಲ್ಲ ಮಹಾ ತೇಜೋಮೂರ್ತಿಗಳು. ಮಾಯೆಯ ರಜಸ್ಸು, ಸತ್ವ, ತಮಸ್ಸು ರೂಪಗಳಾದ ಗುಣಗಳನ್ನು ಧಾರಣೆಮಾಡಿ ಪ್ರತಿ ಯೊಂದು ಕಲ್ಪದಲ್ಲಿಯೂ ಶರೀರ ಧಾರಣೆಮಾಡುತ್ತಿರುವ ಬ್ರಹ್ಮ ವಿಷ್ಣು ಮಹೇಶ್ವರರಾದ ನಿಮ್ಮನ್ನು ನಮಸ್ಕರಿಸುತ್ತೇನೆ. ನಾನು ಒಬ್ಬ ದೇವನನ್ನು ಕುರಿತು ತಪಸ್ಸು ಮಾಡಿದೆನು. ಈಗ ನೀವು ಮೂವರು ಪ್ರಸನ್ನರಾಗಿ ದಯ ಮಾಡಿಸಿರುವುದು ನನಗೆ ಆಶ್ಚರ್ಯಕರವಾಗಿದೆ. **ನಾನು ಅಪೇಕ್ಷಿಸಿದ ಸರ್ವ ಲೋಕ ಮಹೇಶ್ವರನಾದ ದೇವನು ನಿಮ್ಮಗಳಲ್ಲಿ ಯಾರು ?** ಎಂಬುದನ್ನು ದಯವಿಟ್ಟು ಅಪ್ಪಣೆಕೊಡಿಸಬೇಕು. ಸತ್ಪುತ್ರನನ್ನು ಹೊಂದಬೇಕೆಂಬ

ಉದ್ದೇಶ್ಯದಿಂದ ದೇವದೇವನನ್ನು—ಜಗತ್ಪತಿಯನ್ನು ಮನಸ್ಸಿನಲ್ಲಿ ಆರಾಧಿಸಿದೆನು. ಆದರೆ ನೀವು ಮೂವರೂ ಏತಕ್ಕೆ ದಯಮಾಡಿಸಿದಿರಿ? ಮನಸ್ಸಿನಿಂದಲೂ ಚಿಂತಿಸಲಾಗದ ನೀವು ನನ್ನ ಕಣ್ಣೆದುರಿಗೆ ಬಂದು ನಿಂತಿರುವುದರಿಂದ ನೀವು ಪ್ರಸನ್ನರಾಗಿ ನನ್ನ ಸಂಶಯವನ್ನು ದೂರಮಾಡಿರಿ. ನಿಮ್ಮಲ್ಲಿ ಸರ್ವೇಶ್ವರನು ಯಾರು ಎಂಬುದನ್ನು ಅಪ್ಪಣೆಕೊಡಿಸಿ ಅನುಗ್ರಹಿಸಬೇಕು. ನನ್ನಂತಹ ಸಾಮಾನ್ಯ ಮನುಷ್ಯನಿಗೆ ನಿಮ್ಮನ್ನು ತಿಳಿಯುವ ಶಕ್ತಿಯಿಲ್ಲ."

ಅತ್ರಿ ಋಷಿಯ ಮಾತುಗಳನ್ನು ಕೇಳುತ್ತಿದ್ದ ಆ ಮೂವರೂ ಮುಗುಳು ನಗೆ ನಕ್ಕರು. ಹೇಳಿದರು :—

" ಬ್ರಹ್ಮರ್ಷಿ, ನಿನ್ನ ಸಂಕಲ್ಪವು ಸತ್ಯವಾದುದು. ನೀನು ಮಾಡಿದ ಸಂಕಲ್ಪದಂತೆ ಕಾರ್ಯವಾಗಲೇಬೇಕು. **ನೀನು ಯಾವ ಈಶ್ವರನನ್ನು ಧ್ಯಾನಮಾಡುತ್ತಿರುವೆಯೋ ಆ ಈಶ್ವರನೇ ನಾವು. ಅಂದರೆ ನಾವು ಮೂವರೂ ಆ ಈಶ್ವರನ ರೂಪವೇ. ನಮ್ಮ ತತ್ತ್ವವು ಒಂದೇ.** ನಮ್ಮ ಅಂಶದಿಂದ ನಿನಗೆ ಮೂವರು ಮಕ್ಕಳಾಗುವರು. ಅವರ ಯಶಸ್ಸು ಲೋಕತ್ರಯದಲ್ಲಿಯೂ ವಿಖ್ಯಾತವಾಗುವುದು. ಅವರೂ ನಿನ್ನ ಯಶಸ್ಸನ್ನು ಜಗತ್ತಿನಲ್ಲಿ ಹರಡುವಂತೆ ಮಾಡುವರು. ನಿನಗೆ ಕಲ್ಯಾಣವಾಗಲಿ." ಹೀಗೆ ಹೇಳುತ್ತಾ ಅತ್ರಿಋಷಿಯು ನೋಡುತ್ತಿದ್ದಂತೆಯೇ ಅವರು ಹೊರಟುಬಿಟ್ಟರು. ಬ್ರಹ್ಮನ ಅಂಶದಿಂದ ಸೋಮನೂ, ವಿಷ್ಣುವಿನ ಅಂಶದಿಂದ ಯೋಗಿವರ್ಯನಾದ ದತ್ತಾತ್ರೇಯನೂ ಶಂಕರನ ಅಂಶದಿಂದ ದುರ್ವಾಸನೂ ಹೀಗೆ ಮೂವರು ಪುತ್ರರು ಜನಿಸಿದರು.

## ಅಂಗಿರಾ ಋಷಿಯ ವಂಶ

ಇನ್ನು ಅಂಗಿರಾ ಋಷಿಯ ವಂಶವನ್ನು ಹೇಳುವೆನು—

ಕರ್ದಮನ ಮಗಳಾದ ಶ್ರದ್ಧೆಯೆಂಬುವಳು ಅಂಗಿರಾ ಋಷಿಯ ಹೆಂಡತಿಯಾದಳು. ಅವಳಿಗೆ ಸಿನೀವಾಲೀ, ಕುಹೂ, ರಾಕಾ ಮತ್ತು ಅನುಮತಿ ಎಂಬ ನಾಲ್ಕು ಜನ ಪುತ್ರಿಯರಾದರು. ಇವರಿಗೆ ಭಗವಂತನ ಅಂಶಭೂತರಾದ

ಉತಥ್ಯ ಮತ್ತು ಬೃಹಸ್ಪತಿ ಎಂಬ ಇಬ್ಬರು ಗಂಡುಮಕ್ಕಳು ಹುಟ್ಟಿದರು. ಇವರಿಬ್ಬರೂ ಸ್ವಾರೋಚಿಷ ಮನ್ವಂತರದಲ್ಲಿ ಪ್ರಸಿದ್ಧರಾದರು. ಕರ್ದಮನ ಮಗಳಾದ ಹವಿರ್ಭೂ ಎಂಬುವಳನ್ನು ಪುಲಸ್ತ್ಯ ಋಷಿಯು ಮದುವೆಯಾದನು. ಆತನಿಗೆ ಮಹಾ ತಪಸ್ವಿಗಳಾದ ಅಗಸ್ತ್ಯ, ವಿಶ್ರವಾ ಎಂಬ ಮಕ್ಕಳು ಹುಟ್ಟಿದರು. ಈ ಅಗಸ್ತ್ಯನೇ ಮುಂದಿನ ಜನ್ಮದಲ್ಲಿ ಜಾಠರಾಗ್ನಿಯಾದನು. ವಿಶ್ರವಸ್ಸಿಗೆ ಇಡವಿಡಾ ಎಂಬ ಹೆಂಗಸಿನಿಂದ ಯಕ್ಷಾಧಿಪತಿಯಾದ ಕುಬೇರನೂ, ಕೇಶಿನೀ ಎಂಬ ಸ್ತ್ರೀಯಿಂದ ರಾವಣ ಕುಂಭಕರ್ಣ ವಿಭೀಷಣರೂ ಉತ್ಪನ್ನರಾದರು.

ಕರ್ದಮ ಕನ್ಯೆಯಾದ ಗತಿಯು ಪುಲಹ ಋಷಿಯನ್ನು ಮದುವೆಯಾದಳು. ಅವಳಿಗೆ ಕರ್ಮಶ್ರೇಷ್ಠ, ವರೀಯರ್ಾ ಮತ್ತು ಸಹಿಷ್ಣು ಎಂಬ ಮೂವರು ಪುತ್ರರಾದರು. ಕ್ರಿಯಾ ಎಂಬ ಕರ್ದಮಕನ್ಯೆಯಿಂದ ಕ್ರತುಮಹರ್ಷಿಗೆ ವಾಲಖಿಲ್ಯರೆಂಬ ಅರವತ್ತುಸಾವಿರ ಮಕ್ಕಳಾದರು. ಕರ್ದಮನ ಊರ್ಜಾ ಎಂಬ ಕನ್ಯೆಯಿಂದ ವಸಿಷ್ಠಋಷಿಗೆ ಚಿತ್ರಕೇತು, ಸುರೋಚಿ, ವಿರಜಾ, ಮಿತ್ರ, ಉಲ್ಬಣ ವಸ್ತುಭೃದ್ಯಾನ, ದ್ಯುಮಾರ್ನ ಎಂಬ ಏಳು ಜನ ಶುದ್ಧ ಬ್ರಹ್ಮರ್ಷಿಗಳು ಹುಟ್ಟಿದರು. ವಸಿಷ್ಠನ ಮತ್ತೊಬ್ಬ ಹೆಂಡತಿಯಿಂದ ಶಕ್ತಿ ಮುಂತಾದ ಮಕ್ಕಳಾದರು. ಕರ್ದಮನ ಮಗಳಾದ ಚಿತ್ತಿ ಎಂಬುವಳು ಅಥರ್ವಣ ಋಷಿಯನ್ನು ವಿವಾಹವಾದಳು. ಅವರಿಗೆ ತಪೋನಿಧಿಯಾದ ದಧೀಚಿ ಎಂಬ ಪುತ್ರನು ಹುಟ್ಟಿದನು. ಆತನನ್ನು ಅಶ್ವಶಿರಸ್ ಎಂಬೂ ಹೇಳುತ್ತಾರೆ.

## ಭೃಗುವಿನ ವಂಶ

ಈಗ ಭೃಗುವಿನ ವಂಶವನ್ನು ವರ್ಣಿಸುತ್ತೇನೆ.

ಭೃಗುವಿನ ಹೆಂಡತಿಯು ಕರ್ದಮನ ಮಗಳಾದ ಖ್ಯಾತಿ ಎಂಬುವಳು. ಅವರಿಗೆ ಧಾತಾ ವಿಧಾತಾ ಎಂಬ ಇಬ್ಬರು ಪುತ್ರರೂ ಭಗವತ್ಪರಾಯಣಳಾದ ಶ್ರೀ ಎಂಬ ಕನ್ಯೆಯೂ ಹುಟ್ಟಿದರು. ಮೇರುವು ಆಯತಿ ನಿಯತಿ ಎಂಬ ಇಬ್ಬರು ಹೆಣ್ಣುಮಕ್ಕಳನ್ನು ಧಾತಾ ವಿಧಾತಾ ಎಂಬುವರಿಗೆ ಮದುವೆಮಾಡಿ ಕೊಟ್ಟನು. ಅವರಿಗೆ ಯಥಾ ಕ್ರಮವಾಗಿ ಮೃಕಂಡು ಮತ್ತು ಪ್ರಾಣ ಎಂಬ

ಇಬ್ಬರು ಮಕ್ಕಳಾದರು. ಮೃಕಂಡುವಿಗೆ ಮಾರ್ಕಂಡೇಯನೂ ಪ್ರಾಣನಿಗೆ ವೇದಶಿರಾ ಎಂಬ ಋಷಿಯೂ ಉತ್ಪನ್ನರಾದರು. ಭೃಗುವಿಗೆ ಕವಿ ಎಂಬ ಮತ್ತೊಬ್ಬ ಮಗನು ಹುಟ್ಟಿದನು. ಆತನ ಮಗನೇ ಉಶನಾ ಎಂಬ ಶುಕ್ರಾಚಾರ್ಯನು.

ಈ ಋಷಿಗಳೆಲ್ಲರೂ ಮಕ್ಕಳನ್ನು ಉತ್ಪನ್ನಮಾಡಿ ಸೃಷ್ಟಿಯನ್ನು ವಿಸ್ತಾರ ಮಾಡಿದರು. ನಾನು ನಿನಗೆ ಈಗ ಹೇಳಿದ ಕರ್ದಮ ಕನ್ಯೆಯರ ವಂಶದ ಚರಿತ್ರೆಯನ್ನಾರು ಶ್ರದ್ಧೆಯಿಂದ ಕೇಳುತ್ತಾರೆಯೋ ಅವರ ಪಾಪಗಳೆಲ್ಲಾ ಶೀಘ್ರವಾಗಿ ನಾಶವಾಗುವುವು.

# ನರನಾರಾಯಣರ ಅವತಾರ

ಸ್ವಾಯಂಭುವ ಮನುವಿನ ಪ್ರಸೂತಿ ಎಂಬ ಮಗಳನ್ನು ದಕ್ಷ ಪ್ರಜಾಪತಿಯು ಮದುವೆಯಾದನಷ್ಟೆ. ಆತನು ಈ ಸ್ತ್ರೀಯಿಂದ ಹದಿನಾರು ಜನ ಹರಿಣಲೋಚನೆಯರಾದ ಪುತ್ರಿಯರನ್ನು ಪಡೆದನು ಅವರಲ್ಲಿ ಹದಿಮೂರು ಜನರನ್ನು ಧರ್ಮನಿಗೂ, ಒಬ್ಬಳನ್ನು ಅಗ್ನಿಗೂ ಮತ್ತೊಬ್ಬಳನು ಸುಯೋಗ್ಯನೆಂಬ ಪಿತೃದೇವತೆಗೂ ಹದಿನಾರನೆಯವಳನ್ನು ಸಂಸಾರನಾಶಕನಾದ ಶಿವನಿಗೂ ವಿವಾಹಮಾಡಿಕೊಟ್ಟನು. ಶ್ರದ್ಧಾ, ಮೈತ್ರೀ, ದಯಾ, ಶಾಂತಿ, ತುಷ್ಟಿ, ಪುಷ್ಟಿ, ಕ್ರಿಯಾ, ಉನ್ನತಿ, ವೃದ್ಧಿ, ಮೇಧಾ, ತಿತಿಕ್ಷಾ, ಹ್ರೀ, ಮೂರ್ತಿ,ಎಂಬುವರೇ ಧರ್ಮನ ಹದಿಮೂರು ಜನ ಪತ್ನಿಯರು. ಶ್ರದ್ಧೆಗೆ ಶುಭ ಎಂಬುವನೂ ಮೈತ್ರಿಗೆ ಪ್ರಸಾದನೂ, ದಯೆಗೆ ಅಭಯನೂ ಶಾಂತಿಗೆ ಸುಖ ಅಥವಾ ಶಮನೂ, ತುಷ್ಟಿಗೆ ಮುದ (ಆನಂದ) ನೂ, ಪುಷ್ಟಿಗೆ ಸ್ಮಯನೂ, (ಅಹಂಕಾರ) ಕ್ರಿಯೆಗೆ ಯೋಗನೂ ಉನ್ನತಿಗೆ ದರ್ಪನೂ, ಬುದ್ಧಿಗೆ ಅರ್ಥನೂ (ಕೌಶಲ) ಮೇಧಾ ಎಂಬುವಳಿಗೆ ಸ್ಮೃತಿ ಅಥವಾ ಕ್ಷಮೆ ಎಂಬುವನೂ, ತಿತಿಕ್ಷೆಗೆ ಕ್ಷೇಮನೂ ಹ್ರೀಗೆ ಪ್ರಶ್ರಯ ಎಂಬುವನೂ ಹುಟ್ಟಿದರು. ಸಕಲ ಗುಣಗಳನ್ನೂ ಉತ್ಪನ್ನ ಮಾಡುವ ಮೂರ್ತಿ ಎಂಬಾಕೆಯ ಗರ್ಭದಿಂದ ನರನಾರಾಯಣ ಋಷಿಗಳು ಉತ್ಪನ್ನರಾದರು. ಅವರ ಜನ್ಮಕಾಲದಲ್ಲಿ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲವೂ ಸುಖ ಶಾಂತಿಗಳಿಂದ ತುಂಬಿತು. ಎಲ್ಲರ ಮನಸ್ಸುಗಳೂ ಪ್ರಸನ್ನ

ವಾದುವು. ದಿಕ್ಕುಗಳು ನಿರ್ಮಲವಾದುವು. ನಿರ್ಮಲವಾದ ತಂಗಾಳಿಯು ಬೀಸಲಾರಂಭಿಸಿತು. ನದಿಗಳ ಜಲಗಳು ಸ್ವಚ್ಛವಾದುವು. ಪರ್ವತಾದಿಗಳೆಲ್ಲಾ ಆಹ್ಲಾದಕರವಾಗಿ ಕಂಡವು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ಕಲ್ಪವೃಕ್ಷಗಳು ಪುಷ್ಪವೃಷ್ಟಿಯನ್ನು ಕರೆದವು. ಸಂತೋಷದಿಂದ ಮುನಿಗಳು ಸ್ತೋತ್ರಮಾಡಲಾರಂಭಿಸಿದರು. ಗಂಧರ್ವ ಕಿನ್ನರರು ಗಾನಮಾಡಲಾರಂಭಿಸಿದರು. ಅಪ್ಸರೆಯರು ನರ್ತನಮಾಡಲಾರಂಭಿಸಿದರು. ಎಲ್ಲೆಲ್ಲಿಯೂ ಪರಮಮಂಗಳಮಯನೋಟವು ಕಾಣುತ್ತಿತ್ತು. ಬ್ರಹ್ಮಾದಿ ದೇವತೆಗಳು ಬಂದು ವಿಷ್ಣುವಿನ ಅವತಾರರಾದ ನರನಾರಾಯಣರನ್ನು ಸ್ತೋತ್ರಮಾಡಲಾರಂಭಿಸಿದರು :—

" ಯಾರ ಆತ್ಮದಲ್ಲಿ ಆಕಾಶದಲ್ಲಿನ ಗಂಧರ್ವನಗರದಂತೆ ಈ ಜಗತ್ತು ಮಾಯೆಯಿಂದ ತೋರುತ್ತಿರುವುದೋ, ಯಾವಾತನು ತನ್ನ ಆತ್ಮವನ್ನು ಪ್ರಕಟಮಾಡುವುದಕ್ಕಾಗಿ ಧರ್ಮನ ಗೃಹದಲ್ಲಿ ಈ ಋಷಿರೂಪದಿಂದ ಪ್ರಕಟನಾಗಿರುವನೋ ಆ ಮಹಾಮಹಿಮನಾದ ಪರಮ ಪುರುಷನಿಗೆ ನಮಸ್ಕಾರವು. ಯಾವಾತನನ್ನು ಶಾಸ್ತ್ರಗಳು ಅನುಮಾನದಿಂದ ಮಾತ್ರ ಗುರ್ತಿಸಬಲ್ಲವೋ ಆ ಈಶ್ವರನು ಸಂಸಾರದ ಎಲ್ಲೆಯನ್ನು ನಾಶಮಾಡುವ ವಿಘ್ನಗಳನ್ನು ನಾಶಮಾಡುವುದಕ್ಕಾಗಿ ತನ್ನ ಸತ್ವದಿಂದ—ವೀರ್ಯದಿಂದ ಸೃಷ್ಟಿಮಾಡಿದ ದೇವಗಣವಾದ ನಮ್ಮನ್ನು ಅನುಗ್ರಹಿಸುವುದಕ್ಕಾಗಿ ಪದ್ಮಗಳನ್ನು ಧಿಕ್ಕರಿಸುವ ಲೋಚನಗಳಿಂದ ನಮ್ಮನ್ನು ನೋಡಿ ಕೃತಾರ್ಥರನ್ನಾಗಿ ಮಾಡಲಿ ! " ಹೀಗೆ ಸ್ತೋತ್ರಮಾಡಿದ ದೇವತೆಗಳ ಪೂಜೆಯನ್ನು ಸ್ವೀಕರಿಸಿ ತಮ್ಮ ಕೃಪಾದೃಷ್ಟಿಯಿಂದವರನ್ನು ಅನುಗ್ರಹಿಸಿ ಅವರು ಗಂಧಮಾದನ ಪರ್ವತಕ್ಕೆ ತೆರಳಿದರು. ಶ್ರೀ ಹರಿಯ ಅಂಶಾವತಾರ ರೂಪರಾದ ಆ ನರನಾರಾಯಣರೇ ಭೂಭಾರಹರಣಮಾಡುವುದಕ್ಕಾಗಿ ಯಾದವ ಕೌರವ ವಂಶದಲ್ಲಿ ಕೃಷ್ಣಾರ್ಜುನರಾಗಿ ಅವತಾರಮಾಡಿದ್ದಾರೆ.

ತೇಜಸ್ಸಿಗೆ ಅಭಿಮಾನಿಯಾದ ಅಗ್ನಿಯೊಡನೆ ದಕ್ಷನ ಮಗಳಾದ ಸ್ವಾಹಾ ಎಂಬುವಳ ವಿವಾಹವಾಯಿತು. ಹೋಮಮಾಡಿದ ವಸ್ತುವನ್ನು ಭೋಜನಮಾಡುವ ಪಾವಕನೆಂಬ ಅಗ್ನಿಯೂ, ಪವಮಾನ, ಶುಚಿ ಎಂಬ

ಮೂರು ವಿಧವಾದ ಅಗ್ನಿಗಳು ಉತ್ಪನ್ನವಾದುವು. ಈ ಮೂರು ಅಗ್ನಿಗಳಿಂದ ನಲವತ್ತೈದು ಪುತ್ರರು ಉತ್ಪನ್ನರಾದರು. ಇವರುಗಳೊಡನೆ ಪ್ರಧಾನ ಅಗ್ನಿಯೂ ಅವನ ಮೂವರು ಮಕ್ಕಳೂ ಸೇರಿ ನಲವತ್ತೊಂಭತ್ತು ಅಗ್ನಿಗಳಾಗುತ್ತಾರೆ. ಯಜ್ಞಾದಿಗಳಲ್ಲಿ ಬ್ರಹ್ಮವಾದಿಗಳಾದ ಬ್ರಾಹ್ಮಣರು ಈ ಎಲ್ಲ ಅಗ್ನಿಗಳ ಹೆಸರನ್ನೂ ಕೂಗಿ ಆಹುತಿಕೊಡುತ್ತಾರೆ. ಇವರೆಲ್ಲ ಅಗ್ನಿಸಂಜ್ಞಕದೇವತೆಗಳು. ಅಗ್ನಿಷ್ವಾತ್ತಾ, ಬರ್ಹಿಷದ, ಸೋಮಪ, ಆಜ್ಯಪಾ, ಎಂದು ಮುಂತಾಗಿ ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುವ ಪಿತೃಲೋಕವಾಸಿಗಳಾದ ಪಿತೃಗಳಲ್ಲಿ ಸಾಗ್ನಿ (ಅಗ್ನೌಕರಣಕರ್ಮಪರುವ) ಮತ್ತು ಅನಗ್ನಿ (ಅಗ್ನೌಕರಣ ಕರ್ಮವಿಲ್ಲದವರು) ಎಂದು ಎರಡು ಪಂಗಡಗಳಿವೆ. ಇವರ ಹೆಂಡತಿಯು ದಕ್ಷನ ಮಗಳಾದ ಸ್ವಧಾ ಎಂಬುವಳು. ಇವರ ವೀರ್ಯದಿಂದ ವಯುನಾ ಮತ್ತು ಧಾರಿಣಿ ಎಂಬ ಇಬ್ಬರು ಕನ್ಯೆಯರು ಸ್ವಧೆಯ ಹೊಟ್ಟೆಯಲ್ಲಿ ಹುಟ್ಟಿದರು. ಈ ಇಬ್ಬರು ಜ್ಞಾನವಿಜ್ಞಾನಗಳ ಕೊನೆಯನ್ನು ಮುಟ್ಟಿದುದರಿಂದ ಬ್ರಹ್ಮಜ್ಞಾನವನ್ನು ಹೊಂದಿದರು. ಜೀವನ್ಮುಕ್ತರಾದುದರಿಂದ ಇವರುಗಳಿಗೆ ಸಂತಾನವಾಗಲಿಲ್ಲ.

ಮಹಾದೇವನಾದ ಶಂಕರನು ದಕ್ಷಕನ್ಯೆಯಾದ ಸತಿಯನ್ನು ವಿವಾಹವಾದನು. ಆ ಸತಿಯು ಗುಣದಲ್ಲಿಯೂ ಶೀಲದಲ್ಲಿಯೂ ತನಗೆ ಅನುರೂಪ ಪತಿಯನ್ನು ಪಡೆದರೂ ಅವಳಿಗೆ ಮಕ್ಕಳಾಗಲಿಲ್ಲ. ಏಕೆಂದರೆ ಆಕೆಯ ತಂದೆಯಾದ ದಕ್ಷನು ಮಹಾದೇವನನ್ನು ತಿರಸ್ಕರಿಸಿ ಅಕಾರಣವಾಗಿ ನಿಂದೆಮಾಡಿದುದರಿಂದ ಆಕೆಯು ಕ್ರೋಧದಿಂದ ಪರಿತಪಿಸಿ ಯೌವನದಲ್ಲಿಯೇ ಯೋಗಾಗ್ನಿಯಲ್ಲಿ ದೇಹತ್ಯಾಗಮಾಡಿದಳು.

ವಿದುರ–ಗುರುದೇವ ! ಸತಿಯು ದಕ್ಷಪ್ರಜಾಪತಿಯ ಪ್ರಿಯ ಪುತ್ರಿಯಲ್ಲವೇ ? ಆಕೆಯೇಕೆ ತಂದೆಯಿಂದ ತಿರಸ್ಕಾರಹೊಂದಿದಳು ? ಶ್ರೇಷ್ಠ ಶೀಲಯುಕ್ತನಾದ ತನ್ನ ಅಳಿಯನಾದ ಶಂಕರನೊಡನೆ ಏತಕ್ಕೆ ದ್ವೇಷಮಾಡಿಕೊಂಡನು ?

ಮಹಾದೇವನಾರೊಡನೆಯೂ ವೈರಮಾಡಿಕೊಳ್ಳುವವನಲ್ಲ. ಆತನು ಚರಾಚರ ಜಗತ್ತಿಗೆ ಗುರುವು, ಆತ್ಮಾರಾಮನು. ಶಾಂತಿಮಯನು. ಆತನೊಡನೆ

ದಕ್ಷಪ್ರಜಾಪತಿಗೇಕೆ ಶತ್ರುತ್ವವಾಗಬೇಕು? ಈ ಮಾವ ಅಳಿಯಂದಿರ ವೈರದ ಕಥೆಯನ್ನೂ, ಯಾವ ದ್ವೇಷದ ಕಾರಣದಿಂದ ಸತೀದೇವಿಯು ತನ್ನ ಪ್ರಾಣಗಳನ್ನು ಕಳೆದುಕೊಂಡಳೋ ಆ ಕಾರಣದ ಕಥೆಯನ್ನೂ ನನಗೆ ತಿಳಿಸುವ ಕೃಪೆ ಮಾಡಬೇಕು.

"ವಿದುರ! ಬಹು ಕಾಲದ ಹಿಂದಿನ ಮಾತು. ಜಗತ್ತಿನ ಸೃಷ್ಟಿಕರ್ತರುಗಳೆಲ್ಲಾ ಸೇರಿ ಒಂದು ಯಜ್ಞವನ್ನು ಮಾಡಿದರು ಆ ಯಜ್ಞಶಾಲೆಯಲ್ಲಿ ದೊಡ್ಡದೊಡ್ಡ ಋಷಿಗಳೂ ದೇವತೆಗಳೂ ಮುನಿಗಳೂ ಮುನಿಶಿಷ್ಯರೂ ಸಮಸ್ತ ಅಗ್ನಿಗಳೂ ಕುಳಿತಿದ್ದರು.

ಅದೇ ಸಮಯದಲ್ಲಿ ಸೂರ್ಯನು ಆಕಾಶದಲ್ಲಿನ ಅಂಧಕಾರವನ್ನು ತನ್ನ ಪ್ರಚಂಡ ತೇಜಸ್ಸಿನಿಂದ ದೂರಮಾಡುವಂತೆ ಮಹಾತೇಜಸ್ವಿಯಾದ ದಕ್ಷ ಪ್ರಜಾಪತಿಯು ಆ ಮಹಾಸಭೆಯನ್ನು ಪ್ರಕಾಶಪಡಿಸುತ್ತಾ ಪ್ರವೇಶಿಸಿದನು. ಆತನ ತೇಜಸ್ಸಿನಿಂದ ಪ್ರೇರಿತರಾದ ಆ ಸಭಾಸದರೂ ದೇವತೆಗಳೂ ಅಗ್ನಿಗಳೂ ತಮ್ಮ ಆಸನಗಳಿಂದ ಎದ್ದು ಆತನನ್ನು ಗೌರವಿಸಿದರು. ಬ್ರಹ್ಮನೂ ಶಿವನೂ ಏಳಲಿಲ್ಲ. ತಮ್ಮ ತಮ್ಮ ಆಸನಗಳಲ್ಲಿ ಕುಳಿತೇ ಇದ್ದರು. ದಕ್ಷಪ್ರಜಾಪತಿಯು ಆ ಸಭಾಸದರ ಸತ್ಕಾರವನ್ನು ಸಂತೋಷದಿಂದ ಸ್ವೀಕರಿಸಿ ತನ್ನ ತಂದೆಯಾದ ಬ್ರಹ್ಮನನ್ನು ವಂದಿಸಿ ಆತನ ಅಪ್ಪಣೆಯಂತೆ ಆಸನದಲ್ಲಿ ಕುಳಿತುಕೊಂಡನು. ಎಲ್ಲರೂ ಆತನು ಕುಳಿತುಕೊಂಡ ಮೇಲೆ ಕುಳಿತುಕೊಂಡುದನ್ನೂ ಶಿವನು ಮಾತ್ರ ತನ್ನ ಆಸನದಿಂದ ಮೇಲಕ್ಕೇಳದೆ ಎದುರಿಗೆ ಕುಳಿತಿದ್ದುದನ್ನೂ ದಕ್ಷನು ನೋಡಿ ಶಿವನಿಂದ ತನಗೆ ಅನಾದರವೂ ಅಗೌರವವೂ ಆಯಿತೆಂದು ಭಾವಿಸಿ ಅವನನ್ನು ಸುಟ್ಟು ಬೂದಿಮಾಡುವನಂತೆ ದುರುದುರನೆ ನೋಡುತ್ತಾ ಹೇಳಿದನು:—

'ಎಲೈ ಬ್ರಹ್ಮರ್ಷಿಗಳೇ! ದೇವರ್ಷಿಗಳೇ! ಅಗ್ನಿಗಳೇ! ನಾನು ಅಜ್ಞಾನದಿಂದ–ಅಸೂಯೆಯಿಂದ ಮಾತನಾಡುತ್ತಿರುವೆನೆಂದು ಭಾವಿಸಬೇಡಿ. ಸತ್ಪುರುಷರ ಸಂಪ್ರದಾಯವನ್ನು ಅನುಸರಿಸಿ ಮಾತನಾಡುತ್ತಿರುವೆನು. ಈ ಶಿವನು ಲೋಕಪಾಲಕರುಗಳಲ್ಲಿ ಒಬ್ಬನು ಮಾತ್ರ. ಆದರೆ ಈ ಮರ್ಯಾದಾಹೀನನು ಲೋಕಪಾಲಕರ ಕೀರ್ತಿಗೆ ಕಳಂಕ ತಂದಿದ್ದಾನೆ. ಈತನು ಸಜ್ಜನರ

ಮಾರ್ಗವನ್ನು ಅನುಸರಿಸದೆ ಅನುಚಿತವಾದ ಕೆಲಸಮಾಡಿದ್ದಾನೆ. ಈತನ ಕಣ್ಣುಗಳು ಕಪಿಯ ಕಣ್ಣುಗಳಂತೆ ಇವೆ. ನನ್ನ ಮಗಳು ಹರಿಣಲೋಚನೆಯಾಗಿದ್ದಾಳೆ. ಸಾವಿತ್ರೀ ಸದೃಶಳಾದ ನನ್ನ ಮಗಳನ್ನು ಬ್ರಾಹ್ಮಣರ ಮತ್ತು ಅಗ್ನಿಗಳ ಸಾಕ್ಷಿಯಾಗಿ ಈತನಿಗೆ ವಿವಾಹಮಾಡಿಕೊಟ್ಟಿರುವುದರಿಂದ ಒಂದು ದೃಷ್ಟಿಯಿಂದ ನನಗೆ ಶಿಷ್ಯನಂತೆ ಚಿಕ್ಕವನಂತೆ ಭಾವಿಸಲ್ಪಡಬೇಕು. ಈತನು ಸಾಧುಗಳಂತೆ ನಟಿಸಿದರೂ ಈತನ ನಡತೆಯು ಅದಕ್ಕೆ ವಿರೋಧವಾಗಿಯೇ ಇದೆ. ಈತನು ಕರ್ತವ್ಯ ಕರ್ಮಗಳನ್ನು ತ್ಯಾಗಮಾಡಿ ಅಶುಚಿಯಾಗಿಯೇ ಇರುತ್ತಾನೆ. ಈಶ್ವರನೆಂಬ ದುರಭಿಮಾನವಿರುವುದಾದರೂ ಧರ್ಮದ ಮರ್ಯಾದೆಯನ್ನು ಮೀರಿ ನಡೆದಿದ್ದಾನೆ. ನನಗೆ ಇಷ್ಟವಿಲ್ಲದಿದ್ದರೂ ಧನಲೋಭಕ್ಕೆ ಬಲಿಬಿದ್ದ ಬ್ರಾಹ್ಮಣನಂತೆ ನನ್ನ ಮಗಳನ್ನೇನೋ ಈತನಿಗೆ ವಿವಾಹಮಾಡಿಕೊಟ್ಟದ್ದಾಯಿತು. ಭೂತಪ್ರೇತಗಳು ವಾಸಮಾಡುವ ಸ್ಮಶಾನದಲ್ಲಿ ಈತನು ಅವುಗಳೊಡನೆ ಸಂಚರಿಸುತ್ತಾನೆ. ಹುಚ್ಚನಂತೆ ತಲೆಕೆದರಿಕೊಂಡು ದಿಗಂಬರನಾಗಿ ಸಂಚರಿಸುತ್ತಾನೆ. ಒಮ್ಮೊಮ್ಮೆ ನಗುತ್ತಾನೆ. ಒಮ್ಮೊಮ್ಮೆ ಅಳುತ್ತಾನೆ. ಚಿತಾಭಸ್ಮವನ್ನು (ಹೆಣವನ್ನು ಸುಟ್ಟಬೂದಿಯನ್ನು) ಮೈಗೆಲ್ಲಾ ಬಳಿದುಕೊಂಡು (ಮೂಳೆಗಳ ಸರವನ್ನು) ರುಂಡಮಾಲೆಯನ್ನು ಧರಿಸಿಕೊಂಡಿರುವುದರಿಂದ ಹೆಸರಿಗೆ ಮಾತ್ರ ಶಿವನಾದರೂ ಅವನ ಚರ್ಯೆಯೆಲ್ಲಾ ಅಶಿವವೇ (ಅಮಂಗಳವೇ). ತಾಮಸಿ ಪ್ರಕೃತಿಯವರಾದ ಪ್ರಮಥಭೂತಪ್ರೇತಪಿಶಾಚಿ ಸಹವಾಸದಲ್ಲಿಯೇ ಇರುತ್ತಿರುವುದರಿಂದ ಈತನೂ ತಾಮಸಿಯೇ— ಮತ್ತನೇ ಸರಿ. ಈ ಹುಚ್ಚರ ಗುರುವಾದ ದುಷ್ಟನಾದ ಶೌಚಹೀನನಿಗೆ ನಮ್ಮ ತಂದೆಯಾದ ಬ್ರಹ್ಮನ ಆಜ್ಞೆಯಂತೆ ನನ್ನ ಮಗಳನ್ನು ಕೊಡಬೇಕಾಯಿತು. ಇದೊಂದು ದೈವ ದುರ್ವಿಲಾಸವೇ ಸರಿ. ”

ದಕ್ಷನ ಈ ರೀತಿಯಾದ ದುರ್ವಚನಗಳನ್ನು ಕೇಳಿದ ಮೇಲೆಯೂ ಶಿವನು ಸಿಟ್ಟುಮಾಡಿಕೊಳ್ಳಲಿಲ್ಲ. ಹಿಂದಿನಂತೆಯೇ ಕುಳಿತಿದ್ದನು.

ದಕ್ಷನು ಇಷ್ಟಕ್ಕೇ ಸುಮ್ಮನಾಗಲಿಲ್ಲ. ಸಿಟ್ಟಿನಿಂದ ಉರಿದು ಬೀಳುತ್ತಾ ಕೈಯಲ್ಲಿ ನೀರು ತೆಗೆದುಕೊಂಡು “ ದೇವತೆಗಳಲ್ಲಿ ಅಧಮನಾದ ಈ ಶಿವನಿಗೆ ದೇವಯಜ್ಞದಲ್ಲಿ ಇಂದ್ರ ಉಪೇಂದ್ರಾದಿಗಳಂತೆ ಹವಿರ್ಭಾಗವಿಲ್ಲದೆ ಹೋಗಲಿ ”

ಎಂದು ಶಾಪಕೊಟ್ಟನು. ಸಭಾಸದರೆಲ್ಲಾ ಬೇಡ ಬೇಡವೆಂದು ತಡೆಯುತ್ತಿದ್ದರೂ ಕ್ರೋಧಪರವಶನಾದ ಆತನು ಶಾಪವನ್ನು ಕೊಟ್ಟು ತನ್ನ ಮನೆಗೆ ಹೊರಟೇಬಿಟ್ಟನು. ಶಿವನ ಸೇವಕರಲ್ಲಿ ಮುಖ್ಯನಾದ ನಂದೀಶ್ವರನು ಶಿವನಿಗೆ ಕೊಡಲ್ಪಟ್ಟ ಶಾಪದಿಂದ ಕ್ರುದ್ಧನಾಗಿ ಸಿಟ್ಟಿನಿಂದ ಕೆಂಪೇರಿದ ಕಣ್ಣುಳ್ಳವನಾಗಿ ದಕ್ಷನಿಗೂ ಶಿವನನ್ನನುಸರಿಸಿದ ಬ್ರಾಹ್ಮಣರಿಗೂ ಈ ರೀತಿ ಪ್ರತಿಶಾಪವಿತ್ತನು.

" ಭಗವಾನ್ ಶಂಕರನು ಯಾರಿಗೂ ದ್ರೋಹಮಾಡುವವನಲ್ಲ. ಅನ್ಯಾಯ ಮಾಡುವವನಲ್ಲ. ಭೇದವೃಷ್ಟಿಯುಳ್ಳ ಯಾವ ಜನರು ಈ ದಕ್ಷನ ಮಾತು ಕೇಳಿಕೊಂಡು ಅವಿವೇಕದಿಂದ ಶಿವದ್ರೋಹಮಾಡುತ್ತಾರೆಯೋ ಅವರು ನನ್ನ ಶಾಪದಿಂದ ಪರಮ ತತ್ತ್ವಜ್ಞಾನಮಾರ್ಗದಿಂದ ವಿಮುಖರಾಗಲಿ. ಇವರು ಕಪಟ ಧರ್ಮಯುಕ್ತರಾಗಿ ಗೃಹಸ್ಥಾಶ್ರಮದಲ್ಲಿಯೇ ಆಸಕ್ತರಾಗಲಿ. ಚಾತುರ್ಮಾಸ್ಯ ಯಜ್ಞಮಾಡುವವರಿಗೆ ಅಕ್ಷಯ ಪುಣ್ಯ ಅಥವಾ ಸ್ವರ್ಗಸುಖವು ಲಭಿಸುವುದು ಮುಂತಾದ ಶ್ರುತಿವಾಕ್ಯ (ದುರ್ಬಲಶ್ರುತಿ) ಗಳಿಂದ ಮೋಹಿತ ರಾಗಿರುವುದರಿಂದ ಕರ್ಮಕಾಂಡದಲ್ಲಿಯೇ ಬಿದ್ದುಕೊಳ್ಳುತ್ತಾ ಜ್ಞಾನಮಾರ್ಗಕ್ಕೆ ದೂರವಾಗಿರಲಿ ! ಈ ದಕ್ಷನು ದೇಹವನ್ನೇ ಆತ್ಮವೆಂದು ತಿಳಿದು ಆತ್ಮಗತಿಯನ್ನು ಮರೆತಿರುವುದರಿಂದ ಪಶುಗಳಂತೆ ಸ್ತ್ರೀಕಾಮನಾಗಿ ಪ್ರವೃತ್ತಿ ಮಾರ್ಗದಲ್ಲೇ ನಿಂತು ಸೃಷ್ಟಿಕಾರ್ಯದಲ್ಲೇ ನಿಂತಿರುವುದರಿಂದ ಈತನಿಗೆ ಕುರಿಯಂತೆ ಮುಖವಾಗಲಿ. ಈ ದಕ್ಷನು ಅವಿದ್ಯೆಯನ್ನು (ಕರ್ಮಕಾಂಡವನ್ನು) ವಿದ್ಯೆಯೆಂದು ತತ್ತ್ವಜ್ಞಾನವೆಂದು ಭ್ರಮಿಸಿರುವುದರಿಂದ ಈತನು ಜಡ ಪಶುವಿನಂತಿರುವನು. ಶಿವನನ್ನು ನಿಂದಿಸುವ ಈತನ ಅನುಯಾಯಿಗಳು ಜನ್ಮ ಮರಣ ರೂಪವಾದ ಸಂಸಾರ ಚಕ್ರದಲ್ಲಿ ಸಿಕ್ಕಿ ಬಾರಿಬಾರಿಗೂ ತೊಳಲುತ್ತಿರಲಿ. ವೇದದ ಪುಷ್ಪಿತ ವಾಕ್ಯಗಳನ್ನು ( ಹಣ್ಣುಕಾಯಿಗಳಿಲ್ಲದ ಬರಿ ಹೂಗಳಂತಿರುವ ನಿಷ್ಫಲವಾಕ್ಯಗಳನ್ನು ಸ್ವರ್ಗಾದಿಸುಖಗಳೇ ಶಾಶ್ವತಗಳೆಂಬ ಕಾಮ್ಯ ಫಲಗಳನ್ನು ಕೊಡುವ ವಾಕ್ಯಗಳನ್ನು ) ನಂಬಿ ಅವುಗಳ ಮಧುರಗಂಧದಿಂದ ಮೋಹಿತರಾದಈ ಶಿವದ್ರೋಹಿಗಳ ಮನಸ್ಸು ಮೋಹಸಾಗರದಲ್ಲಿ ಮುಳುಗಿ ತೇಲುತ್ತಿರಲಿ. ತತ್ತ್ವಜ್ಞಾನವಿಲ್ಲದೆ ಕಾಮ್ಯಕರ್ಮಗಳಲ್ಲಿಯೇ ಬಿದ್ದು ಭ್ರಮಿಸುತ್ತಿರಲಿ. ಈ ಬ್ರಾಹ್ಮಣರು ಸರ್ವಭಕ್ಷಿಗಳಾಗಲಿ. ಹೊಟ್ಟೆಯ ಪಾಡಿ

ಗಾಗಿಯೇ ವೇದಾಧ್ಯಯನ ತಪೋವ್ರತಗಳನ್ನು ಮಾಡಿಕೊಂಡು ಜೀವಿಸಲಿ. ಇವರ ಪ್ರೇಮವು-ಶ್ರದ್ಧೆಯು ಧನಸಂಪಾದನೆಗಾಗಿದ್ದು ಇಂದ್ರಿಯ ಸುಖಕ್ಕಾಗಿ ದೇಹಾಭಿಮಾನದಿಂದ ಕೂಡಿದವರಾಗಿ ಯಾಚಕ ವೃತ್ತಿಯನ್ನನುಸರಿಸಲಿ ! ”

ನಂದೀಶ್ವರನು ಹೀಗೆ ಬ್ರಾಹ್ಮಣವಂಶಕ್ಕೆ ಶಾಪಕೊಡುತ್ತಿರವುದನ್ನು ನೋಡಿ ಭೃಗು ಋಷಿಗೆ ತಡೆಯಲಾಗಲಿಲ್ಲ. ಆತನೂ ಸಹ “ ಶಿವಭಕ್ತರಾದವರು—ಅವರ ಭಕ್ತರಾದವರು ಪವಿತ್ರಾಚರಣೆಯಿಲ್ಲದೆ ಸಚ್ಛಾಸ್ತ್ರಗಳಿಗೆ ವಿರುದ್ಧವಾದ ವಾಮಮಾರ್ಗವನ್ನು ಅನುಸರಿಸಲಿ. ಪಾಖಂಡಿಗಳಾಗಲಿ. ಜಟಾ ಭಸ್ಮಮೂಳೆಗಳಿಂದಲಂಕೃತರಾಗಿ ಸುರಾ ಆಸವ ಮುಂತಾದ ನಿಂದನೀಯ ವಸ್ತುಗಳನ್ನೇ ಶ್ರೇಷ್ಠವೆಂದು ಉಪಯೋಗಿಸುವ ಶಿವದೀಕ್ಷೆಯಲ್ಲಿ ನಿರತರಾಗಲಿ. ವರ್ಣಾಶ್ರಮಾಚಾರಗಳನ್ನು ಉಪದೇಶಿಸುವುದರಿಂದ ಧರ್ಮದ ಮರ್ಯಾದೆಯನ್ನು ಉಳಿಸಲು ಶಕ್ತವಾದುದು ವೇದ ಒಂದೇ ಆದುದರಿಂದ ವೇದವೇ ಬ್ರಹ್ಮವು, ವೇದರೂಪವಾದ ಬ್ರಹ್ಮವನ್ನು ಅನುಸರಿಸುವ ಬ್ರಾಹ್ಮಣರನ್ನು ನೀನು ನಿಂದಿಸುತ್ತಿರುವುದರಿಂದ ನೀನೂ ಪಾಷಂಡಿಯಾಗು. ಈ ವೇದ ಮಾರ್ಗವೇ ಜಗತ್ಕಲ್ಯಾಣಕಾರಕವಾದುದರಿಂದ ಎಲ್ಲರೂ ಇದನ್ನೇ ಅನುಸರಿಸುತ್ತಾರೆ. ಈ ವೇದಧರ್ಮದ ಪ್ರಭುವು ಜನಾರ್ದನನು. ಪರಮ ಶುದ್ಧವಾದ ಸನಾತನ ಧರ್ಮವನ್ನು ಬ್ರಹ್ಮಮಯವಾದ ವೇದಧರ್ಮವನ್ನು ನೀವುಗಳು ನಿಂದಿಸುತ್ತಿರುವುದರಿಂದ ನಿಮ್ಮ ಇಷ್ಟದೈವವಾದ ಭೂತನಾಥನಾದ ಶಿವನು ಹೋಗುವ ಮಾರ್ಗದಲ್ಲಿಯೇ ನೀವು ನಡೆದು ಪಾಷಂಡಿಗಳಾಗಿರಿ. ” ಎಂದ್ರು ಯತ್ನವಿಲ್ಲದೆ ಬ್ರಹ್ಮಶಾಪವನ್ನು ಕೊಟ್ಟನು ಹೀಗೆ ಭೃಗುವು ಶಾಪಕೊಡಲು ಭಗವಾನ್ ಶಿವನು ಉದಾಸನಾಗಿ ತನ್ನ ಪಾರ್ಷದಗಣಗಳೊಡನೆ ಅಲ್ಲಿಂದ ಎದ್ದು ಹೊರಟು ಹೋದನು. ನಂತರ ಅಲ್ಲಿ ಯಜ್ಞಮಾಡಲು ಸೇರಿದ್ದವರೆಲ್ಲರೂ ಸರ್ವಶ್ರೇಷ್ಠ ಹರಿಯನ್ನು ಮುಂದುಮಾಡಿಕೊಂಡು ಆತನ ಪೂಜಾಪೂರ್ವಕವಾಗಿ ಸಹಸ್ರವರ್ಷಪರ್ಯಂತವೂ ಆ ಮಹಾಯಜ್ಞವನ್ನು ಅನುಷ್ಠಾನಮಾಡಿ ಗಂಗಾ ಯಮುನಾ ನದಿಗಳ ಸಂಗಮಸ್ಥಳವಾದ ಪವಿತ್ರ ಪ್ರಯಾಗತೀರ್ಥದಲ್ಲಿ ಯಜ್ಞದ ಕೊನೆಯ ಅಂಗವಾದ ಅವಭೃಥವನ್ನು ಮಾಡಿ ಶುದ್ಧಚಿತ್ತರಾಗಿ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. † †

# ದ್ವಾವಿಂಶ ಕಿರಣ

## ಸತಿಯು ತಂದೆಯ ಮನೆಗೆ ಹೋಗಲು ಇಷ್ಟಪಡುವಿಕೆ

ಮೈತ್ರೇಯರು ಹೇಳುತ್ತಾರೆ:—

ಹೀಗೆ ಮನಸ್ಸಿನಲ್ಲಿ ಪರಸ್ಪರ ದ್ವೇಷಭಾವವನ್ನು ಹೊಂದಿರುವ ದಕ್ಷನೂ ಶಿವನೂ ಬಹಳ ಕಾಲ ಕಳೆದರು ಅಂದರೆ ದಕ್ಷನಿಗೆ ತನ್ನದು ತಪ್ಪೆಂದು ತಿಳುವಳಿಕೆ ಬರಲೂ ಇಲ್ಲ, ಶಿವನು ಅವನನ್ನು ಪುನಃ ಸಂಧಿಸಲೂ ಇಲ್ಲ.

ಪಿತಾಮಹನಾದ ಬ್ರಹ್ಮನು ಒಂದಾವೃತ್ತಿ ದಕ್ಷನನ್ನು ಪ್ರಜಾಪತಿಗಳಿಗೆ ಅಧಿಪತಿಯನ್ನಾಗಿ ಮಾಡಿದನು. ಈ ಶ್ರೇಷ್ಠ ಪದವಿಯನ್ನು ಹೊಂದಿದ ನಂತರ ದಕ್ಷನಿಗೆ ಮತ್ತೂ ಅಭಿಮಾನವು ಹೆಚ್ಚಿತು. ಆತನು ತನ್ನ ದುರಭಿಮಾನದಿಂದ ಶಿವ ಮುಂತಾದವರನ್ನು ಕರೆಯದೆ ವಾಜಪೇಯ ಯಾಗವನ್ನು ಮಾಡಿದನು. ನಂತರ **ಬೃಹಸ್ಪತಿ ಸವ** ಎಂಬ ಯಜ್ಞವನ್ನು ಆರಂಭಿಸಿದನು. ಆ ಯಜ್ಞದಲ್ಲಿ ಪಿತೃಗಳು ಬ್ರಹ್ಮರ್ಷಿಗಳು ದೇವರ್ಷಿಗಳು ಆಹ್ವಾನವನ್ನು ಹೊಂದಿ ತಮ್ಮ ತಮ್ಮ ಪತ್ನಿಯರೊಡನೆ ಹೋದರು. ದಕ್ಷನು ಅವರೆಲ್ಲರಿಗೂ ಉಚಿತವಾದ ಸತ್ಕಾರವನ್ನು ಮಾಡಿದನು.

ಆಕಾಶಮಾರ್ಗದಲ್ಲಿ ಹೋಗುತ್ತಿರುವ ದೇವತೆಗಳು ದಕ್ಷನ ಯಜ್ಞದ ವಿಷಯವಾಗಿ ಮಾತನಾಡಿಕೊಂಡು ಹೋಗುತ್ತಿದ್ದುದರಿಂದ ಸತಿಗೆ ತನ್ನ ತಂದೆಯು ಮಾಡುತ್ತಿರುವ ಯಜ್ಞದ ವಿಷಯವು ಗೊತ್ತಾಯಿತು. ಯಕ್ಷ ಗಂಧರ್ವಾದಿ ಉಪದೇವತಾ ಸ್ತ್ರೀಯರು ತಮ್ಮ ತಮ್ಮ ಪತಿಗಳೊಡನೆ ವಿಮಾನಗಳಲ್ಲಿ ಕುಳಿತು ದಕ್ಷಯಜ್ಞಕ್ಕೆ ಹೋಗುತ್ತಿರುವುದನ್ನೂ, ಅವರು ತಮ್ಮ ಕೊರಳುಗಳಲ್ಲಿ ದಿವ್ಯರತ್ನಮಾಲೆಗಳನ್ನೂ ದಿವ್ಯಾಭರಣಗಳನ್ನೂ ಧರಿಸಿ ಅಲಂಕರಿಸಿಕೊಂಡಿರುವುದನ್ನೂ, ಆ ಚಂಚಲ ನಯನೆಯರು ಕಿವಿಗಳಲ್ಲಿ ದಿವ್ಯಕುಂಡಲಗಳಿಂದಲಂಕೃತರಾಗಿರುವುದನ್ನೂ ನೋಡಿದೊಡನೆ ಸತಿಗೂ ಸಹ ತನ್ನ ಪತಿಯೊಡನೆ ತಂದೆಯ ಮನೆಗೆ ಹೋಗಬೇಕೆಂದು ಮನಸ್ಸಾಯಿತು. ತನ್ನ ಪತಿಯಾದ ಭೂತನಾಥನೊಡನೆ ಈ ರೀತಿ ಹೇಳಿದಳು :—

" ಪತಿದೇವ ! ತಮ್ಮ ಮಾವನಾದ ದಕ್ಷಪ್ರಜಾಪತಿಯು ಯಜ್ಞರೂಪವಾದ ದೊಡ್ಡ ಉತ್ಸವವನ್ನು ಆರಂಭಿಸಿದ್ದಾನೆ. ಈ ದೇವತೆಗಳೆಲ್ಲಾ ಹೇಗೆ ಹೋಗುತ್ತಿರುವರೆಂಬುದನ್ನು ನೋಡಿರಿ. ತಾವು ಇಷ್ಟಪಟ್ಟರೆ ನಾವೂ ಅಲ್ಲಿಗೆ ಹೋಗೋಣವೆಂದು ನನಗೆ ಮನಸ್ಸಾಗುತ್ತಿದೆ. ತಂದೆತಾಯಿಗಳಿಂದ ಹೊಂದಬಹುದಾದ ಸತ್ಕಾರ ಗೌರವಗಳನ್ನು ಪಡೆಯಬೇಕೆಂದು ನನಗೂ ಇಷ್ಟವಾಗುತ್ತಿದೆ. ನಾಥ ! ನಾನು ಅಲ್ಲಿಗೆ ಹೋಗಿ ನನ್ನ ಅಕ್ಕತಂಗಿಯರನ್ನು ಅವರವರ ಪತಿಗಳೊಡನೆ ನೋಡಬೇಕೆಂದಿದ್ದೇನೆ. ನನ್ನ ತಾಯಿಯನ್ನೂ ಇವರೆಲ್ಲರನ್ನೂ ನೋಡಿ ಬಹಳ ದಿನಗಳಾದುವು. ಅಲ್ಲಿಗೆ ಹೋದರೆ ಮಹರ್ಷಿಗಳಿಂದ ಮಾಡಲ್ಪಡುವ ಶ್ರೇಷ್ಠವಾದ ಆ ಯಜ್ಞವನ್ನು ನೋಡುವ ಅವಕಾಶವು ನನಗೂ ದೊರೆಯುವುದು. ಭಗವನ್ ! ತಮಗೇನೂ ಅಲ್ಲಿಗೆ ಹೋಗಿ ನೋಡುವ ಉತ್ಸುಕತೆ ಇಲ್ಲದಿರಬಹುದು. ತಮ್ಮ ಮಾಯೆಯಿಂದ ಈ ತ್ರಿಗುಣಾತ್ಮಕವಾದ ಜಗತ್ತು ರಚಿತವಾಗಿ ತಮ್ಮೊಳಗೇ ಬೆಳಗುತ್ತಿದೆಯಾದುದರಿಂದ ತಮಗೆ ಯಾವುದನ್ನೂ ನೋಡುವ ಕುತೂಹಲವಿರಲಾರದೆಂಬುದು ಸರಿಯೇ. ಆದರೆ ನಾನು ಹೆಂಗಸು. ತಮ್ಮ ತತ್ತ್ವವನ್ನು ನಾನು ತಿಳಿಯಲಶಕ್ತಳು. ನನ್ನ ಹುಟ್ಟಿದ ಮನೆಯನ್ನು ನೋಡಬೇಕೆಂಬ ಆಕಾಂಕ್ಷೆಯು ನನ್ನನ್ನು ಬಾಧಿಸುತ್ತಿದೆ. ಹೇ ನೀಲಕಂಠ ! ಅಲ್ಲಿ ಆಕಾಶಮಾರ್ಗದಲ್ಲಿ ನೋಡಿರಿ. ತಮ್ಮ ತಮ್ಮ ಪತಿಗಳೊಡನೆ ದೇವತಾ ಸ್ತ್ರೀಯರು ಪ್ರಯಾಣಮಾಡುತ್ತಿರುವ ಶ್ವೇತವರ್ಣದ ವಿಮಾನಗಳು ಆಕಾಶಮಾರ್ಗದಲ್ಲಿ ರಾಜಹಂಸಗಳ ಗುಂಪಿನಂತೆ ಹೋಗುತ್ತಿರುವುವಲ್ಲವೆ ? ಜನ್ಮರಹಿತರಾದ ತಮಗೆ ಸ್ವಜನವೂ ಇಲ್ಲ ; ಪರಜನವೂ ಇಲ್ಲ. ಆದರೆ ತಂದೆಯ ಮನೆಗೆ ಹೋಗದಿದ್ದರೆ ನನ್ನ ಮನಸ್ಸು ನಿಲ್ಲದು. ಇತರ ಹೆಂಗಸರು ನಮ್ಮ ತಂದೆಯ ಮನೆಗೆ ಹೋಗುತ್ತಿರುವುದನ್ನು ನೋಡುತ್ತಿರುವ ಮಗಳಾದ ನನಗೆ ತಂದೆಯ ಮನೆಗೆ ಹೋಗದಿರುವುದು ಸಾಧ್ಯವೇ ? ತಾವೇ ಯೋಚಿಸಬೇಕು. ಅವರೆಲ್ಲಾ ಆಹ್ವಾನದಿಂದ ಹೋಗುತ್ತಿದ್ದಾರೆ. ನಮಗೆ ಬರಬೇಕೆಂದು ಯಾವ ಕರೆಯೂ ಬಂದಿಲ್ಲವೆಂದು ಹೇಳುವಿರಾದರೆ ಕರೆಸಿಕೊಳ್ಳದೆಯೇ ತಂದೆ ಪತಿ ಗುರು ಮಿತ್ರರ ಮನೆಗೆ ಹೋಗಬಹುದೆಂದು ದೊಡ್ಡವರು ಹೇಳುವುದಿಲ್ಲವೆ ?

ದೇವ ! ದಯಾಳುವಾದ ತಾವು ನನ್ನ ಮೇಲೆ ಕರುಣೆ ಇಟ್ಟು ನನ್ನ ಪ್ರಾರ್ಥನೆಯನ್ನು ನಡೆಸಿಕೊಡಬೇಕು. ತಾವು ಪರಮ ಜ್ಞಾನಿಗಳಾದಾಗ್ಯೂ ನನ್ನ ಮೇಲೆ ಅತ್ಯಂತ ದಯೆಯಿಂದ ತಮ್ಮ ದೇಹದಲ್ಲಿ ಅರ್ಧ ಸ್ಥಾನವನ್ನು ಕೊಟ್ಟಿದ್ದೀರಿ. ಅನುಗ್ರಹಿಸಿ ನನಗೆ ಅಲ್ಲಿಗೆ ಹೋಗಲು ಅನುಜ್ಞೆ ಕೊಡಬೇಕು."

ಸತಿಯ ಮಾತುಗಳನ್ನು ಕೇಳಿದ ನಂತರ ಶಿವನಿಗೆ ದಕ್ಷಪ್ರಜಾಪತಿ ದಲ್ಲಿ ಆತನು ಹೇಳಿದ ಮರ್ಮಭೇದಕ ಮಾತುಗಳ ಸ್ಮರಣೆ ಬಂದಿತು. ನಗುತ್ತಾ ಹೇಳಿದನು:—

"ಸುಂದರಿ ! ಕರೆಸಿಕೊಳ್ಳದೆಯೇ ಬಂಧುಗಳ ಮನೆಗೆ ಹೋಗಬಹುದೆಂಬ ನಿನ್ನ ಮಾತು ನಿಜವೇ. ಆದರೆ ಆ ಬಂಧುವು ಪ್ರಬಲ ದೇಹಾಭಿಮಾನದಿಂದ ಹುಟ್ಟಿದ ಕ್ರೋಧದಿಂದ ದೋಷಯುಕ್ತ ದೃಷ್ಟಿಯಿಂದ ನಿನ್ನನ್ನು ನೋಡದೇ ಇದ್ದರೆ ಮಾತ್ರ ಅಂತಹ ಬಂಧುವಿನ ಮನೆಗೆ ಕರೆಸಿಕೊಳ್ಳದೇ ಹೋಗಬಹುದು. ವಿದ್ಯೆ ತಪಸ್ಸು ಧನ ಶರೀರ ವಯಸ್ಸು ಕುಲ ಈ ಆರು ಸಜ್ಜನರಲ್ಲಿ ಗುಣಗಳಾಗುತ್ತವೆ. ಅವುಗಳೇ ದುರ್ಜನರಲ್ಲಿ ದೋಷರೂಪವಾಗುತ್ತವೆ. ಏಕೆಂದರೆ ಈ ಆರು ಅನುಕೂಲಗಳಿಂದ ಅಸಾಧುಗಳ ವಿವೇಕವೂ ಜ್ಞಾನವೂ ನಾಶವಾಗುವುವು. ದುರಭಿಮಾನದಿಂದ ಅವರ ನೋಟವು ದೋಷಯುಕ್ತವಾಗುವುದು. ನಷ್ಟಬುದ್ಧಿಗಳಾದ ಅವರು ಮಹಾತ್ಮರಾದ ಸಾಧುಗಳಲ್ಲಿ ಗುಣವನ್ನೂ ತೇಜಸ್ಸನ್ನೂ ನೋಡಲಾರರು. ಇಂತಹ ಕಲುಷಿತ ಚಿತ್ತರಾದ ಜನಗಳ ಮನೆಗೆ ಸಂಬಂಧಿಗಳೆಂಬ ಭಾವದಿಂದ ಮರೆತಾದರೂ ಹೋಗಬಾರದು. ಅವರು ಹುಬ್ಬುಗಂಟಿಕ್ಕಿಕೊಂಡು ಕಣ್ಣು ಕೆಂಪಗೆಮಾಡಿಕೊಂಡು ಕುಟಿಲ ದೃಷ್ಟಿಯಿಂದ ನಮ್ಮನ್ನು ನೋಡುವರು. ಕುಟಿಲಬುದ್ಧಿಗಳಾದ ಸ್ವಜನರ ಕುವಾಕ್ಯರೂಪ ಬಾಣಗಳಿಂದ ಮರ್ಮಸ್ಥಾನಕ್ಕೆ ಹೊಡೆಯಲ್ಪಟ್ಟಾಗ ಉಂಟಾಗುವ ಸಂಕಟವು ಶತ್ರುಗಳ ಬಾಣಗಳಿಂದ ಹೊಡೆಯಲ್ಪಟ್ಟು ಮೃತ್ಯುಶಯ್ಯೆಯಲ್ಲಿ ಮಲಗುವ ಸಂಕಟಕ್ಕಿಂತಲೂ ಎಷ್ಟೋ ಪಾಲು ಹೆಚ್ಚಿನದಾಗುತ್ತದೆ. ಎಲೈ ಸುಂದರಿಯೇ ! ನೀನು ದಕ್ಷನ ಪ್ರೇಮಪುತ್ರಿಯೆಂಬುದು ನಿಶ್ಚಯವೇ ಆದರೂ ನೀನು ನನ್ನ ಹೆಂಡತಿಯೆಂಬುದನ್ನು ಜ್ಞಾಪಿಸಿಕೊಳ್ಳಬೇಕು. ನಿನ್ನ ತಂದೆಯು ನನ್ನನ್ನು ದ್ವೇಷಿಸುತ್ತಿರುವನಾದುದರಿಂದ ಆತನು ನಿನ್ನನ್ನು ಆದರದಿಂದ ಕಾಣಲಾರನು. ಪ್ರಿಯೆ ! ಅಭಿಮಾನರಹಿತರಾದವರ ಉನ್ನತಿಯಿಂದ ದಕ್ಷನಂತಹ

ದೇಹಾಭಿಮಾನಿಗೆ ಅಸೂಯೆಯು ಹುಟ್ಟಿ ಅವರ ಹೃದಯವನ್ನು ಸುಡುತ್ತಿರುತ್ತದೆ. ಆದರಿಂದ ಅವರು ಮಿತಿಮೀರಿದ ದುಃಖವನ್ನು ಅನುಭವಿಸುತ್ತಾರೆ. ಅಹಂಕಾರರಹಿತರಾದವರ ಸುಖ ಸೌಖ್ಯಗಳಿಂದ ಅಸೂಯೆಪಟ್ಟು ಎಷ್ಟು ಪ್ರಯತ್ನಪಟ್ಟರೂ ಅವರಿಗೆ ಸರಿಸಮಾನರಾಗಲಾರರು. ಅಸುರರು ವಿಷ್ಣುವಿನ ಸಮಕ್ಕೆ ಬರಲಾರದೆ ಅವನಲ್ಲಿ ದ್ವೇಷಮಾಡುವಂತೆ ನಿಮ್ಮ ತಂದೆಯೂ ನನ್ನಲ್ಲಿ ವೈರಭಾವವನ್ನು ಬೆಳಸಿದ್ದಾನೆ. ನೀನು ಅವನಿಗೆ ಪ್ರಣಾಮಮಾಡಲಿಲ್ಲವೆಂದು ಕೋಪಗೊಂಡಿರುವನೆಂದು ಹೇಳುವುದಾದರೆ ಎಲ್ಲೈ ಸುಮಧ್ಯಮೆ! ಜ್ಞಾನಿಗಳು ಸರ್ವವ್ಯಾಪಿಯಾದ ಈಶ್ವರನನ್ನು ಸರ್ವರ ಹೃದಯದಲ್ಲಿಯೂ ನೋಡುತ್ತಾ ಅವನಿಗೇ ಮನಸಾ ಪ್ರಣಾಮಮಾಡುತ್ತಿರುವುದರಿಂದ ದೇಹಾಭಿಮಾನಿಗಳಾದ ಪುರುಷರಿಗೆ ಕುಳಿತಲ್ಲಿಂದ ಎದ್ದು ಪ್ರಣಾಮಮಾಡುವುದಿಲ್ಲ. ಆದುದರಿಂದ ನಾನೂ ಹಾಗೆಯೇ ಮಾಡಿದ್ದೇನೆ. ವಾಸುದೇವನಾದ * ಅಧೋಕ್ಷಜ † ಭಗವದ್ರೂಪದಿಂದ ನಾನು ಅಭ್ಯಾಗತನನ್ನು ನಮಸ್ಕರಿಸುತ್ತೇನೆಂಬುದಲ್ಲ. ವಿಶುದ್ಧ ಸತ್ವಗುಣರೂಪ ಅಂತಃಕರಣವೇ ವಸುದೇವನು. ಅದರಲ್ಲಿರುವ ಪ್ರಕಾಶಮಾನನಾದ ದೇವನೇ ವಾಸುದೇವನು. ಆತನನ್ನು ಸದಾ ಮನಸ್ಸಿನಲ್ಲಿ ಉಪಾಸನೆಯನ್ನು ಮಾಡುತ್ತಿರುವೆನು ಪ್ರಿಯೆ! ಆ ದಕ್ಷನು ನಿನಗೆ ಶರೀರವನ್ನು ಕೊಟ್ಟ ತಂದೆಯಾದರೂ ನೀನು ಅವನನ್ನು ನೋಡಲು ಅವನ ಮನೆಗೆ ಹೋಗಬೇಡ. ಅವನು ನನ್ನ ಮೇಲೆ ದ್ವೇಷಮಾಡುತ್ತಿದ್ದಾನೆ.

---

* ವಾಸಯತಿ ದೇವಮಿತಿ ವಾಸುದೇವಃ । ಅಥವಾ ವಸತ್ಯಸ್ಮಿನ್ನಿತಿ ವಾಸುಃ । ದೀವ್ಯತೇ ದ್ಯೋತತೇ ಇತಿ ದೇವಃ—ಶರೀರವನ್ನು ಬೆಳಗಿಸುವ ಆತ್ಮನಲ್ಲಿ ಯಾವನು ವಾಸಮಾಡುವನೋ ಆ ಪರಮಾತ್ಮನು ವಾಸುದೇವನು ಅಥವಾ ಶರೀರದಲ್ಲಿ ವಾಸಮಾಡುವ ಜೀವನನ್ನು ಬೆಳಗಿಸುವ ದೇವನು ವಾಸುದೇವನು. ಸತ್ವಗುಣ ಅಥವಾ ಪುಣ್ಯಕರ್ಮರೂಪ ಸಾಧನದಿಂದ ಬೆಳಗುವನಾವನೋ ಆ ದೇವನು ವಾಸುದೇವನು.

† ಅಧೋಭೂತೇಷು ಪ್ರತ್ಯಾಹೃತೇಷು ಅಕ್ಷೇಷು ಇಂದ್ರಿಯೇಷು ಜಾಯತೇ ಪ್ರಕಾಶ್ಯತೇ ಇತಿ ಅಧೋಕ್ಷಜಃ—ವಿಷಯವ್ಯಾಪಾರದಿಂದ ಕೆಳಕ್ಕೆ ಬಿದ್ದಿರುವ ಅಥವಾ ಪ್ರತ್ಯಾಹೃತಗಳಾದ ಇಂದ್ರಿಯಗಳಲ್ಲಿ ಯಾರು ಪ್ರಕಾಶಿತನಾಗಿ ಜೀವನನ್ನು ಉದ್ಧರಿಸಿ ಮುಕ್ತಿಯನ್ನು ಕೊಡುವನೋ ಆ ಈಶ್ವರನೇ ಅಧೋಕ್ಷಜನು.

ವಿಶ್ವಸ್ರಷ್ಟ್ರಾಯಜ್ಞದಲ್ಲಿ ದುರ್ವಾಕ್ಯಗಳನ್ನಾಡಿ ನಿರಪರಾಧಿಯಾದ ನನ್ನನ್ನು ತಿರಸ್ಕಾರಮಾಡಿದ್ದಾನೆ. ಆದುದರಿಂದ ಪತಿದ್ರೋಹಿಂಯಾದ ದಕ್ಷನ ಮತ್ತು ಅವನ ಅನುಯಾಯಿಗಳ ಮುಖವನ್ನೂ ನೋಡುವುದು ಸಹ ನಿನಗೆ ಯೋಗ್ಯವಲ್ಲ.

ನೀನು ನನ್ನ ಮಾತುಗಳನ್ನು ನಿರ್ಲಕ್ಷಿಸಿ ಅಲ್ಲಿಗೆ ಹೋದರೆ ನಿನಗೆ ಕಲ್ಯಾಣವಾಗಲಾರದು. ಏಕೆಂದರೆ ಸುಪ್ರತಿಷ್ಠಿತರಾದವರಿಗೆ ಸ್ವಜನರಿಂದ ಆಗುವ ನಿರಾದರವು ಮರಣಕ್ಕೆ ಕಾರಣವಾಗುವುದು."

## ಸತಿಯ ದೇಹತ್ಯಾಗ

ಭಗವಾನ್ ಶಿವನು ಇಷ್ಟು ಹೇಳಿ ಸುಮ್ಮನಾದನು. ಹೋಗುವುದಕ್ಕೆ ಅನುಮತಿಕೊಟ್ಟರೂ ಅಥವಾ ಬಲವಂತವಾಗಿ ಅವಳನ್ನು ತಡೆದು ನಿಲ್ಲಿಸಿದರೂ ಸತಿಯ ದೇಹತ್ಯಾಗದ ಸಂಭವವೇ ಹೆಚ್ಚಾಗಿದೆ ಎಂದು ಮನಸ್ಸಿನಲ್ಲಿಯೇ ಯೋಚಿಸಲಾರಂಭಿಸಿದನು. ಸತಿಯೂ ಸಹ ತೌರುಮನೆಗೆ ಹೋಗ ಬೇಕೆಂಬ ಉತ್ಸುಕತೆಯು ಜಾಸ್ತಿಯಾಗಿ ಒಮ್ಮೆ ಹೊರಕ್ಕೆ ಹೋಗುವಳು. ಒಮ್ಮೆ ಒಳಕ್ಕೆ ಬರುವಳು. ಹೀಗೆ ಒಳಗಿನಿಂದ ಹೊರಕ್ಕೆ ಹೊರಗಿನಿಂದ ಒಳಕ್ಕೆ ತಿರುಗಾಡುತ್ತಿದ್ದುದರಿಂದ ಒಬ್ಬಳೇ ಎರಡು ರೂಪಗಳನ್ನು ಧರಿಸಿದ್ದಂತೆ ಕಾಣುತ್ತಿದ್ದಳು. ನೆಂಟರನ್ನು ನೋಡಲು ಹೋಗುವ ಅವಕಾಶವಿಲ್ಲದಿದ್ದು ದರಿಂದ ನಿರಾಶಳಾಗಿ ಅಳಲಾರಂಭಿಸಿದಳು. ಅಶ್ರುಧಾರೆಯು ಕಣ್ಣುಗಳಿಂದ ಹರಿಯಲಾರಂಭಿಸಿತು. ಯಾವ ಪರಮ ಪುರುಷನಾದ ಶಿವನಿಗೆ ಸಮಾನರೂ ಅಧಿಕರೂ ಇಲ್ಲವೋ ಅಂತಹ ತನ್ನ ಪತಿಯನ್ನು ಕೋಪದಿಂದ ಸುಡುವವಳಂತೆ ದುರದುರನೆ ನೋಡಲಾರಂಭಿಸಿದಳು. ಅವಳ ಮೈಯೆಲ್ಲಾ ಕೋಪದಿಂದ ನಡು ಗುತ್ತಿತ್ತು. ಅವಳ ಹೃದಯವು ಸಿಟ್ಟಿನಿಂದಲೂ ಶೋಕದಿಂದಲೂ ವ್ಯಥಿತ ವಾಯಿತು. ದೊಡ್ಡದಾಗಿ ನಿಟ್ಟುಸಿರುಬಿಡಲಾರಂಭಿಸಿದಳು. ಕೊನೆಗೆ ಸ್ತ್ರೀ ಸ್ವಭಾವವು ಅವಳ ಬುದ್ಧಿಯನ್ನು ಮಂದವಾಗಿಮಾಡಿತು. ಯಾವ ಪ್ರಿಯ ಪತಿಯು ಆಕೆಯ ಮೇಲೆ ಕರುಣೆಯಿಂದ ತನ್ನ ಅರ್ಧ ಶರೀರವನ್ನು ಅವಳಿಗಾಗಿ ಕೊಟ್ಟನೋ ಅಂತಹ ಪತಿದೇವನನ್ನು ತ್ಯಾಗಮಾಡಿ ತಂದೆಯ ಮನೆಗೆ

ಹೊರಟುಬಿಟ್ಟಳು. ಆವಳು ಒಬ್ಬಳೇ ಹೋಗುತ್ತಿರುವುದನ್ನು ಕಂಡು ಮಣಿ ಮುಂತನೇ ಮೊದಲಾದ ಯಕ್ಷಗಣಗಳು ನಂದೀಶ್ವರನನ್ನು ಮುಂದೆ ಮಾಡಿಕೊಂಡು ಸತಿಯ ಹಿಂದೆ ನಡೆದರು ಅವರು ದೇವಿಯ ಸಮೀಪವನ್ನು ಹೊಂದಿದ ನಂತರ ನಂದೀಶ್ವರನ ಮೇಲೆ ಆಕೆಯನ್ನು ಕುಳ್ಳಿರಿಸಿದರು. ಸಾರಿಕಾ ಕಂದುಕ ದರ್ಪಣ ಕಮಲಾ ಮುಂತಾದ ಕ್ರೀಡಾವಸ್ತುಗಳನ್ನು ಶ್ವೇತಚ್ಛತ್ರ ಚಾಮರ ಮಾಲಾ ಮುಂತಾದ ರಾಜಯೋಗ್ಯವಾದ ವಸ್ತುಗಳನ್ನು ಸಂಗಡ ತೆಗೆದುಕೊಂಡು ಶಂಖ ವೇಣು ದುಂದುಭಿಗಳನ್ನು ಬಾರಿಸುತ್ತಾ ಆಕೆಯ ಜೊತೆಯಲ್ಲಿ ನಡೆದರು.

ಸತಿಯು ತಂದೆಯ ಮನೆಯನ್ನು ಸೇರಿ ಯಜ್ಞಮಂಟಪವನ್ನು ಪ್ರವೇಶಿಸಿದಳು. ಸುತ್ತು ನಾಲ್ಕು ದಿಕ್ಕುಗಳಲ್ಲಿಯೂ ಬ್ರಾಹ್ಮಣರು ವೇದಮಂತ್ರ ಪಠಣ ಮಾಡುತ್ತಿದ್ದರು. ಒಂದು ಕಡೆಯಲ್ಲಿ ಬಲಿಪಶುಗಳ ವಧೆಯಾಗುತ್ತಿತ್ತು. ಬ್ರಾಹ್ಮಣರೂ ಋಷಿಗಳೂ ದೇವತೆಗಳೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತಿದ್ದರು. ಮೃತ್ತಿಕಾ ಕಾಷ್ಠ ಕಬ್ಬಿಣ ಸುವರ್ಣ ಕುಶ ಚರ್ಮಪಾತ್ರೆಗಳು ಯಥಾಯೋಗ್ಯವಾಗಿ ಸಜ್ಜುಗೊಳಿಸಲ್ಪಟ್ಟಿದ್ದವು.

ದಕ್ಷನು ಸತಿಯನ್ನು ಆದರಿಸಲಿಲ್ಲ. ಮಾತನಾಡಿಸಲಿಲ್ಲ. ಆತನ ಭಯದಿಂದ ಅವಳ ತಾಯಿ ಮತ್ತು ಸೋದರಿಯರಲ್ಲದೆ ಮತ್ತಾರೂ ಆಕೆಯನ್ನು ಗೌರವಿಸಲಿಲ್ಲ ಅವಳ ತಾಯಿಯೂ ತಂಗಿಯರೂ ಆಕೆಯನ್ನು ನೋಡಿದೊಡನೆ " ಬಾ ! ನೀನು ಬಂದುದು ಒಳ್ಳೆಯದಾಯಿತು. " ಎಂದು ಹೇಳಿ ಪ್ರೇಮಾಶ್ರುಗಳೊಡನೆ ಕರೆದು ಆದರಿಸಿದರೂ ತಂದೆಯು ಮಾತನ್ನು ಸಹ ಆಡಲಿಲ್ಲವಾದುದರಿಂದ ಅವಳ ಮನಸ್ಸು ಸಮಾಧಾನವಾಗಲಿಲ್ಲ. ತನ್ನ ಪತಿಯಾದ ಶಿವನಿಗೆ ಅವನಿಗೆ ಸಲ್ಲಬೇಕಾದ ಯಜ್ಞಭಾಗವನ್ನು ಮೀಸಲಾಗಿರಿಸಲಿಲ್ಲವೆಂಬುದು ಆ ಸತಿಗೆ ಗೊತ್ತಾಯಿತು. ತನ್ನ ಪತಿದೇವನಾದ ಶಂಕರನಿಗೂ ತನಗೂ ಈ ಯಜ್ಞಮಂಟಪದಲ್ಲಿ ತನ್ನ ತಂದೆಯಿಂದಲೇ ತಿರಸ್ಕಾರಪೂರ್ವಕವಾದ ನಿರಾದರವನ್ನು ನೋಡಿ ಲೋಕತ್ರಯವನ್ನೂ ಸುಡುವ ಸಿಟ್ಟು ಬಂದಿತು. ಸತಿಗೆ ಸಿಟ್ಟು ಬರುತ್ತಿದ್ದಂತೆಯೇ ದಕ್ಷನನ್ನು ನಾಶಮಾಡಲು ಆ ತೇಜಸ್ಸಿನಿಂದಲೇ ಅನೇಕ ಭೂತಗಣಗಳು ಹುಟ್ಟಿದವು. ಶಿವದ್ವೇಷಿಯಾದ ದಕ್ಷನು ಮಿತಿಮೀರಿದ

ಅಹಂಕಾರದಿಂದ ಮತ್ತನಾಗಿದ್ದುದರಿಂದ ಸತಿಯು ಕೋಪದಿಂದ ನಾಲಿಗೆಯು ತೊದಲುತ್ತಿರಲು, ಈ ರೀತಿ ಹೇಳಿದಳು :—

" ಎಲೈ ತಂದೆಯೇ, ನೀನು ಸದಾಶಿವನೊಡನೆ ವೃಥಾ ದ್ವೇಷಮಾಡುತ್ತಾ ಮೂಢಾತ್ಮನಾಗಿರುವೆ. ಆ ಈಶ್ವರನಿಗಿಂತ ಈ ಲೋಕದಲ್ಲಿ ದೊಡ್ಡವರಿಲ್ಲ. ಆತನು ಸಮಸ್ತ ಪ್ರಾಣಿಗಳಿಗೂ ಆತ್ಮನಾಗಿರುವುದರಿಂದ ಎಲ್ಲರಿಗೂ ಪ್ರಿಯನು. ಆತನಿಗೆ ಪ್ರಿಯಾಪ್ರಿಯಗಳ ಭೇದ ದೃಷ್ಟಿಯಿಲ್ಲ. ವೈರರಹಿತನಾದ ಆ ಸರ್ವಾತ್ಮಕ ನೀಲಕಂಠ ದೇವನೊಡನೆ ನೀನಲ್ಲದೆ ಮತ್ತಾವ ಮೂಢನೂ ದ್ವೇಷಮಾಡಲಾರನು. ನಿನ್ನಂತಹ ಪರಸಂತಾಪಿಗಳಾದ ಮೂರ್ಖರು ಮಾತ್ರ ಇತರರ ಗುಣಗಳನ್ನು ನೋಡಿ ಸಹಿಸಲಾರರು. ಇತರ ಸಮಸ್ತ ಸದ್ಗುಣಗಳನ್ನೂ ಮರೆತು ಯಾವುದಾದರೊಂದು ಅತ್ಯಲ್ಪವಾದ ದೋಷವನ್ನು ದೊಡ್ಡದಾಗಿ ಭಾವಿಸಿ ಅವರನ್ನು ತಿರಸ್ಕರಿಸುತ್ತಾರೆ ನಿನ್ನಂತೆ ದುಷ್ಟಸ್ವಭಾವವಿಲ್ಲದವರು ಗುಣದೋಷಗಳ ಯಥಾರ್ಥ ಸ್ವರೂಪವನ್ನು ತಿಳಿಯಬಲ್ಲರು. ಸಾಧುಗಳಾದವರು ಪರರ ದೋಷಗಳನ್ನು ಬಿಟ್ಟು ಗುಣಗಳನ್ನೇ ಗ್ರಹಣಮಾಡುತ್ತಾರೆ. ಶಿವನಂತಹ ಮಹಾತ್ಮರು ಅತ್ಯಲ್ಪ ಗುಣವನ್ನೇ ಬಲು ದೊಡ್ಡದಾಗಿ ಭಾವಿಸಿ ಸಂತೋಷಪಡುತ್ತಾರೆ ನೀನು ಮಹಾತ್ಮನಾದ ಶಂಕರನನ್ನು ವೃಥಾ ದ್ವೇಷಿಸಿ ಅವನ ಮೇಲೆ ತಪ್ಪನ್ನು ಹೊರಿಸುತ್ತಿರುವೆ ಎಂಬುದನ್ನು ನೋಡಿ ನನಗೆ ಬಹಳ ವ್ಯಥೆಯಾಗುತ್ತಿದೆ. ನಿನ್ನಂತಹ ಮೂಢರು ಈ ಚರ್ಮದ ಚೀಲವಾದ ದೇಹವನ್ನೇ ತಾನೆಂದು ಭ್ರಮಿಸಿ ಮೋಹದಿಂದ ಅಸೂಯೆಯಿಂದ ಶಿವನಂತಹ ಶಾಂತಮೂರ್ತಿಯನ್ನು ನಿಂದಿಸುವುದರಲ್ಲಿ ಆಶ್ಚರ್ಯವೇನೂ ತೋರದು. ದೇಹಾಭಿಮಾನವಿಲ್ಲದಿರುವುದರಿಂದ ನಿಂದಾಸ್ತೋತ್ರಗಳೆರಡೂ ಜ್ಞಾನಿಗಳಿಗೆ ಸಮಾನವೇ ಆದುದರಿಂದ ಆ ಸಾಧುಗಳಾದ ಜ್ಞಾನಿಗಳು ತಮ್ಮ ನಿಂದೆಯನ್ನು ಸಂತೋಷದಿಂದ ಸಹಿಸಬಲ್ಲರಾದರೂ ಅವರ ಪಾದರಜಸ್ಸು ಅದನ್ನು ಸಹಿಸಲಾರದು. ಅವರ ಪಾದಧೂಳಿಯಿಂದಲೇ ದುರ್ಜನರ ಐಶ್ವರ್ಯವೂ ತೇಜಸ್ಸೂ ನಾಶವಾಗುವುವು. ಅಂತಹ ದುಷ್ಟರು ಸಾಧುಗಳನ್ನು ನಿಂದೆಮಾಡುವುದೂ ಒಂದು ರೀತಿಯಿಂದ ಒಳ್ಳೆಯದೇ. ಅವರ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ರೂಪವಾದ ಶಿಕ್ಷೆಯು ಅವರಿಗೆ ತಟ್ಟನೆ ದೊರೆಯುವುದು. ' ಶಿವ ' ಎಂಬ ಎರಡು

ಅಕ್ಷರಗಳು ಅಪ್ಪಿತಪ್ಪಿಯಾದರೂ ಪಾಪಿಯ ಬಾಯಿಯಿಂದ ಹೊರ ಹೊರಟರೆ ಅವನ ಸಮಸ್ತ ಪಾಪಗಳನ್ನೂ ಯಾವ ದೇವನು ತಟ್ಟನೆ ನಾಶ ಮಾಡುವನೋ, ಯಾರ ಆಜ್ಞೆಯನ್ನು ಉಲ್ಲಂಘನೆಮಾಡುವುದು ಎಂತಹವನಿಗೂ ಸಾಧ್ಯವೇ ಇಲ್ಲವೋ. ಅಂತಹ ಪವಿತ್ರಕೀರ್ತಿರೂಪನಾದ ಮಂಗಳ ಮಯದೇವನನ್ನು ನೀನು ದ್ವೇಷಮಾಡುತ್ತಿರುವೆ. ಆದುದರಿಂದ ನೀನೇ ಅಮಂಗಲಸ್ವರೂಪನು. ಸತ್ಪುರುಷರ ಮನೋರೂಪೀ ಭ್ರಮರವು ಬ್ರಹ್ಮಾನಂದ ರಸಾನುಭವಕ್ಕಾಗಿ ಯಾರ ಚರಣ ಕಮಲಗಳನ್ನು ಆಶ್ರಯಿ ಸುವುದೋ, ಯಾರು ಕಾಮ್ಯಾರ್ಥಿಗಳ ಸಮಸ್ತಕಾಮನೆಗಳನ್ನೂ ಪೂರ್ಣಮಾಡ ಬಲ್ಲ ದಯಾಮಯ ಪ್ರಭುವೋ ಅಂತಹ ವಿಶ್ವಂಭರನಾದ ಭುಕ್ತಿ ಮುಕ್ತಿ ಪ್ರದನಾದ ಸ್ವಾಮಿಯೊಡನೆ ನೀನು ದ್ವೇಷಮಾಡುತ್ತಿರುವೆ. "ಹೆಸರು ಶಿವ ನೆಂದಾದರೂ ಈತನು ಅಮಂಗಳನು, ರುಂಡಮಾಲೆ ಜಟಾಭಸ್ಮ ಮೂಳೆ ಮುಂತಾದುವುಗಳನ್ನು ಧರಿಸಿ ಪಿಶಾಚಿಗಳೊಡನೆ ಸ್ಮಶಾನದಲ್ಲಿ ತಿರುಗುತ್ತಿರು ವನು." ಎಂದು ಮುಂತಾಗಿ ಹೇಳುತ್ತಿರುವಿ. ನಿನ್ನ ತಂದೆಯಾದ ಬ್ರಹ್ಮನೇ ಮೊದಲಾದ ದೇವತೆಗಳಿಗೆ ಇದು ಗೊತ್ತಿಲ್ಲವೆ? ಅವರಾರಿಗೂ ತಿಳಿಯದಂತೆ ಈತನು ರುಂಡಮಾಲೆಗಳನ್ನು ಧರಿಸಿ ಸ್ಮಶಾನದಲ್ಲಿ ತಿರುಗುತ್ತಿರುವ ನೆಂದು ಭಾವಿಸುವೆಯಾ ? ಅವರೆಲ್ಲರೂ ಈ ಶಿವನು ಮೈಮೇಲಿಂದ ತೆಗೆದ್ದು ಹಾಕಿದ ನಿರ್ಮಾಲ್ಯವನ್ನೇ ಮಹಾಪ್ರಸಾದವೆಂದು ಭಾವಿಸಿ ತಮ್ಮ ತಮ್ಮ ಶಿರಸ್ಸುಗಳಲ್ಲಿ ಧಾರಣೆಮಾಡುವುದಿಲ್ಲವೆ ? ನಿನ್ನಂತೆ ಅವರೂ ಭಾವಿಸಿದ್ದರೆ ಆತನನ್ನೇಕೆ ಸೇವಿಸಿ ಪೂಜಿಸಿ ಗೌರವಿಸುತ್ತಿದ್ದರು ? ದುರ್ದಾಂತನಾದ ಅಧಮನು ಎಲ್ಲಿ ಧರ್ಮರಕ್ಷಕನಾದ ಸ್ವಾಮಿಯನ್ನು ನಿಂದಿಸುವನೋ ಆ ಸ್ಥಳದಲ್ಲಿ ಪತಿವ್ರತೆಯಾದ ಸ್ತ್ರೀಯಾಗಲಿ ಭಕ್ತನಾಗಲಿ ಇದ್ದರೆ ಅವರಿಗೆ ಇಂತಹ ದುಷ್ಟನನ್ನು ಕೊಂದುಹಾಕುವ ಶಕ್ತಿಯು ಇಲ್ಲದಿದ್ದರೆ ಎರಡು ಕಿವಿ ಗಳನ್ನೂ ಮುಚ್ಚಿಕೊಂಡು ಅಲ್ಲಿಂದ ಹೊರಕ್ಕೆ ಹೊರಟುಬಿಡಬೇಕು. ಅಥವಾ ಶಕ್ತಿ ಇದ್ದರೆ ಇಂತಹ ದುರ್ವಚನಗಳನ್ನಾಡುವ ದುಷ್ಟನ ನಾಲಿಗೆಯನ್ನು ಬಲ ಪೂರ್ವಕವಾಗಿ ಕಿತ್ತು ಕತ್ತರಿಸಬೇಕು. ನಂತರ ತಾನು ಪ್ರಾಣತ್ಯಾಗಮಾಡ ಬೇಕು. ನೀನು ಶಿವನಿಂದಕನು. ನಿನ್ನಿಂದ ಈ ದೇಹವು ಉತ್ಪನ್ನವಾಗಿದೆ.

ಆದುದರಿಂದ ಇದನ್ನು ತ್ಯಾಗಮಾಡುತ್ತೇನೆ. ಅಪ್ಪಿತಪ್ಪಿಯಾವರೂ ಅಶುದ್ಧ ವಾದ ಅನ್ನವನ್ನು ತಿಂದರೆ ಅದನ್ನು ವಾಂತಿಮಾಡಿಯಾದರೂ ಹೊರಕ್ಕೆ ಹಾಕಬೇಕೆಂದು ಶಾಸ್ತ್ರವಚನವಿದೆಯಲ್ಲವೆ ? ನೀನು ನಿಂದಿಸುವಾಗ " ಇವನು ಕ್ರಿಯಾಹೀನನು. ಅಶುಚಿಯು " ಎಂದು ಹೇಳಿದೆಯಲ್ಲವೆ ? ಆತ್ಮಾನಂದದಲ್ಲಿ ನಿರತನಾದ ಜ್ಞಾನಿಯು ವಿಧಿ ನಿಷೇಧ ರೂಪವಾದ ವೇದವಾಕ್ಯಕ್ಕೆ ಬದ್ಧನಾಗು ವುದಿಲ್ಲ. ಆತನು ಈ ಎರಡನ್ನೂ ಮೀರಿದವನು. ನೆಲದ ಮೇಲೆ ನಡೆಯುವ ಮನುಷ್ಯರೂ ಆಕಾಶಮಾರ್ಗದಲ್ಲಿ ನಡೆಯುವ ದೇವತೆಗಳೂ ಭಿನ್ನ ಭಿನ್ನ ಪ್ರಕೃತಿಯುಳ್ಳವರು. ಅವರ ಗತಿಗಳೂ ಭಿನ್ನವಾಗಿವೆ. ಅವರು ಒಬ್ಬರು ಮತ್ತೊಬ್ಬರ ಧರ್ಮವನ್ನಾಗಲಿ, ಗತಿಯನ್ನಾಗಲಿ ಆಕ್ಷೇಪಣೆಮಾಡಬಾರದು. ಪ್ರವೃತ್ತಿ ನಿವೃತ್ತಿಗಳೆಂಬ ಮಾರ್ಗಗಳೆರಡೂ ಸತ್ಯವಾದುವುಗಳೇ ವೇದದಲ್ಲಿ ಆ ಎರಡಕ್ಕೆ ಬೇರೆಬೇರೆ ವಿಧಾನಗಳೇ ಇವೆ. ಒಂದೇ ಸಮಯದಲ್ಲಿ ಪರಸ್ಪರ ವಿರುದ್ಧಗಳಾದ ಈ ಧರ್ಮಗಳಲ್ಲಿ ಯಾವುದಾದರೊಂದನ್ನು ಮಾತ್ರ ಮನುಷ್ಯನು ಅನುಸರಿಸಬಲ್ಲನು. ಆದರೆ ಬ್ರಹ್ಮರೂಪನಾದ ಶಿವನಿಗೆ ಈ ಎರಡೂ ಅವಶ್ಯಕ ವಿಲ್ಲ. ಚಿತಾಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡು ದಿಗಂಬರನಾಗಿರುತ್ತಾ ನೆಂದಲ್ಲವೆ ನೀನು ಆಕ್ಷೇಪಿಸುವುದು ? ಅಣಿಮಾದಿ ಅಷ್ಟಸಿದ್ಧಿಗಳೂ ಬೇಡಬೇಡ ವೆಂದರೂ ನಮ್ಮಲ್ಲಿ ಬಂದು ಸೇವೆಮಾಡುತ್ತಿರುವುವೆಂಬದು ನಿನಗೆ ತಿಳಿಯದು. ನಿನ್ನ ಐಶ್ವರ್ಯವು ಯಜ್ಞಶಾಲೆಯಲ್ಲಿ ಮಾತ್ರ. ಯಜ್ಞದ ಅನ್ನದಿಂದ ಹೊಟ್ಟೆ ತುಂಬಿದ ಪಿತೃಗಳು ಮಾತ್ರ ನಿನ್ನ ಐಶ್ವರ್ಯವನ್ನು ಹೊಗಳುವರು. ವೇದೋಕ್ತ ಕರ್ಮಕಾಂಡವನ್ನು ಅನುಸರಿಸುವವರು ಮಾತ್ರ ಇದನ್ನು ಭೋಗಿಸಬಲ್ಲರು. ನಮ್ಮ ಐಶ್ವರ್ಯವು ಹಾಗಲ್ಲ. ಅದು ನಮ್ಮ ಇಚ್ಛೆಯಂತೆ ಎಲ್ಲಿ ಬೇಕಾ ದರೂ ಪ್ರಕಟವಾಗುವುದು. ಅದು ಹುಟ್ಟಿರುವುದು ಅವ್ಯಕ್ತನಾದ ಪರಬ್ರಹ್ಮ ನಲ್ಲಿ. ಬ್ರಹ್ಮಸ್ವರೂಪನಾದವನು ಮಾತ್ರ ನಮ್ಮ ಐಶ್ವರ್ಯವನ್ನು ಅನುಭವಿಸ ಬಲ್ಲನು. ಇನ್ನೇನು ಹೆಚ್ಚಿಗೆ ಹೇಳಬೇಕಾಗಿಲ್ಲ ನೀನು ಶಂಕರ ಪ್ರಭುವಿಗೆ ಅಪರಾಧಮಾಡಿರುವೆ. ನನ್ನ ಈ ಶರೀರವು ನಿನ್ನಿಂದ ಹುಟ್ಟಿರುವುದು. ದುಷ್ಟನಾದ ನಿನ್ನ ಮಗಳೆನ್ನಿಸಿಕೊಳ್ಳುವುದು ನನಗೆ ನಾಚಿಕೆಗೇಡು ದುಃಖಕರ. ನಿಂದ್ಯವಾದ ಈ ದೇಹವು ಧರಿಸಲು ಅಯೋಗ್ಯವಾದುದೇ ಸರಿ.

ನನ್ನ ಪತಿದೇವನಾದ ಶಂಕರನು ಹಾಸ್ಯಕ್ಕಾಗಿ ಒಮ್ಮೊಮ್ಮೆ " ದಾಕ್ಷಾಯಿಣಿ " ಎಂದು ನನ್ನನ್ನು ಕೂಗಿದರೆ ನಾಚಿಕೆಯೂ ದುಃಖವೂ ಆಗುವುದು. ನಿನ್ನಿಂದ ಉತ್ಪನ್ನವಾದ ಶವತುಲ್ಯವಾದ ಅಮಂಗಳಮಯವಾದ ಈ ಶರೀರವನ್ನು ಈಗಲೇ ಇಲ್ಲಿಯೇ ತ್ಯಾಗಮಾಡಿಬಿಡುತ್ತೇನೆ. "

ಎಲೈ ಎದುರನೇ ! ಈ ರೀತಿ ದಕ್ಷನಿಗೆ ಹೇಳಿ ಸತಿಯು ಉತ್ತರಕ್ಕೆ ತಿರುಗಿ ನೆಲದ ಮೇಲೆ ಕುಳಿತುಕೊಂಡಳು. ಪೀತಾಂಬರವನ್ನು ಧರಿಸಿದ್ದ ಆಕೆಯು ಆಚಮನಮಾಡಿ ಕಣ್ಣುಗಳನ್ನು ಮುಚ್ಚಿ ಯೋಗಮಾರ್ಗವನ್ನು ಅವಲಂಬನೆ ಮಾಡಿದಳು. ಆಸನವನ್ನು ಜಯಿಸಿ ಪ್ರಾಣವನ್ನು (ಊರ್ಧ್ವವಾಯು) ಅಪಾನ ವನ್ನು (ಅಧೋವಾಯು) ತಡೆದು ಸೇರಿಸಿ ನಾಭಿಯಲ್ಲಿ ನಿಲ್ಲಿಸಿದಳು. ಪ್ರಾಣಾಪಾನ ಗಳಿಂದೊಡಗೂಡಿದ ಉದಾನ ವಾಯುವನ್ನು ಮೆಲ್ಲ ಮೆಲ್ಲಗೆ ಕಂಠದವರೆಗೂ ಮೇಲಕ್ಕೆ ತಂದು ಬುದ್ಧಿಯೊಡನೆ ಹೃದಯದಲ್ಲಿ ಸ್ಥಾಪನೆಮಾಡಿ ಕಂಠನಾಳ ದಿಂದ ಭ್ರೂಮಧ್ಯದಲ್ಲಿ ತಂದು ನಿಲ್ಲಿಸಿದಳು. ದಕ್ಷನ ಮೇಲೆ ಕುಪಿತಳಾಗಿ ತನ್ನ ಸುಕೋಮಲ ದೇಹವನ್ನು ತ್ಯಾಗಮಾಡಿಯೇಬಿಡಬೇಕೆಂಬ ದೃಢ ಸಂಕಲ್ಪ ದಿಂದ ದೇಹದೊಳಗಿನ ವಾಯುಗಳನ್ನೆಲ್ಲಾ ಏಕತ್ರಿತವಾಗಿಮಾಡಿ ಯೋಗಾಗ್ನಿ ಯನ್ನು ಧಾರಣೆಮಾಡಿದಳು. ಚಿತ್ತವನ್ನು ಏಕಾಗ್ರವಾಗಿ ನಿಲ್ಲಿಸಿ ತನ್ನ ಪತಿ ಯಾದ ಜಗದ್ಗುರುವಾದ ಈಶ್ವರನ ಚರಣಾಮೃತ ಪಾನಮಾಡಲಾರಂಭಿಸಿ ದಳು. ಅವಳಿಗೆ ಎಲ್ಲೆಲ್ಲಿಯೂ ಎಲ್ಲೆಡೆಯಲ್ಲಿಯೂ ಶಿವನೇ ಕಾಣಲಾರಂಭಿಸಿ ದನು. ಅವಳ ಶರೀರವು ಶುದ್ಧವಾಗಿ ಯೋಗಾಗ್ನಿಯಿಂದ ಸುಟ್ಟು ಉರಿಯ ಲಾರಂಭಿಸಿತು

ಈ ಅದ್ಭುತವನ್ನು ನೋಡುತ್ತಿದ್ದ ದೇವತೆಗಳು ಆಕಾಶ ಮಾರ್ಗದಲ್ಲಿ ಹಾಹಾಕಾರಮಾಡಲಾರಂಭಿಸಿದರು. ಅಯ್ಯೋ ! ಪೂಜ್ಯತಮನಾದ ಶಂಕರನ ಪತ್ನಿಯು ದಕ್ಷನ ಅವಮಾನವನ್ನು ತಡೆಯಲಾರದೆ ಪ್ರಾಣತ್ಯಾಗಮಾಡಿ ದಳು. ದಕ್ಷನೆಂತಹ ದುಷ್ಟನು ! ಪ್ರಜಾಪತಿಯಾದ ಈತನಿಗೆ ಚರಾಚರ ರೂಪವಾದ ಜಗತ್ತನ್ನೆಲ್ಲಾ ಪ್ರೇಮಮಾಡುವುದು ಇವನ ಧರ್ಮವು. ತನ್ನ ಸ್ವಂತ ಪುತ್ರಿಯನ್ನೇ ಆದರಿಸಲಿಲ್ಲ ! ಮನಸ್ವಿನಿಯಾದ ಸತಿಯು ಎಲ್ಲರಿಗೂ ಆದರಣೀ ಯಳಲ್ಲವೆ ? ಇದೆಂತಹ ಆಶ್ಚರ್ಯ ! ದುಃಖದಾಯಕ ! ಶಿವದ್ವೇಷಿಯಾದ

ಬ್ರಹ್ಮದ್ರೋಹಿಯಾದ ದಕ್ಷನ ಮನಸ್ಸು ಎಂತಹ ಕಠಿಣ. ತನ್ನ ತಪ್ಪಿನಿಂದಲೇ ತನ್ನೆದುರಿಗೇ ಪ್ರಾಣಬಿಡುತ್ತಿರುವ ಮಗಳನ್ನು ತಡೆಯಲೇ ಇಲ್ಲವಲ್ಲ. ಇವನಿಗೆ ಬರಬಾರದ ಅಪಕೀರ್ತಿಯು ಬರುವುದು. ಎಂದು ಮುಂತಾಗಿ ಸತೀ ಮರಣ ರೂಪವಾದ ಈ ಭಯಂಕರ ವ್ಯಾಪಾರವನ್ನು ನೋಡಿ ದುಃಖಿಸಲಾರಂಭಿಸಿದರು.

ಈ ಸಂಗತಿಯನ್ನು ಕೇಳುತ್ತಲೇ ಅವಳ ಸಂಗಡ ಬಂದಿದ್ದ ಶಿವಗಣ ಗಳು ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನು ಹಿಡಿದು ಯಜ್ಞಮಂಟಪಕ್ಕೆ ನುಗ್ಗಿದವು. ಇವರ ಆಕ್ರಮಣದ ವೇಗವನ್ನು ಕಂಡು ಆ ಯಜ್ಞದಲ್ಲಿ ಆಚಾರ್ಯನಾಗಿದ್ದ ಭೃಗುಮಹರ್ಷಿಯು " ಅಪಹತಂ ರಕ್ಷ " ಎಂಬ ಮಂತ್ರವನ್ನು ಉಚ್ಚರಿಸುತ್ತಾ ಆಹುತಿಕೊಟ್ಟನು. ಅಧ್ವರ್ಯುವಾದ ಭೃಗುವು ಆಹುತಿಯನ್ನು ಕೊಡುತ್ತಲೇ ಸಹಸ್ರಾರು ' ಋಭು ' ಎಂಬ ಹೆಸರಿನ ಯಜ್ಞರಕ್ಷಕರು ಉತ್ಪನ್ನರಾದರು. ಬ್ರಹ್ಮತೇಜಸ್ಸಿನ ಪ್ರತಾಪದಿಂದ ಉತ್ಪನ್ನರಾದ ಈ ಋಭುಗಳು ಉರಿಯುತ್ತಿರುವ ಕೊಳ್ಳಿಗಳನ್ನು ಶಸ್ತ್ರದಂತೆ ತೆಗೆದುಕೊಂಡು ಪ್ರಮಥಗುಹ್ಯಕ ಮೊದಲಾದ ಶಿವಗಣಗಳನ್ನು ಹೊಡೆದು ಅಟ್ಟಿಸಲು ಅವರು ಸೋತು ಶಿವನ ಬಳಿಗೆ ಓಡಿ ಹೋದರು.

ಶಂಕರನು ನಾರದನ ಮುಖದಿಂದ ಸತಿಯು ದಕ್ಷನಿಂದ ಮಾಡಲ್ಪಟ್ಟ ಅಪಮಾನದಿಂದ ಕ್ರೋಧಾನ್ವಿತಳಾಗಿ ಯೋಗಾಗ್ನಿಯಿಂದ ದೇಹವನ್ನು ಸುಟ್ಟು ಮರಣಹೊಂದಿದಳೆಂದೂ, ಭೃಗುಋಷಿಯ ಮಂತ್ರಪ್ರಭಾವದಿಂದ ಹುಟ್ಟಿದ ಋಭು ಎಂಬ ದೇವತೆಗಳು ತನ್ನ ಪಾರ್ಷದ ಗಣಗಳನ್ನು ಹೊಡೆದು ಅಟ್ಟಿದ ರೆಂದೂ ಕೇಳುತ್ತಲೇ ಕಿಡಿಕಿಡಿಯಾದನು ಮಿತಿಮೀರಿದ ಕೋಪವು ಉತ್ಪನ್ನವಾಯಿತು. ದಾರುಣಕೋಪದಿಂದ ತನ್ನ ತಲೆಯಲ್ಲಿನ ಜಟೆಯೊಂದನ್ನು ಕಿತ್ತು ಹೊರತೆಗೆದನು. ಆ ಜಟೆಯು ಮಿಂಚಿನಂತೆ ಮತ್ತು ಅಗ್ನಿಶಿಖೆ (ಬೆಂಕಿಯಉರಿ) ಯಂತೆ ಪ್ರಕಾಶಮಾನವಾಯಿತು ತಟ್ಟನೆ ಮೇಲಕ್ಕೆದ್ದು ಗಂಭೀರವಾದ ಅಟ್ಟಹಾಸದಿಂದ ಅದನ್ನು ನೆಲಕ್ಕೆ ಹೊಡೆದನು. ಆ ಜಟೆ ಯಿಂದ ವೀರಭದ್ರನು ಹುಟ್ಟಿದನು. ಪ್ರಳಯಾಂತಕನಾಗಿ ಕಾಣುತ್ತಿದ್ದ ಈತನು ತನ್ನ ಕಾರ್ಯವೇನೆಂದು ತಿಳಿಯಲು ಶಿವನಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಅಂಜಲಿಬದ್ಧನಾಗಿ ಆತನ ಆಜ್ಞೆಯನ್ನು ನಿರೀಕ್ಷಿಸುತ್ತಾ ನಿಂತನು.

" ಎಲೈ ರುದ್ರನೆ! ಸುಭಟನೆ! ನೀನು ನನ್ನ ಅಂಶವಾಗಿರುವೆ. ಹೋಗು. ದಕ್ಷನನ್ನೂ ದಕ್ಷನ ಯಜ್ಞವನ್ನೂ ನಾಶಮಾಡಿ ಬಾ. ನೀನೇ ನನ್ನ ಗಣದಲ್ಲಿ ಮುಖ್ಯನಾಗಿರುವೆ, ಕುಪಿತನಾದ ಶಂಕರನು ಈ ರೀತಿಯಾದ ಆಜ್ಞೆಯನ್ನು ಕೊಡುತ್ತಲೇ ವೀರಭದ್ರನು ಆ ದೇವದೇವನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದನು. ಆಗ ವೀರಭದ್ರನನ್ನು ತಡೆಯುವುದು ಅಸಾಧ್ಯವಾಯಿತು. ತನ್ನಂತಹ ಬಲಶಾಲಿಯೇ ಇಲ್ಲವೆಂದು ಭಾವಿಸಿದನು. ಶಿವನ ಆಜ್ಞೆಯಿಂದ ಇತರ ಪಾರ್ಷದಗಣಗಳೂ ಆ ವೀರಭದ್ರನೊಡನೆ ಸೇರಿಕೊಂಡರು. ಅವನು ಅಟ್ಟಹಾಸಮಾಡುತ್ತಾ ಜಗತ್ತನ್ನು ಕೊಲ್ಲುವ ಯಮರಾಜನನ್ನು-ಮೃತ್ಯುವನ್ನು ನಾಶಮಾಡುವ ಸಾಮರ್ಥ್ಯವುಳ್ಳ ತನ್ನ ತ್ರಿಶೂಲವನ್ನು ತಿರುಗಿಸುತ್ತಾ ಗರ್ಜಿಸಲಾರಂಭಿಸಿದನು ಹಾಗೆಯೇ ದಕ್ಷನ ಯಜ್ಞಶಾಲೆಯ ಕಡೆಗೆ ಓಡಿದನು. ಆ ರೀತಿ ಓಡುತ್ತಿರುವಾಗ ಅವನ ಕಾಲಿನ ಆ ಭೂಷಣಗಳು ಕುಣಿಯಲಾರಂಭಿಸಿದವು. ರುದ್ರಗಣವು ಓಡುತ್ತಿರುವಾಗ ಅವರ ಕಾಲ ಕೆಳಗಿನ ಧೂಳು ಭೂಮ್ಯಾಕಾಶಗಳನ್ನು ತುಂಬಿತು.

ದಕ್ಷನ ಯಜ್ಞಶಾಲೆಯಲ್ಲಿದ್ದ ಋತ್ವಿಜರು ಹೆಂಗಸರು ಬ್ರಾಹ್ಮಣರು ಮುಂತಾದವರೆಲ್ಲಾ ಉತ್ತರ ದಿಕ್ಕಿನಿಂದ ಮೇಲಕ್ಕೇಳುತ್ತಿದ್ದ ಕತ್ತಲೆಯನ್ನು ನೋಡಿ ಗಾಬರಿಗೊಂಡರು "ಗಾಳಿಯೇ ಬೀಸುವುದಿಲ್ಲವಾದುದರಿಂದ ಸುಂಟರ ಗಾಳಿಯ ವೇಗವಲ್ಲ. ಪ್ರಾಚೀನ ಬರ್ಹಿರಾಜನು ಇನ್ನೂ ಜೀವಿತನಾಗಿರುವುದರಿಂದ ಕಳ್ಳರ ಗುಂಪೂ ಇರಲಾರದು. ಗೋಗಳ ಗೊರಸಿನಿಂದ ಹೊರಟ ಧೂಳಿ ಎಂದರೆ ಸಂಧ್ಯಾಕಾಲವಲ್ಲವಾದುದರಿಂದ ಅದು ಇರಲಾರದು. ಈ ದಿನವೇನಾದರೂ ಪ್ರಳಯವಾಗಬಹುದು. " ಎಂದು ಚಿಂತಿಸಲಾರಂಭಿಸಿದರು. ಪ್ರಸೂತಿ ಮೊದಲಾದ ದಕ್ಷಪತ್ನಿಯರು " ಇದು ನಿರಪರಾಧಿನಿಯಾದ ಮಗಳನ್ನು ಉಳಿದವರೆದುರಿಗೆ ನಿರ್ಲಕ್ಷ್ಯಮಾಡಿ ಅನಾದರಮಾಡಿದುದರ ಫಲವೇ ಇದ-ಸಂದೇಹವಿಲ್ಲ. ಆದುದರಿಂದಲೇ ಈ ಉತ್ಪಾತವಾಗುತ್ತಿರುವುದು. " ಎಂದು ಭಯಪಡಲಾರಂಭಿಸಿದರು. ಪ್ರಳಯಕಾಲದಲ್ಲಿ ಜಟೆಗಳನ್ನು ಕೆದರಿಕೊಂಡು ತನ್ನ ತ್ರಿಶೂಲದ ಕೊನೆಯಲ್ಲಿ ದಿಗ್ಗಜಗಳನ್ನು ಮೇಲಕ್ಕೆತ್ತಿ ವಜ್ರಪಾತದಂತೆ ತೋರುವ ಅಟ್ಟಹಾಸದಿಂದಲೂ, ಕೋಪಬಂದಾಗ ಹುಬ್ಬುಗಂಟಿಕ್ಕಿದ

ಮುಖದ ಎದುರಿಗೆ ಹೋಗಲು ಎಲ್ಲರೂ ಹೆದರುತ್ತಿರುವಂತಹ ವಿಕರಾಳವಾದ ಗಡ್ಡ ಕೋರೆದಾಡೆಗಳ ಬೆಳಕು ನಕ್ಷತ್ರಗಳ ಬೆಳಕನ್ನು ಪ್ರಕಾಶ ಹೀನವಾದಂತೆ ಮಾಡುತ್ತಿರುವ ಮಹಾಕಾಲರೂಪನಾದ ಶಿವನನ್ನು ತಿರಸ್ಕಾರಮಾಡಿ ಸಿಟ್ಟು ಬರುವಂತೆ ಮಾಡಿದರೆ ಸೃಷ್ಟಿಕರ್ತನಾದ ಬ್ರಹ್ಮನಿಗೂ ಸಹ ಸುಖವಾಗಲಾರದು. ಯಜ್ಞಶಾಲೆಯಲ್ಲಿರುವವರೆಲ್ಲಾ ಈ ರೀತಿ ಯೋಚಿಸುತ್ತಿರುವಲ್ಲಿ ಸಹಸ್ರಾರು ಉತ್ಪಾತಗಳಾಗುತ್ತಿರುವಲ್ಲಿ ಧೈರ್ಯಶಾಲಿಯಾದ ದಕ್ಷನಿಗೂ ಎದೆಯು ನಡುಗಲಾರಂಭಿಸಿತು.

ಓಡಿಬರುತ್ತಿರುವ ರುದ್ರಗಣಗಳು ಯಜ್ಞಶಾಲೆಯನ್ನು ನಾಲ್ಕು ದಿಕ್ಕುಗಳಲ್ಲಿಯೂ ಮುತ್ತಿದವು. ಕಪ್ಪು ಕೆಂಪು ಹಳದಿ ಬಣ್ಣಗಳ ವಿವಿಧ ವಿಕಾರ ಯುಕ್ತ ಮುಖಗಳಿಂದ ಮೊಸಳೆಯಂತೆ ಹೊಟ್ಟೆಗಳುಳ್ಳ ರುದ್ರಗಣಗಳು ಅನೇಕ ಶಸ್ತ್ರಗಳನ್ನು ಕೈಗಳಲ್ಲಿ ಹಿಡಿದು ಬಂದವು. ಕೆಲವರು ಪ್ರಾಗ್ವಂಶವನ್ನು ಕಿತ್ತು ಹಾಕಿದರು. ಕೆಲವರು ಪತ್ನೀಶಾಲೆಯನ್ನು ನಾಶಮಾಡಿದರು. ಕೆಲವರು ಯಜ್ಞಶಾಲೆಯ ಎದುರಿನ ಮಂಟಪವನ್ನೂ ಅದರ ಎದುರಿಗಿದ್ದ ಹವಿರ್ಧಾನವನ್ನೂ ಅದಕ್ಕೆ ಉತ್ತರದಲ್ಲಿದ್ದ ಆಗ್ನೀಧ್ರಶಾಲೆ, ಯಜಮಾನ ಗೃಹ, ಪಾಕಶಾಲೆ ಮುಂತಾದುವುಗಳನ್ನು ಕಿತ್ತೊಗೆದರು. ಕೆಲವರು ಯಜ್ಞಪಾತ್ರೆಗಳನ್ನು ಮುರಿದು ಹಾಕಿ ಅಗ್ನಿಯನ್ನು ಆರಿಸಿ ಅಗ್ನಿಕುಂಡಗಳಲ್ಲಿ ಮೂತ್ರ ವಿಸರ್ಜನೆಮಾಡಿದರು. ವೇದಿಕೆಯ ಮೇಖಲೆಯನ್ನು ಕಿತ್ತುಹಾಕಿದರು. ಕೆಲವರು ಯಜ್ಞಮಾಡುತ್ತಿದ್ದ ಮುನಿಗಳಿಗೆ ಕಷ್ಟಕೊಡಲಾರಂಭಿಸಿದರು. ಹೆಂಗಸರನ್ನು ಹೆದರಿಸಿ ಭಯಪಡಿಸಿದರು. ಸಮೀಪದಲ್ಲಿಯೇ ಓಡಿಹೋಗುತ್ತಿದ್ದ ದೇವತೆಗಳನ್ನು ಹಿಡಿದರು. ಮಣಿಮಂತನೆಂಬ ರುದ್ರಗಣದವನು ಆಚಾರ್ಯನಾದ ಭೃಗುಋಷಿಯನ್ನು ಕಟ್ಟಿಹಾಕಿದನು ವೀರಭದ್ರನು ದಕ್ಷಪ್ರಜಾಪತಿಯನ್ನು ಕಟ್ಟಿಹಾಕಿದನು. ಚಂಡೀಶನು ಸೂರ್ಯದೇವನನ್ನೂ ನಂದೀಶನು ಭಗದೇವನನ್ನೂ ಕಟ್ಟಿಹಾಕಿದರು. ಯಜ್ಞಸಭೆಗೆ ಬಂದಿದ್ದ ಋತ್ವಿಕರು ಸದಸ್ಯರು ದೇವತೆಗಳು ಈ ಭಯಂಕರ ಕೃತ್ಯವನ್ನು ನೋಡಿ ಹೆದರಿ ಓಡಲಾರಂಭಿಸಲು ರುದ್ರಗಣಗಳು ಕಲ್ಲುಗಳನ್ನು ಹೊಡೆಯುತ್ತಾ ಅವರನ್ನು ತೊಂದರೆಪಡಿಸಲಾರಂಭಿಸಿದರು

ಭೃಗುಋಷಿಯು ಸ್ರುವವನ್ನು ಕೈಯಲ್ಲಿ ಹಿಡಿದು ಹವನಮಾಡುತ್ತಿದ್ದನು. ವೀರಭದ್ರನು ಅವನನ್ನು ಹಿಡಿದು ಅವನ ಗಡ್ಡವನ್ನು ಕಿತ್ತು ಬಿಸುಟನು. ಏಕೆಂದರೆ ದಕ್ಷನು ಶಿವನಿಂದೆಮಾಡುತ್ತಿದ್ದಾಗ ಇವನು ಗಡ್ಡವನ್ನು ತೋರಿಸುತ್ತಾ ಹಾಸ್ಯಮಾಡಿದ್ದನು. ದಕ್ಷನು ಶಿವನಿಂದೆಮಾಡಿದಾಗ ಕಣ್ಣುಸನ್ನೆಯಿಂದ ಅವನ ಉತ್ಸಾಹವನ್ನು ಹೆಚ್ಚಿಸುತ್ತಿದ್ದ ಭಗದೇವನನ್ನು ನಂದೀಶನು ಹಿಡಿದು ಕೆಡವಿ ಅವನ ಕಣ್ಣುಗಳನ್ನು ಕಿತ್ತುಹಾಕಿದನು. ದಕ್ಷನು ಶಿವನಿಂದೆಮಾಡುತ್ತಿದ್ದಾಗ ಹಲ್ಲುಗಳನ್ನು ಕಿಸಿದು ನಗುತ್ತಿದ್ದ **ಪೂಷಾ** ದೇವತೆಯನ್ನು ಬಲಭದ್ರನು ಕಲಿಂಗರಾಜನಾದ ದಂತವಕ್ತ್ರನ ಹಲ್ಲುಗಳನ್ನು ಕೆಡವಿದಂತೆ ಕೆಡವಿದನು.

ವೀರಭದ್ರನು ದಕ್ಷನನ್ನು ಕೆಳಕ್ಕೆ ಕೆಡವಿ ಅವನ ಎದೆಯ ಮೇಲೆ ಕುಳಿತು ಕತ್ತಿಯಿಂದ ಅವನ ಕತ್ತನ್ನು ಕತ್ತರಿಸಲೆತ್ನಿಸಿದನು. ಅದು ಸ್ವಲ್ಪವೂ ಕತ್ತರಿಸದಿರಲು ಅವನಿಗೆ ಆಶ್ಚರ್ಯವಾಯಿತು. ಯೋಚಿಸಲಾರಂಭಿಸಿದನು. ತಟ್ಟನೆ ಒಂದು ಉಪಾಯವು ಹೊಳೆಯಿತು. ಕುರಿ ಮೇಕೆ ಮುಂತಾದ ಪಶುಗಳ ಕತ್ತನ್ನು ತಿರುಚಿ ಕೊಂದುಹಾಕುವಂತೆ ದಕ್ಷನ ತಲೆಯನ್ನು ತಿರುಚಿ ಕಿತ್ತು ಮುಂಡದಿಂದ ಬೇರೆಮಾಡಿದನು. ಆಗ ಶಿವನ ಅನುಚರರಾದ ಭೂತಪ್ರೇತ ಪಿಶಾಚಾದಿಗಳು ವಹವಾ! ವಹವಾ! ಶಹಬಾಸ್, ಎಂದು ಮುಂತಾಗಿ ಹೇಳುತ್ತಾ ವೀರಭದ್ರನನ್ನು ಹೊಗಳಲಾರಂಭಿಸಿದರು. ಆದರೆ ಯಜ್ಞಶಾಲೆಯಲ್ಲಿದ್ದವರೆಲ್ಲ ಹಾಹಾಕಾರಮಾಡಲಾರಂಭಿಸಿದರು. ಕ್ರೋಧಾನ್ವಿತನಾದ ವೀರಭದ್ರನು ಪೂರ್ಣಾಹುತಿ ರೂಪವಾಗಿ ದಕ್ಷನ ಶಿರಸ್ಸನ್ನು ದಕ್ಷಿಣಾಗ್ನಿಯಲ್ಲಿ ಹಾಕಿ ಯಜ್ಞಶಾಲೆಗೆ ಬೆಂಕಿಯನ್ನಿಟ್ಟು ಸುಟ್ಟುಹಾಕಿ ತನ್ನ ಪಾರ್ಷದ ಗಣಗಳೊಡನೆ ಕೈಲಾಸಕ್ಕೆ ಹಿಂದಿರುಗಿದನು.

# ಬ್ರಹ್ಮನು ಕೈಲಾಸಕ್ಕೆ ದೇವತೆಗಳ ಜೊತೆಯಲ್ಲಿ ಹೋಗಿ ಈಶ್ವರನನ್ನು ಪ್ರಾರ್ಥಿಸುವಿಕೆ

ಮೈತ್ರೇಯರು ಹೇಳುತ್ತಾರೆ—ಶಿವನ ಸೇನೆಯು ಶೂಲ, ಪಟ್ಟಿಶ, ನಿಸ್ತ್ರಿಂಶ, ಗದಾ, ಮುದ್ಗರ, ಮುಂತಾದ ಶಸ್ತ್ರಗಳಿಂದ ಋತ್ವಿಜರನ್ನು ಸದಸ್ಯರನ್ನು ದೇವತೆಗಳನ್ನು, ಸದೆಬಡಿದು ಅಂಗಭಂಗಮಾಡಿದರು. ಅವರೆಲ್ಲರೂ ಘಾಯವನ್ನು ಹೊಂದಿ ಸೇನೆಯಿಂದ ಪರಾಜಿತರಾಗಿ, ಭಯಭೀತರಾಗಿ ಬ್ರಹ್ಮಲೋಕಕ್ಕೆ ಓಡಿಹೋದರು. ಬ್ರಹ್ಮನ ಸಮಿಪಕ್ಕೆ ಹೋಗಿ ಪ್ರಣಾಮಮಾಡಿ ವೃತಾಂತವನ್ನೆಲ್ಲಾ ತಿಳಿಯ ಒಲ್ಲ ಅಂತರ್ಯಾಮಿಯಾದ ಹರಿಯೂ ಮತ್ತು ಬ್ರಹ್ಮನೂ ಶಿವದ್ರೋಹಿಯಾದ ದಕ್ಷನ ಯಜ್ಞವು ಸರಿಯಾಗಿ ಸುಖಕರವಾಗಿ ನಡೆಯುವುದಿಲ್ಲವೆಂದು ತಿಳಿದಿದ್ದರು. ಆದುದರಿಂದ ಅವರು ಆ ಯಜ್ಞಕ್ಕೆ ಬಂದಿರಲಿಲ್ಲ. ದೇವತೆಗಳಿಂದ ಈ ವೃತ್ತಾಂತವನ್ನೆಲ್ಲಾ ಕೇಳಿ ಬ್ರಹ್ಮನು ಹೇಳಿದನು "ಎಲೈ ದೇವತೆಗಳೆ! ಅತಿ ತೇಜಸ್ವಿಯಾದ ಪುರುಷನಿಗೆ ಅಪರಾಧಮಾಡಿ ತಾನು ಸುಖವಾಗಿರುವೆನೆಂದು ಭಾವಿಸುವುದು ತಪ್ಪು. ಆ ದುಷ್ಕರ್ಮದ ಫಲವನ್ನು ಅವಶ್ಯಕವಾಗಿ ಅನುಭವಿಸಬೇಕು. ನೀವು ಯಜ್ಞದಲ್ಲಿ ಭಾಗವನ್ನು ಕೊಡದೆ ಬಹಳದೊಡ್ಡ ಅಪರಾಧವನ್ನು ಮಾಡಿರುವಿರಾದರೂ ನೀವು ಶುದ್ಧಚಿತ್ತದಿಂದ ಆತನಲ್ಲಿಗೆ ಹೋಗಿ ಚರಣಗಳಿಗೆರಗಿ ಅವನನ್ನು ಮರಿಸಿಕೊಳ್ಳಬೇಕು. ಆತನು ಎಂತಹ ಅಪರಾಧಮಾಡಿದರೂ ಬಹಳ ಜಾಗ್ರತೆಯಾಗಿ ಪ್ರಸನ್ನನಾಗಬಲ್ಲ ದಯಾಳುವಾಗಿದ್ದಾನೆ.

ಮೊದಲು ದಕ್ಷನ ಕಟುವಚನರೂಪಬಾಣವು ಆತನ ಹೃದಯವನ್ನು ಹೊಕ್ಕಿತು. ನಂತರ ಪ್ರಿಯೆಯಾದ ಸತಿಯ ವಿಯೋಗವಾಯಿತು. ಆದುದರಿಂದ ಕುಪಿತನಾಗಿ ಯಜ್ಞವನ್ನು ನಾಶಮಾಡಿದನು. ಇದೆಂತಹಯಜ್ಞ! ಆತನ ಸಿಟ್ಟಿಗೆ ಇದೊಂದು ಎದುರಾಗಿ ನಿಲ್ಲಬಲ್ಲುದೇ! ಆತನು ಸಿಟ್ಟುಮಾಡಿದರೆ ಲೋಕಪಾಲರೊಂದಿಗೆ ಜಗತ್ರಯವೂ ಸಂಹಾರವಾಗಬಲ್ಲುದು. ನಿಮಗೆ ಆ ಯಜ್ಞವು ಪುನಃ ಆರಂಭವಾಗಿ ಕೊನೆಮುಟ್ಟಬೇಕೆಂದು ಇಷ್ಟವಿದ್ದರೆ

ಶೀಘ್ರವಾಗಿ ಹೋಗಿ ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಿರಿ. ಮತ್ತು ನಿಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳಿರಿ. ಆತನ ತತ್ವವನ್ನೂ ಬಲವೀರ್ಯಗಳ ಪ್ರಮಾಣವನ್ನೂ ನಾನಾಗಲೀ ಇಂದ್ರನಾಗಲೀ ಮುನಿಗಳ ಸಹಿತವಾಗಿ ನೀವೆಲ್ಲರಾಗಲೀ ಅಥವಾ ಮತ್ತಿನ್ನಾವ ದೇಹಧಾರಿಯಾಗಲೀ ತಿಳಿಯಲು ಸಾಧ್ಯವಿಲ್ಲ. ಆತನು ಸ್ವತಂತ್ರನು. ಈಶ್ವರನು. ಆತನಲ್ಲದೆ ಮತ್ತಿನ್ನಾರೂ ನಿಮ್ಮನ್ನು ರಕ್ಷಿಸಿ ಯಜ್ಞವನ್ನು ಪೂರ್ಣವಾಗುವಂತೆ ಮಾಡಲಾರರು. ಆತನು ಯಜ್ಞವನ್ನು ಧ್ವಂಸಮಾಡಿರುವನಾದ್ದರಿಂದ ಆತನೇ ಅದನ್ನು ಸರಿಮಾಡಬಲ್ಲನು. ಇನ್ನ್ಯಾರಿಗೂ ಆ ಶಕ್ತಿಯಿಲ್ಲ. "

ಹೀಗೆ ದೇವತೆಗಳಿಗೆ ಉಪದೇಶಮಾಡಿ ಪಿತೃಗಣ ಪ್ರಜಾಪತಿಗಣ, ದೇವಗಣ, ಗಳಿಂದೊಡಗೂಡಿ ಬ್ರಹ್ಮನು ತನ್ನ ಲೋಕದಿಂದ ಹೊರಟು ಶಿವನ ವಾಸಸ್ಥಳ ವಾದ ಕೈಲಾಸ ಪರ್ವತಕ್ಕೆ ಹೋದನು. ಆ ಕೈಲಾಸಪರ್ವತದಮೇಲೆ ಜನ್ಮಔಷಧಿಯೋಗತಪಸ್ಸುಮುಂತಾದ ಉಪಾಯಗಳಿಂದ ಸಿದ್ಧರಾಗಿ ಯಕ್ಷಾದಿ ಯೋನಿಗಳನ್ನು ಹೊಂದಿರುವರು ಕಿನ್ನರ ಗಂಧರ್ವ ಅಪ್ಸರಮುಂತಾದ ಉಪದೇವ ಗಣಗಳೂಸದಾವಾಸಮಾಡುತ್ತಾರೆ. ಆ ಪರ್ವತದ ಶಿಖರವು ವಿವಿಧ ರತ್ನಗಳಿಂದಲೂ ವಿವಿಧ ಚಿತ್ರವಿಚಿತ್ರಧಾತುಗಳಿಂದಲೂ ಶೋಭಿಸುತ್ತಿದೆ. ಮೃಗಗಳು ಸಂಚರಿಸುತ್ತಿವೆ. ಆ ಪರ್ವತದಮೇಲೆ ಅನೇಕ ನಿರ್ಮಲ ಜಲಪ್ರವಾಹಗಳು ಹರಿಯುತ್ತಿವೆ. ಗಿರಿಗಹ್ವರಗಳಿವೆ. ಶಿಖರಗಳಿವೆ. ಅವುಗಳಲ್ಲಿ ಸಿದ್ಧ ಪುರುಷರು ಸುಂದರ ಸ್ತ್ರೀಯರುಗಳೊಡನೆ ವಿಹರಿಸುತ್ತಿದ್ದಾರೆ. ನವಿಲುಗಳು ಮನೋಹರವಾಗಿ ಕೇಕೆ ಹಾಕುತ್ತಿವೆ. ಮದಮತ್ತಪಕ್ಷಿಗಳು, ಭೃಂಗಗಳು ಝೇಂಕಾರಮಾಡುತ್ತಿವೆ. ಕೋಕಿಲೆಗಳು ಮಧುರ ಕಂಠಗಳಿಂದ ಶಬ್ದಮಾಡುತ್ತಿವೆ. ವೃಕ್ಷಗಳು ವಿವಿಧವಾಗಿ ಸಮಸ್ತ ಕಾಮನೆಗಳನ್ನೂ ಪೂರ್ತಿಮಾಡಬಲ್ಲ ದೊಡ್ಡ ದೊಡ್ಡ ಕೊಂಬೆಗಳಿಂದ ಬಾಹುಗಳನ್ನು ಮೇಲಕ್ಕೆತ್ತಿ ಪಕ್ಷಿಗಳನ್ನು ತನ್ನೆಡೆಗೆ ಕರೆಯುತ್ತಿರುವಂತೆ ತೋರುತ್ತದೆ. ದೊಡ್ಡದೊಡ್ಡ ಆನೆಗಳು ಗುಂಪು ಗುಂಪಾಗಿ ನಡೆಯುತ್ತಿರುವುದನ್ನು ನೋಡಿದರೆ, ಪರ್ವತವೇ ಚಲಿಸುತ್ತಿರುವಂತೆ ಭಾಸವಾಗುತ್ತಿದೆ. ನದೀ ಪ್ರವಾಹಗಳ ಶಬ್ದಗಳಿಂದ ಆ ಪರ್ವತವು ಮಾತನಾಡುತ್ತಿರುವಂತೆ ಭಾಸವಾಗುತ್ತಿದೆ.

ಮಂದಾರ, ಪಾರಿಜಾತ, ಸರಳ, ತಮಾಲ, ಸಾಲ, ತಾಲ, ಕೋವಿದಾರ ಅರ್ಜುನ, ಮುಂತಾದ ವೃಕ್ಷಗಳು ಅಪರ ಶೋಭೆಯನ್ನು ಹೆಚ್ಚಿಸುತ್ತಿವೆ. ಆಮ್ರ, ಕದಂಬ, ನಾಗ, ಪುನ್ನಾಗ, ಚಂಪಕ, ಪಾಟಲ ಅಶೋಕ, ಬಕುಲ, ಕುಂದ, ಶತಪತ್ರ, ಕಮಲ, ಇಲಾಯಜ, ಜಾಯಪತ್ರ, ಕುಬ್ಜಕ, ಮಲ್ಲಿಕ, ಮಾಧವಿ, ಮುಂತಾದ ವೃಕ್ಷಗಳಿಂದ ಆ ಪರ್ವತವು ಬಹಳ ರಮಣೀಯವಾಗಿ ಕಾಣುತ್ತಿದೆ. ಪನಸ, ಔದುಂಬರ, ಅಶ್ವತ್ಥ. ಭೂರ್ಜರ, ಮುಂತಾದ ಮರ ಗಳು ಅನೇಕ ಓಷಧಿಗಳು ಅಲ್ಲಿ ಶೋಭಿಸುತ್ತಿವೆ. ಅಲ್ಲಿನ ಸುಂದರ ಸರೋವರ ಗಳಲ್ಲಿ ಕುಮುದ, ಕಲ್ಹಾರ ಶತಪತ್ರ, ಉತ್ಪಲ, ಮುಂತಾದ ಪುಷ್ಪಗಳು ಶೋಭಿಸುತ್ತಿವೆ. ಆ ಸರೋವರ ತೀರಗಳಲ್ಲಿ ಹಂಸ, ಸಾರಸಾದಿ ಪಕ್ಷಿಗಳು ಮಾತನಾಡಿಕೊಳ್ಳುತ್ತಿವೆ ಹರಿಣ, ಶಾಖಾಮೃಗ, ಹಂದಿ, ಸಿಂಹ, ಕರಡಿ, ಕಪಿಲ ಧೇನು, ಹುಲಿ, ಕಸ್ತೂರಿಮೃಗ, ಕಾಡೆಮ್ಮೆ, ಮುಂತಾದ ಪಶು, ಗಳು ಅಲ್ಲಲ್ಲಿ ಸಂಚರಿಸುತ್ತಿವೆ. ಸತಿಯು ಸ್ನಾನಮಾಡುವುದರಿಂದ ಪರಮ ಪವಿತ್ರವಾದ ಜಲವುಳ್ಳ ಪತಿತಪಾವನೆಯಾದ ಗಂಗೆಯಿಂದ, ನಾಲ್ಕುಕಡೆ ಯಿಂದಲೂ ಸುತ್ತುವರಿಯಲ್ಪಟ್ಟ ಕೈಲಾಸಪರ್ವತದ ಈ ಅಪೂರ್ವಶೋಭೆಯನ್ನು ನೋಡಿ ದೇವತೆಗಳೆಲ್ಲಾ ಆಶ್ಚರ್ಯಪಟ್ಟರು. ಆ ಕೈಲಾಸಪರ್ವತದಲ್ಲಿ ಕುಬೇರನ ವಾಸಸ್ಥಾನವಾದ ಅಲಕಾ ಪುರಿಯನ್ನೂ ಸೌಗಂಧಿಕವೆಂಬ ಕಮಲವುಳ್ಳ ಸೌಗಂಧಿಕವನ್ನು ನೋಡಿದರು.

ಹರಿಯ ಚರಣರಜಸ್ಸಿನಿಂದ ಪವಿತ್ರೀಕೃತಗಳಾದ ನಂದಾ, ಅಲಕ ನಂದಾ ಎಂಬ ಎರಡು ಗಂಗಾಪ್ರವಾಹಗಳನ್ನು ನೋಡಿದರು. ಯಾವ ದೇವತಾ ಸ್ತ್ರೀಯರು ತಂತಮ್ಮ ವಿಮಾನಗಳಿಂದಿಳಿದು ತಮ್ಮ ತಮ್ಮ ಪತಿಗಳೊಡನೆ ಜಲಕ್ರೀಡೆಯಾಡುತ್ತಾ ನೀರನ್ನು ಒಬ್ಬರಮೇಲೊಬ್ಬರು ಎರಚಾಡುತ್ತ ರತಿಯ ಶ್ರಮವನ್ನು ನಿವಾರಣೆಮಾಡಿಕೊಳ್ಳುವರೋ ಆ ದೇವಿಯರ ಸ್ನಾನದ ಫಲ ವಾಗಿ, ಕುಚಮಂಡಲದಿಂದ ಹೊರಹೊರಟ ನವಕುಂಕುಮ ವರ್ಣದಿಂದ ರಂಜಿತವಾದ ಸುಗಂಧಿತ ಜಲವನ್ನು ಹೆಣ್ಣಾನೆಗಳು ಬಾಯಾರಿಕೆ ಇಲ್ಲದಿದ್ದರೂ ಕುಡಿಯುವುವು. ಮತ್ತು ಗಂಡಾನೆಗಳಿಗೆ ಕುಡಿಸುವುವು ಆ ಅಲಕಾಪುರಿ ಯಲ್ಲಿ ದೊಡ್ಡದೊಡ್ಡ ಮನೆಗಳು ಬೆಳ್ಳಿ, ಬಂಗಾರ, ರತ್ನಗಳಿಂದ ಶೋಭಿಸು ತ್ತಿರುವವು. ಅಲ್ಲಿಯಕ್ಷಸ್ತ್ರೀಯರು ಸಂಚರಿಸುತ್ತಿರುವರು.

ದೇವತೆಗಳ ಜೊತೆಯಲ್ಲಿ ಹೋಗಿ ಈಶ್ವರನನ್ನು ಪ್ರಾರ್ಥಿಸುವಿಕೆ

ಕುಬೇರನ ಅಲಕಾ ಪುರಿಯನ್ನು ದಾಟಿ ದೇವತೆಗಳು ಸೌಗಂಧಿಕಾವನವನ್ನು ತಲಪಿದರು. ಅದು ಹೃದಯದ ಸಂಪೂರ್ಣ ಕಾಮನೆಯನ್ನು ಪೂರ್ಣಗೊಳಿಸಬಲ್ಲ ಆನಂದದಾಯಕಗಳಾದ ವೃಕ್ಷಗಳು ಫಲಪುಷ್ಪಗಳು ಇವುಗಳಿಂದ ಶೋಭಿಸುತ್ತಿದೆ. ಆವೃಕ್ಷಗಳಮೇಲೆ ದುಂಬಿಗಳು ಝೇಂಕಾರಮಾಡುತ್ತಿವೆ. ಕೋಗಿಲೆ ಮುಂತಾದ ಪಕ್ಷಿಗಳು ಕಲರವ ಮಾಡುತ್ತಿವೆ. ಜಲಾಶಯಗಳಲ್ಲಿ ಕಮಲಗಳು ಅರಳುತ್ತಿವೆ. ರಾಜಹಂಸಗಳು ಸಂತೋಷದಿಂದ ವಿಹಾರ ಮಾಡುತ್ತಿವೆ. ಕಾಡಾನೆಗಳು ತಮ್ಮ ಮೈಗಳನ್ನೂ ತಿಕ್ಕಿ ಹರಿಚಂದನವೃಕ್ಷಗಳ ತೊಗಟೆಗಳನ್ನು ಕಿತ್ತುಹಾಕುತ್ತಿವೆ. ಆ ವೃಕ್ಷಗಳಿಂದ ಹೊರಟ ಸುಗಂಧಿತ ವಾಯುವು ಯಕ್ಷಸ್ತ್ರೀಯರ ಸಮೀಪಕ್ಕೆ ಹೋಗಿ ಅವರ ಮನಸ್ಸನ್ನು ಕಡೆಯುತ್ತಿದೆ. ವೈಡೂರ್ಯದಿಂದ ಮಾಡಲ್ಪಟ್ಟ ಮೆಟ್ಟಿಲುಗಳಮೇಲೆ ಕುಳಿತಿರುವ ಯಕ್ಷರು, ಕಿಂಪುರುಷರು ಮನದಣಿಯುವಂತೆ ವಿಹಾರಮಾಡುತ್ತಿದ್ದಾರೆ. ಆ ವನವನ್ನು ದಾಟಿದ ನಂತರ ದೇವತೆಗಳು ಒಂದು ವಟವೃಕ್ಷವನ್ನು ನೋಡಿದರು. ಆ ವಟವೃಕ್ಷವು ನೂರು ಯೋಜನ ಎತ್ತರವಾಗಿದೆ. ಅದರ ಕೊಂಬೆಗಳು ಎಪ್ಪತ್ತೈದು ಯೋಜನದವರೆಗೂ ನಾಲ್ಕು ದಿಕ್ಕಿನಲ್ಲಿಯೂ ಹರಡಿಕೊಂಡಿವೆ. ಅದರ ದಟ್ಟವಾದ ತಂಪಾದ ನೆರಳು ನಾಲ್ಕು ಕಡೆಗೂ ಹಬ್ಬಿದೆ. ಅಲ್ಲಿ ತಾಪವೆಂಬ ಹೆಸರೇ ಇಲ್ಲ. ಆ ವೃಕ್ಷದಲ್ಲಿ ಯಾವ ಪಕ್ಷಿಯೂ ಶಬ್ದಮಾಡುವುದಿಲ್ಲ. ಆ ವಟವೃಕ್ಷವು ಮಹಾಯೋಗಮಯವಾದುದು. ಅದರ ಕೆಳಗೆ ಮೋಕ್ಷಾಪೇಕ್ಷಿಗಳಾದ ಯೋಗಿಗಳುಮಾತ್ರ ಹೋಗಬಲ್ಲರು.

ದೇವತೆಗಳು ಹೋಗಿ ನೋಡಿದಾಗ “ ಕಾಲಸದೃಶನಾದ ಶಿವನು ಕ್ರೋಧವಿಹೀನನಾಗಿ—ಶಾಂತನಾಗಿ ಕುಳಿತುಕೊಂಡಿದ್ದಾನೆ. ಶಾಂತಶರೀರರಾದ ಶಾಂತಸ್ವಭಾವರಾದ ಸನಂದನಾದಿ ಮಹಾಸಿದ್ಧರೂ ಯಕ್ಷರಾಕ್ಷಸರುಗಳಿಗೆ ಸ್ವಾಮಿಯಾದ ಕುಬೇರನೂ ಶಿವನನ್ನು ಉಪಾಸನೆಮಾಡುತ್ತಿದ್ದಾರೆ—ಸಮೀಪದಲ್ಲಿ ಕುಳಿತಿದ್ದಾರೆ. ಸಮಸ್ತ ಪ್ರಪಂಚಕ್ಕೆ ಸುಹೃದನಾದ ದೇವದೇವನಾದ ಶಿವನು ಏಕಾಗ್ರ ಚಿತ್ತದಿಂದ ಯೋಗಮುದ್ರೆಯನ್ನು ಅವಲಂಬಿಸಿದ್ದಾನೆ. ಯೋಗಿಗಳಿಗೆ—ತಪಸ್ವಿಗಳಿಗೆ ಪ್ರಿಯಚಿಹ್ನೆಗಳಾದ ಭಸ್ಮ, ದಂಡ,

ಜಟಾ, ಮೃಗ ಚರ್ಮಾದಿಗಳಿಂದಲಂಕೃತನಾಗಿದ್ದಾನೆ.* ಆತನ ಶರೀರವು ಸಂಧ್ಯಾಕಾಲದ ಮೇಘದಂತೆ ಅರುಣವರ್ಣವಾಗಿದೆ. ಶಿರಸ್ಸಿನಲ್ಲಿ ಚಂದ್ರಕಲೆಯು ಶೋಭಿಸುತ್ತಿದೆ. ಬ್ರಹ್ಮಚಾರಿಗಳಂತೆ ಕುಶಾಸನದಮೇಲೆ ಕುಳಿತಿದ್ದಾನೆ ನಾರದನು ಬ್ರಹ್ಮಜ್ಞಾನದ ವಿಷಯವಾದ ಪ್ರಶ್ನೆಯನ್ನು ಕೇಳುತ್ತಿದ್ದಾನೆ. ದೇವನು ಅವನಿಗೆ ಆ ಜ್ಞಾನವನ್ನು ಉಪದೇಶಮಾಡುತ್ತಿದ್ದಾನೆ. ಉಳಿದ ಸನಕಾದಿ ಸಜ್ಜನರು ಏಕಾಗ್ರಚಿತ್ತದಿಂದವನ್ನು ಕೇಳುತ್ತಿದ್ದಾರೆ. ಬಲತೊಡೆಯಮೇಲೆ ಎಡಗಾಲನ್ನಿಟ್ಟು ಜಾನುವಿನಮೇಲೆ ವಾಮಬಾಹುವನ್ನು ಒರಗಿಸಿ ದಕ್ಷಿಣಬಾಹುವಿನಿಂದ † ತರ್ಕಮುದ್ರೆಯನ್ನು ಧಾರಣೆಮಾಡಿ ವೀರಾಸನವನ್ನು ಹಾಕಿಕೊಂಡಿದ್ದಾನೆ. ಕೊರಳಲ್ಲಿ ರುದ್ರಾಕ್ಷಿಯು ಶೋಭಿಸುತ್ತಿದೆ. ಭಗವಾನ್ ಶಂಕರನು ವಾಮಭುಜದಿಂದ ಯೋಗದಂಡವನ್ನು ನಿಲ್ಲಿಸಿಕೊಂಡು ಏಕಾಗ್ರಮನಸ್ಸಿನಿಂದ ಬ್ರಹ್ಮಾನಂದವನ್ನು ಅನುಭವಮಾಡುತ್ತಿದ್ದಾನೆ.

ಹೀಗೆ ಮನನ ಶೀಲರಾದ ಮುನಿಗಳಲ್ಲಿ ಅಗ್ರಗಣ್ಯನಾದ ಭಗವಾನ್ ಶಂಕರನನ್ನು ಲೋಕಪಾಲ ಸಹಿತರಾದ ಮುನಿಗಳೂ ದೇವತೆಗಳೂ ನೋಡಿ ದಂಡವತ್ಪ್ರಣಾಮಮಾಡಿ ಚರಣಗಳಿಗೆರಗಿದರು. ದೇವತೆಗಳೂ ದೈತ್ಯರೂ ಅವರ ಒಡೆಯರೂ ಯಾರನ್ನು ಪ್ರಣಾಮಮಾಡಿ ಸೇವಿಸುವರೋ ಆ ಶಂಕರದೇವನು ಬ್ರಹ್ಮನು ಬಂದುದನ್ನು ನೋಡಿ ಲೋಕಾಚಾರವನ್ನನುಸರಿಸಿ ಕುಳಿತ ಆಸನದಿಂದೆದ್ದನು ತಾನು ಸ್ವತಃ ಜಗತ್ಪೂಜ್ಯನಾದರೂ ಅವನಿಗೆ ತಲೆಯನ್ನು ತಗ್ಗಿಸಿ ವಂದಿಸಿದನು (ಕಶ್ಯಪನಿಗೆ ವಾಮನಾವತಾರದಲ್ಲಿ ಹರಿಯು ವಂದಿಸಿದಂತೆ) ಶಿವನ ಸಮೀಪದಲ್ಲಿ ಕುಳಿತಿದ್ದಂಥ ಸಿದ್ಧರೂ ಮಹರ್ಷಿಗಳೂ ಆಸನಗಳಿಂದೆದ್ದು ಬ್ರಹ್ಮನಿಗೆ ನಮಸ್ಕಾರಮಾಡಿದರು. ಸರ್ವದೇವ

---

* ಆತನಿಗೆ ಯಾವದೇವನನ್ನೂ ಉಪಾಸನೆಮಾಡುವ ಅವಶ್ಯಕತೆಯಿಲ್ಲದಿದ್ದರೂ ಜನಗಳಿಗೆ ಮಾರ್ಗದರ್ಶನಮಾಡುವುದಕ್ಕಾಗಿ ಆ ಯೋಗಿರಾಜನು ಯೋಗಮುದ್ರೆಯನ್ನು ಧಾರಣೆಮಾಡಿದ್ದನು.

† ತರ್ಜನ್ಯಂಗುಷ್ಠಯೋರಗ್ರೇ ಮಿಥಃಸಂಯೋಜ್ಯ ಚಾಂಗುಲೀಃ ।
ಪ್ರಸಾರ್ಯಂ ಬಂಧನಂ ಪ್ರಾಹುಸ್ತರ್ಕಮುದ್ರೇತಿ ತಾಂತ್ರಿಕಾಃ ॥ ಯೋಗಶಾಸ್ತ್ರ

## ಬ್ರಹ್ಮನು ಕೈಲಾಸಕ್ಕೆ ದೇವತೆಗಳ ಜೊತೆಯಲ್ಲಿ ಹೋಗಿ ಈಶ್ವರನನ್ನು ಪ್ರಾರ್ಥಿಸುವಿಕೆ

ನಮಸ್ಕೃತನಾದ ಬ್ರಹ್ಮನು ಶಿವನು ತಾನು ಬಂದೊಡನೆ ಎದ್ದು ಗೌರವ ಕೊಟ್ಟಿದ್ದಕ್ಕಾಗಿ ಮುಗುಳುನಗೆನಗುತ್ತಾ ಚಂದ್ರಶೇಖರದೇವನೊಡನೆ ಹೇಳಿದನು.

" ದೇವದೇವ ! ಮಹಾದೇವ ! ನೀನು ಜಗತ್ತಿಗೆ ಕಾರಣಭೂತವಾದ-ಆದಿ ಮಾಯಾಶಕ್ತಿಯಾದ ಪ್ರಕೃತಿಗೆ ಪರಮಕಾರಣನಾದರೂ ಪ್ರಕೃತಿ ಪುರುಷ ಎಂಬ ಈ ಎರಡು ಶಕ್ತಿಗಳಿಗಿಂತಲೂ ಅತೀತನಾಗಿರುವೆ ಎಂಬುದನ್ನು ನಾನು ತಿಳಿದಿದ್ದೇನೆ. ಆದುದರಿಂದ ನೀನು ಭೇದರಹಿತನಾದ ನಿರ್ವಿಕಾರ ಪರಬ್ರಹ್ಮನು. ಕಾರಣವು ಕಾರ್ಯದಿಂದಹೇಗೆ ಭಿನ್ನವಾಗುವುದೆಂದು ಕೇಳುವಿಯೋ ? ಎಲೈ ಭಗವನ್ ! ಈ ಏಕರೂಪವಾದ ಅಭಿನ್ನ ಪುರುಷ—ಪ್ರಕೃತಿಗಳನ್ನು ನಿನ್ನಿಂದಲೇ ಪ್ರಕಟ ಮಾಡಿ ಇವುಗಳಮೂಲಕ ಕ್ರೀಡಿಸುತ್ತಿರುವ ನೀನು ಈ ವಿಶ್ವದ ಉತ್ಪತ್ತಿ ಸ್ಥಿತಿಲಯಗಳನ್ನು ಮಾಡುತ್ತಿರುವೆ. ಜೇಡರಹುಳುವು ತನ್ನಿಂದಲೇ ನೂಲನ್ನು ಹುಟ್ಟಿಸಿ ಬಲೆಯನ್ನು ಕಟ್ಟಿ ಕೆಲವುಕಾಲ ಅದರಲ್ಲಿ ಕ್ರೀಡಿಸಿ ನಂತರ ತನ್ನ ಇಚ್ಛೆಯಂತೆ ಅದನ್ನು ಉಪಸಂಹಾರಮಾಡುವಂತೆ ನೀನು ಸೃಷ್ಟಿಕಾರ್ಯವನ್ನು ನಡೆಸುತ್ತಿರುವೆ. ದೇವ ! ಧರ್ಮಾರ್ಥಕಾಮಗಳನ್ನು ಕೊಡುವ ವೇದತ್ರಯದ ರಕ್ಷಣೆಗಾಗಿ ನೀನೇ ನಿನ್ನ ಪ್ರೇರಣೆಯಿಂದಲೇ ದಕ್ಷನಿಂದ ಈ ಯಜ್ಞವನ್ನು ಸೃಷ್ಟಿಮಾಡಿಸಿದೆ. ದೇವ ! ನೀನೇ ನಿನ್ನ ವೇದರೂಪವಾದ ಆಜ್ಞೆಯಿಂದ ವರ್ಣಾಶ್ರಮಗಳ ಆಚಾರರೂಪವಾದ ಧರ್ಮದ ಮರ್ಯಾದೆಯನ್ನು ಸ್ಥಾಪನೆ ಮಾಡಿರುವೆ. ಆಚಾರನಿಷ್ಠರಾದ ಬ್ರಾಹ್ಮಣರು ನಿನ್ನ ವೇದರೂಪ ಆಜ್ಞೆಯನು ಪಾಲನೆಮಾಡುತ್ತಿರುವರು.

ಎಲೈ ಮಂಗಳಮಯನಾದ ಮಹೇಶನೇ, ಮಂಗಳಕರಗಳಾದ ಶುಭಕರ್ಮಗಳನ್ನು ಮಾಡುವವರಿಗೆ ಸ್ವರ್ಗಮೋಕ್ಷರೂಪಫಲಗಳನ್ನೂ ಅಮಂಗಳಮಯ ಅಶುಭ ಕರ್ಮಮಾಡುವವರಿಗೆ ಘೋರನರಕಗತಿಗಳನ್ನೂ ನೀನೇ ಕೊಡುತ್ತಿರುವೆ. ಯಾವ ಸಜ್ಜನರ ಚಿತ್ತವು ನಿನ್ನ ಚರಣ ಕಮಲಗಳಲ್ಲಿ ನಿಂತಿರುವುದೋ, ಯಾವ ಸಜ್ಜನರು ಸಮಸ್ತ ಪ್ರಾಣಿಗಳನ್ನು ನಿನ್ನಲ್ಲಿಯೇ ನೋಡುವರೋ ತಮ್ಮಲ್ಲಿ ಸಮಸ್ತಪ್ರಾಣಿಗಳನ್ನು ಬ್ರಹ್ಮಮಯವಾಗಿ ಭಾವಿಸಿ ತಮ್ಮಿಂದ ಬೇರೆಯಾಗಿ ತಿಳಿಯುವುದಿಲ್ಲವೋ ಅವರಮೇಲೆ ಕ್ರೋಧವು ತನ್ನ ಅಧಿಕಾರ

ವನ್ನು ನಡೆಸಲಾರದು. ಏಕೆಂದರೆ ಕ್ರೋಧವು ಭೇದಬುದ್ಧಿಗಳಾದ ನರಪಶು ಗಳಿಗೆ ಮಾತ್ರ ಧರ್ಮವು. ನಿನ್ನ ಭಕ್ತರಿಗೇ ಕ್ರೋಧವಿಲ್ಲದಿರುವಾಗ ನಿನಗೆ ಹೇಗೆ ಕ್ರೋಧವು ಬರುವುದು ? ನಿನ್ನ ಕ್ರೋಧದಿಂದ ವಿಪರೀತ ಫಲವುಂಟಾಗುವು ವೆಂದು ಹೇಳುವುದೂ ಅಸಂಗತವೇ ಆಗುವುದು. ಆದುದರಿಂದ ಆಯಾ ಕರ್ಮಗಳನ್ನು ಮಾಡುವವರ ಭಾವವೇ ವಿಪರೀತ ಕರ್ಮಫಲಕ್ಕೆ ಕಾರಣ ವಾಗುವುದು ಆದುದರಿಂದ ಭೇದದೃಷ್ಟಿಯುಕ್ತರಾಗಿ ಸ್ವರ್ಗಾದಿ ಕಾಮ್ಯ ಕರ್ಮಗಳಲ್ಲಿ ಲಿಪ್ತರಾದವರ ಅಂತಃಕರಣವು ಮಿಥ್ಯಾ ದೇಹಾಭಿಮಾನದಿಂದ ದೂಷಿತವಾಗಿರುವುದು. ಅವರು ಹಗಲೂ ರಾತ್ರಿಯೂ ಇತರರ ಉನ್ನತಿಯನ್ನು ನೋಡಿ ತಡೆಯಲಾರರು. ಆದುದರಿಂದ ಅವರ ಅಂತಃಕರಣವು ದಹಿಸುತ್ತಿರು ವುದು. ಮರ್ಮಸ್ಥಳಕ್ಕೆ ತಾಕಿ ಇತರರನ್ನು ನೋಯಿಸುವಂತಹ ಕಟುವಚನ ಗಳನ್ನಾಡುವ ಅಜ್ಞಾನಿಗಳು ಇತರರಿಗೆ ದುಃಖವನ್ನು ಕೊಡುವರು. ಅವರ ಕರ್ಮವೇ ಅವರನ್ನು ನಾಶಮಾಡುವುದು. ಈ ರೀತಿ ತಮ್ಮ ತಮ್ಮ ಕರ್ಮ ಗಳಿಂದಲೇ ಮೃತಪ್ರಾಯರಾಗಿರುವವರನ್ನು ನಿನ್ನಂತಹ ಮಹಾತ್ಮರು ಪುನಃ ಸಾಯಿಸುವುದಿಲ್ಲ. ಎಲೈ ಈಶನೆ! ನಿನ್ನ ಮಾಯೆಯಿಂದ ಮೋಹಿತ ರಾಗಿರುವ ಭೇದದೃಷ್ಟಿಯುಳ್ಳವರಲ್ಲಿ ಅಪರಾಧವನ್ನು ಕಂಡರೂ ನಿನ್ನಂತಹ ಮಹಾಪುರುಷರು ಕ್ರೋಧ ಮಾಡುವುದಕ್ಕೆ ಪ್ರತಿಯಾಗಿ ಅವರ ಮೇಲೆ ಕರುಣೆಯನ್ನು ತೋರಿಸುತ್ತಾರೆ. ಏಕೆಂದರೆ ಶೋಚನೀಯರಾದ ಮೂರ್ಖರ ಮೇಲೆ ದಯೆಯನ್ನು ತೋರಿಸುವುದೇ ನಿಮ್ಮಂತಹ ಸಜ್ಜನರ ಸ್ವಾಭಾವಿಕ ಗುಣವು. ಸಾಧುಜನಗಳು ಮಿಥ್ಯಾ ದೇಹಾಭಿಮಾನಿಗಳ ಮೇಲೆ ದಯೆಯನ್ನು ತೋರಿಸುವರಲ್ಲದೆ ತಮ್ಮ ಬಲವೀರ್ಯಗಳನ್ನು ಅವರ ಮೇಲೆ ಪ್ರಯೋಗಮಾಡರು. (ತೋರಿಸರು.) ಮೂಢರಂತೆ ಅವರೇನೂ ಅಜ್ಞಾನಿಗಳಲ್ಲ. ಪ್ರಭೋ! ನಿನ್ನ ಬುದ್ಧಿಯು ಅವರದರಂತೆ ಈಶ್ವರೀ ಮಾಯೆಯಿಂದ ಮೋಹಿತವಾಗಿಲ್ಲ. ನೀನು ಸರ್ವಜ್ಞನಾದ ಅಂತರ್ಯಾಮಿಯು. ಆದುದರಿಂದ ಅಂತಹ ಮಾಯಾಮೋಹಿತ ಕರ್ಮಲಿಪ್ತ ಜನರ ಮೇಲೆ ಅವರ ಅಪರಾಧಗಳನ್ನು ಲಕ್ಷ್ಯಕ್ಕೆ ತಾರದೆ ಅನುಗ್ರಹಮಾಡುವುದೇ ನ್ಯಾಯ. ಆದುದ ರಿಂದ ನೀನು ಅವರ ಅಪರಾಧಗಳನ್ನು ಕ್ಷಮಿಸಬೇಕು. ಯಜ್ಞಫಲವನ್ನು

ಕೊಡುವವನೂ ನೀನೇ ; ಯಜ್ಞಫಲಭೋಕ್ತನೂ ನೀನೇ. ಈ ದುರ್ಬುದ್ಧಿಗಳಾದ ಯಜ್ಞಕರ್ಮರು ನಿನಗೆ ಯಜ್ಞದಲ್ಲಿ ಭಾಗವನ್ನು ಕೊಡಲಿಲ್ಲ. ಆದುದರಿಂದ ದಕ್ಷಯಜ್ಞವು ನಿನ್ನಿಂದ ನಾಶಮಾಡಲ್ಪಟ್ಟಿತು. ಪೂರ್ಣವಾಗಲಿಲ್ಲ. ಈಗ ನೀನು ಅನುಗ್ರಹಮಾಡಿ ಆ ಯಜ್ಞವನ್ನು ಉದ್ಧಾರಮಾಡಬೇಕು. ಯಜ್ಞಕರ್ತೃವಾದ-ಯಜಮಾನನಾದ ದಕ್ಷನು ಬದುಕಿರಬೇಕು. ಭಗದೇವನಿಗೆ ಅವನ ಎರಡು ಕಣ್ಣುಗಳೂ ಪುನಃ ಹಿಂದಿನಂತೆ ಬರಬೇಕು. ಭೃಗುವಿಗೆ ಅವನ ಗಡ್ಡವು ಬರಬೇಕು. ಪೂಷನಿಗೆ ಅವನ ಹಲ್ಲುಗಳು ಬರಬೇಕು. ಯಾವ ಯಾವ ದೇವತೆಗಳಿಗೆ, ಋತ್ವಿಜರಿಗೆ ಯಾವ ಯಾವ ಅಂಗವು ನಷ್ಟವಾಗಿರುವುದೋ ಅದೆಲ್ಲವೂ ನಿನ್ನ ಅನುಗ್ರಹದಿಂದ ಹಿಂದಿನಂತೆ ಆಗಬೇಕು

ಯಜ್ಞವಿಧ್ವಂಸಕನಾದ ರುದ್ರನೆ! ಯಜ್ಞದಲ್ಲಿ ಏನೇನು ಉಳಿದಿರುವುದೋ ಅದೆಲ್ಲವೂ ನಿನ್ನ ಭಾಗವು. ಅದನ್ನು ನಿನ್ನ ಭಾಗವನ್ನಾಗಿ ಪರಿಗ್ರಹಿಸಿ ಯಜ್ಞವನ್ನು ಉದ್ಧಾರಮಾಡು.

ಬ್ರಹ್ಮನು ಹೀಗೆ ಪ್ರಾರ್ಥನೆಮಾಡಿ ನಿವೇದಿಸಿಕೊಳ್ಳಲು ಶಿವನು ಪ್ರಸನ್ನನಾದನು. ನಗುತ್ತಾ ಹೇಳಿದನು:-

ಹೇ ಬ್ರಹ್ಮನ್! ದಕ್ಷನಂತಹ ಬಾಲಬುದ್ಧಿಯುಳ್ಳ ಜನಗಳ ಅಪರಾಧಗಳನ್ನು ನಾನು ಲಕ್ಷ್ಯಮಾಡುವುದೂ ಇಲ್ಲ, ಅದನ್ನು ಸ್ಮರಣೆಗೆ ತೆಗೆದುಕೊಳ್ಳುವುದೂ ಇಲ್ಲ. ಏಕೆಂದರೆ ಅವರು ಈಶ್ವರೀ ಮಾಯೆಯಿಂದ ಮೋಹಿತರಾಗಿದ್ದಾರೆ ಆದರೆ ಇಂತಹ ಜನಗಳನ್ನು ಎಚ್ಚರಗೊಳಿಸುವುದಕ್ಕಾಗಿ ನಾನು ಇಂತಹ ಸಣ್ಣ ಶಿಕ್ಷೆಯನ್ನು ಕೊಟ್ಟಿದ್ದೇನೆ.

ಪ್ರಜಾಪತಿಯಾದ ದಕ್ಷನ ಶಿರಸ್ಸು ಅಗ್ನಿಯಲ್ಲಿ ದಹಿಸಿಹೋಗಿದೆ. ಅವನ ಮುಂಡದ ಮೇಲೆ ಕುರಿಯ ತಲೆಯು ಇಡಲ್ಪಡಲಿ. ಭಗದೇವನು ಮಿತ್ರದೇವನ ಕಣ್ಣುಗಳಿಂದ ತನ್ನ ಯಜ್ಞಭಾಗವನ್ನು ನೋಡುವಂತಾಗಲಿ ಪೂಷಾದೇವನು ಯಜಮಾನನ ಹಲ್ಲುಗಳಿಂದ ಹಿಟ್ಟುಮಾಡಿದ ಅನ್ನವನ್ನು ಭೋಜನಮಾಡಲಿ.

ಮತ್ತು ಯಾವ ಯಾವ ದೇವತೆಗಳಿಗೆಯಾವ ಯಾವ ಅವಯವವು ಕತ್ತರಿಸಲ್ಪಟ್ಟಿದೆಯೋ ಅದೆಲ್ಲಾ ಅವರು ನನ್ನಲ್ಲಿಗೆ ಬಂದು ತಮ್ಮ ತಮ್ಮ ಅಪರಾಧವನ್ನು ಒಪ್ಪಿಕೊಂಡು ಯಜ್ಞದಲ್ಲಿ ಉಳಿದ ಭಾಗವನ್ನೆಲ್ಲಾ ನನಗೆ ನಿಯಮ ಮಾಡಿರುವುದರಿಂದ ಯಾವಯಾವ ದೇವತೆಗಳ ಅವಯವಗಳು ಸಂಪೂರ್ಣನಷ್ಟವಾಗಿ ಹೋಗಿವೆಯೋ ಅವುಗಳು ಅಶ್ವಿನೀದೇವತೆಗಳ ಕೈಯಿಂದ ಪೂರ್ಣವಾಗಿ ಸರಿಯಾಗಿ ಮಾಡಲ್ಪಡಲಿ. ಯಾರ ಬಾಹುಗಳು ಮುರಿದುಹೋಗಿವೆಯೋ ಅವರು ಪೂಷಾದೇವನ ಬಾಹುಗಳಿಂದ ತಮ್ಮ ಕಾರ್ಯಗಳನ್ನು ನಡೆಸಿಕೊಳ್ಳಲಿ. ಹೀಗೆಯೇ ಅಧ್ವರ್ಯು ಮುಂತಾದವರೆಲ್ಲಾ ಸಾಂಗೋಪಾಂಗರಾಗಲಿ. ಭೃಗು ಋಷಿಗೆ ಕುರಿಯ ಗಡ್ಡವನ್ನು ಜೋಡಿಸಲಿ."

## ದಕ್ಷನು ಬದುಕುವುದು

ಈಶ್ವರನು ಹೀಗೆ ಹೇಳಿದನಂತರ ಎಲ್ಲರೂ 'ಸರಿಸರಿ, ಎಂದು ಸಂತೋಷ ಪಟ್ಟರು ಇಂದ್ರಾದಿದೇವತೆಗಳೂ ಮಹರ್ಷಿಗಳೂ ಬ್ರಹ್ಮನನ್ನೂ ಈಶ್ವರನನ್ನೂ ಪ್ರಾರ್ಥಿಸಿ ಮುಂದುಮಾಡಿಕೊಂಡು ಆ ಯಜ್ಞಶಾಲೆಗೆ ಬಂದರು. ಶಿವನು ಹೇಳಿದಂತೆ ಯಜ್ಞಪಶುವಾಗಿದ್ದ ಕುರಿಯತಲೆಯನ್ನು ದಕ್ಷನ ಮುಂಡದಮೇಲಿಟ್ಟು ಶಿರಸ್ಸು ಜೋಡಿಸಲ್ಪಟ್ಟಾಗ ಶಿವನು ಕೃಪಾದೃಷ್ಟಿಯಿಂದ ನೋಡಿದನು. ದಕ್ಷಪ್ರಜಾಪತಿಯು ಮಲಗಿದ್ದ ಮನುಷ್ಯನು ಏಳುವಂತೆ ಬದುಕಿ ಎದ್ದನು. ದಕ್ಷಪ್ರಜಾಪತಿಯು ಎದ್ದೊಡನೆಯೇ ತನ್ನೆದುರಿಗಿರುವ ಶಿವನನ್ನು ನೋಡಿದನು. ಈ ಹಿಂದೆ ಶಿವದ್ರೋಹದಿಂದ ದಕ್ಷನ ಮನಸ್ಸು ಮಲಿನವಾಗಿತ್ತು. ಈಗ ಶಂಕರನನ್ನು ನೋಡುತ್ತಿರುವಂತೆ ಶರದೃತುವಿನ ನಿರ್ಮಲ ಸರೋವರದಂತೆ ನಿರ್ಮಲ ವಾಯಿತು. ಶ್ರದ್ಧಾಪೂರ್ವಕವಾಗಿ ಈಶ್ವರನನ್ನು—ಸ್ತೋತ್ರಮಾಡಲುದ್ಯುಕ್ತನಾದನು. ತಟ್ಟನೆ ಅಗ್ನಿಪ್ರವೇಶ ಮಾಡಿದ ತನ್ನ ಮಗಳಾದ ಸತಿಯ ಜ್ಞಾಪಕಬಂದಿತು. ಕನ್ಯೆಯ ಸ್ನೇಹದಿಂದ ಕಂಠವು ಉಕ್ಕಿಬಂದಿತು. ಕಣ್ಣುಗಳಲ್ಲಿ ನೀರುತುಂಬಿದುವು. ಮಾತನಾಡಲಾಗಲಿಲ್ಲ. ಪ್ರೇಮದಿಂದ ಅವನ ಚಿತ್ತವುವಿಹ್ವಲವಾಯಿತು. ಸ್ವಲ್ಪಹೊತ್ತಿನಲ್ಲಿ ಮನಸ್ಸನ್ನು ಸರಿಮಾಡಿಕೊಂಡು ಮಾತನಾಡಲಾರಂಭಿಸಿದನು.

" ಭಗವನ್ ! ನಾನು ನಿಮ್ಮನ್ನು ಅನಾದರಮಾಡಿದೆನು. ಆದರೆ ತಾವು ನನಗೆ ಈ ಶಿಕ್ಷೆಯನ್ನು ಕೊಟ್ಟು ನನ್ನನ್ನು ಅನುಗ್ರಹಿಸಿದಿರಿ. ತ್ಯಾಗಮಾಡಿದ ನಂತರ ಇದು ಆದುದು ನನಗೆ ವಿವೇಕವನ್ನು ಕೊಡುವ ಶಿಕ್ಷೆಯೇ ಆಯಿತು. ತಾವೂ ಮತ್ತು ಹರಿಯೂ ಕಾಮ್ಯ ಕರ್ಮಗಳಲ್ಲಿ ಲಿಪ್ತನಾದ ಅಧಮ * ಬ್ರಾಹ್ಮಣನ ಮೇಲೆ ಅನುಗ್ರಹವನ್ನೇ ಮಾಡುವಿರಿ. ಅವನ ಅಪರಾಧಗಳನ್ನು ಲಕ್ಷಿಸುವುದಿಲ್ಲ. ಪ್ರಭು ! ಆದಿಯಲ್ಲಿ ಆತ್ಮತತ್ವವನ್ನು ರಕ್ಷಣೆಮಾಡುವುದ ಕ್ಕಾಗಿ ವಿದ್ಯಾತಪವ್ರತಗಳನ್ನು ಧಾರಣೆಮಾಡುವ ಬ್ರಾಹ್ಮಣರನ್ನು ನಿಮ್ಮ ಮುಖದಿಂದ ನೀವೇ ಸೃಷ್ಟಿಮಾಡಿದ್ದೀರಿ. ಎಲೈ ಸರ್ವಶ್ರೇಷ್ಠ ದೇವನೇ, ಸಮಸ್ತ ವಿಪತ್ತುಗಳಿಂದಲೂ ಬ್ರಾಹ್ಮಣರನ್ನು ನೀವೇ ರಕ್ಷಣೆಮಾಡಿದ್ದೀರಿ. ಪಶು ಪಾಲಕನು ಪಶುಗಳನ್ನು ರಕ್ಷಿಸುವಂತೆ ಜಗತ್ತಿನ ಜೀವರಾಶಿರೂಪ ಪಶುಗಳಿಗೆ ಒಡೆಯರಾಗಿ **ಪಶುಪತಿ** ಎಂಬ ಬಿರುದನ್ನು ಹೊಂದಿರುವಿರಿ ನನಗೆ ತತ್ತ್ವಜ್ಞಾನ ವಿಲ್ಲದುದರಿಂದ ಯಜ್ಞಸಭೆಯಲ್ಲಿ ನಾನು ನಿಮ್ಮನ್ನು ಮನಸ್ವಿ ಯಾಗಿ ದೂಷಿಸಿ ದುರ್ವಚನರೂಪಬಾಣಗಳ ಮಳೆಯನ್ನೇ ಕರೆದಿದ್ದೇನೆ. ನೀವು ನನ್ನ ಅಪರಾಧಗಳನ್ನು ಲಕ್ಷ್ಯಕ್ಕೆ ತರಲಿಲ್ಲ ಪರಮಪೂಜ್ಯರಾದ ನಿಮ್ಮ ದೂಷಣೆಯ ಪಾಪದ ಫಲವಾಗಿ ನರಕಕ್ಕೆ ಹೋಗುತ್ತಿರುವ ನನ್ನನ್ನು ಉದ್ಧಾರಮಾಡಿ ಅದಕ್ಕೆ ತಕ್ಕಶಿಕ್ಷೆಯನ್ನು ಕೊಟ್ಟು ಕೃಪಾದೃಷ್ಟಿಯಿಂದ ನೋಡಿದಿರಿ. ನಿಮ್ಮಸ್ವಭಾವವೇ ಪರೋಪಕಾರವು. ನಾನು ನನ್ನ ಪಾಪಕ್ಕೆ ಪ್ರತಿಯಾಗಿ ನಿಮಗೆ ಯಾವಸೇವೆಯನ್ನೂ ಮಾಡಿ ಸಂತೋಷಗೊಳಿಸಲಿಲ್ಲ- ತಾವೇ ನನ್ನಮೇಲೆ ಪ್ರಸನ್ನರಾದಿರಿ. "

ಹೀಗೆ ದಕ್ಷನು ಅಪರಾಧ ಕ್ಷಮೆಯನ್ನು ಯಾಚಿಸಿ ಬ್ರಹ್ಮನ ಆಜ್ಞೆಯನ್ನು ತೆಗೆದು ಕೊಂಡು ಉಪಾಧ್ಯಾಯ, ಋತ್ವಿಕ್, ಅಗ್ನಿ, ಮುಂತಾದುವುಗಳಿಂದ ಪುನಃ ಯಜ್ಞವನ್ನು ಆರಂಭಮಾಡಿದನು. ಬ್ರಾಹ್ಮಣರು ಯಜ್ಞಕರ್ಮದ

---

* ಬ್ರಾಹ್ಮಣನೆಂದರೆ ಬ್ರಹ್ಮಜ್ಞಾನಿಯಾದವನು. 'ಬ್ರಹ್ಮಜಾನಾತಿ ಬ್ರಾಹ್ಮಣಃ' ಬ್ರಹ್ಮಜ್ಞಾನವನ್ನೂ ಬಿಟ್ಟು ಸ್ವರ್ಗಾದಿಗಳ ಇಚ್ಛೆಯಿಂದ ಯಜ್ಞಾದಿಕರ್ಮಗಳಲ್ಲಿ ಲಿಪ್ತರಾಗಿರುವವರು ಅಧಮ ಬ್ರಾಹ್ಮಣರು. ಇಲ್ಲಿ ದಕ್ಷನು ತನ್ನನ್ನು ಅಧಮ ಬ್ರಾಹ್ಮಣನೆಂದು ಕರೆದು ಕೊಂಡಿದ್ದಾನೆ.

ವಿಸ್ತಾರಕ್ಕಾಗಿ ವಿಷ್ಣುಸಂಬಂಧಿಯಾದ ತ್ರಿಕಪಾಲಹವಿಸ್ಸನ್ನು ಹವನಮಾಡಿ ರುದ್ರನ ಪಾರ್ಷದರಾದ ಭೂತಪ್ರೇತ ಪಿಶಾಚಾದಿಗಳ ಸಂಸರ್ಗದಿಂದ ದೂಷಿತ ವಾದ ಯಜ್ಞಶಾಲೆಯನ್ನು ಶುದ್ಧಿಮಾಡುವುದಕ್ಕಾಗಿ ಪುರೋಢಾಶಹೋಮ ಮಾಡಿದನು. ಯಜಮಾನನಾದ ದಕ್ಷನು ಶುದ್ಧಚಿತ್ತದಿಂದ ಹರಿಯನ್ನು ಧ್ಯಾನ ಮಾಡಿದನು. ಅಧ್ವರ್ಯುವು ಹವಿಸ್ಸನ್ನು ಕೈಯಲ್ಲಿ ಹಿಡಿದುಕೊಂಡು ಹವನ ಮಾಡಲು ಎದ್ದುನಿಂತನು. ಹರಿಯು ಅಲ್ಲೇ—ಆ ಯಜ್ಞಶಾಲೆಯಲ್ಲಿಯೇ ಪ್ರಕಟನಾದನು.

## ಶ್ರೀ ಹರಿಯ ಆವಿರ್ಭಾವ

" ದೇವನು ಗರುಡಾರೂಢನಾಗಿದ್ದಾನೆ ! ಆ ಗರುಡನ ಎರಡು ರೆಕ್ಕೆಗಳೂ ವೇದಮಂತ್ರಗಳನ್ನು ಪಠಣಮಾಡುತ್ತಿವೆ. ಹತ್ತು ದಿಕ್ಕುಗಳಲ್ಲಿಯೂ ಈ ಹರಿಯ ತೇಜಸ್ಸು ದೇದೀಪ್ಯಮಾನವಾಗಿ ವ್ಯಾಪಿಸಿತು. ಅಲ್ಲಿದ್ದವರು ಈ ತೇಜಸ್ಸಿನಿಂದ ಬೆರಗಾದರು. ಶ್ರೀ ಹರಿಯ ಶ್ಯಾಮ ಶರೀರದ ಮೇಲೆ ಸ್ವರ್ಣಮಯ ಜರತಾರಿಪೀತಾಂಬರವು ಶೋಭಿಸುತ್ತಿದೆ. ಶಿರಸ್ಸಿನ ಮೇಲೆ ಕಿರೀಟವು ಸೂರ್ಯನಂತೆ ದೇದೀಪ್ಯಮಾನವಾಗಿದೆ. ಮುಖಮಂಡಲದಲ್ಲಿ ಕರ್ಣಕುಂಡಲವು ಹೊಳೆಯುತ್ತಿದೆ. ನೀಲ ಅಲಕಾವಳಿಯು (ಮುಂಗುರುಳು) ಶೋಭಾಯಮಾನವಾಗಿದೆ. ಭುಜಗಳಲ್ಲಿ ಶಂಖಚಕ್ರ ಗದಾಪದ್ಮ ಧನುಸ್ಸು ಬಾಣ ಭರ್ಜಿ ಮುಂತಾದ ಆಯುಧಗಳು ಶೋಭಿಸುತ್ತಿವೆ. ಸ್ವರ್ಣಾಭರಣಗಳ ಭುಜಗಳು ಪುಷ್ಪಭರಿತವಾದ ವೃಕ್ಷಶಾಖೆಗಳಂತೆ ಶೋಭಿಸುತ್ತಿವೆ. ಹೃದಯದಲ್ಲಿ ಲಕ್ಷ್ಮಿಯನ್ನೂ ವನಮಾಲೆಯನ್ನೂ ಧರಿಸಿರುವ ಆತನ ಆ ಮಂದಹಾಸಯುಕ್ತ ಮನೋಹರ ದೃಷ್ಟಿಯು ಜಗತ್ತಿಗೆ ಆನಂದವನ್ನು ಕೊಡುತ್ತಿರುವಂತೆ ತೋರುತ್ತಿದೆ. ಪಕ್ಕಗಳಲ್ಲಿನ ಪಾರ್ಷದರು ರಾಜಹಂಸಗಳಂತಿರುವ ಶ್ವೇತಚಾಮರಗಳನ್ನು ಬೀಸುತ್ತಿದ್ದಾರೆ. ಚಂದ್ರಮಂಡಲದಂತೆ ಶ್ವೇತಛತ್ರಿಯು ಶೋಭಿಸುತ್ತಿದೆ. "

ಹೀಗೆ ಯಜ್ಞಮಂಟಪಕ್ಕೆ ದಯಮಾಡಿಸಿದ ಶ್ರೀ ಹರಿಯನ್ನು ನೋಡುತ್ತಲೇ ಬ್ರಹ್ಮ ಶಿವ ಇಂದ್ರ ಮುಂತಾದ ದೇವತೆಗಳೆಲ್ಲರೂ ಎದ್ದು ವಂದಿಸಿದರು. ಹರಿಯ ತೇಜಸ್ಸಿನ ಎದುರಿಗೆ ಎಲ್ಲರ ತೇಜಸ್ಸೂ ಪ್ರಕಾಶಹೀನವಾಗಿ ಕಂಡಿತು.

ಎಲ್ಲರೂ ಗದ್ಗದಕಂಠರಾಗಿ ಸ್ತೋತ್ರಮಾಡಲಾರಂಭಿಸಿದರು. ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳ ವಾಣಿಯೂ ಬುದ್ಧಿಯೂ ಯಾವ ಈಶ್ವರನ ಮಹಿಮೆಯವರೆಗೂ ಹೋಗಲಾರದೆ ಕುಂಠಿತವಾಗುವುವೋ ಆ ಈಶ್ವರನ ಸ್ತೋತ್ರವನ್ನು ಎಲ್ಲರೂ ಅವರವರ ಬುದ್ಧಿಯ ಮಟ್ಟಕ್ಕೆ ತಕ್ಕಂತೆ ಮಾಡುತ್ತಾರೆ.

ಎಲ್ಲಕ್ಕೆ ಮುಂಚೆ ದಕ್ಷಪ್ರಜಾಪತಿಯು ಪೂಜಾಸಾಮಗ್ರಿಗಳನ್ನು ತೆಗೆದು ಕೊಂಡು ಸೃಷ್ಟಿಕರ್ತನಾದ ಬ್ರಹ್ಮನೇ ಮೊದಲಾದವರಿಗೂ ಪರಮಗುರುವಾದ ವಿಷ್ಣುವಿನ ಸಮೀಪಕ್ಕೆ ಬಂದನು. ಸುನಂದನಂದರೂಪಪಾರ್ಷದರಿಂದೊಡ ಗೂಡಿದ ಭಗವಂತನ ಎದುರಿಗೆ ಕೈಜೋಡಿಸಿಕೊಂಡು ಶುದ್ಧಚಿತ್ತದಿಂದ ಸ್ತೋತ್ರಮಾಡಲಾರಂಭಿಸಿದರು :—

" ಪ್ರಭು ! ನೀನು ಸ್ವಸ್ವರೂಪದಲ್ಲಿ ನಿಂತಿದ್ದೀಯೆ. ಶುದ್ಧಚೈತನ್ಯವೇ ನಿನ್ನ ರೂಪವು. ಬುದ್ಧಿಯ ಎಲ್ಲಾ ಅವಸ್ಥೆಗಳೂ ವಿಕಾರಗಳೂ ನಿನ್ನಲ್ಲಿಲ್ಲ. ಆದುದರಿಂದ ನೀನು ಅದ್ವಿತೀಯನು. ಭೇದಶೂನ್ಯನು. ಭಯರಹಿತನಾದ ಆನಂದಮೂರ್ತಿಯು. ಹೀಗಾದರೂ ನೀನು ಜೀವಸ್ವರೂಪನಲ್ಲ. ಮಾಯೆಗೆ ದೂರನಾಗಿ ಅದಕ್ಕೆ ಸ್ವತಂತ್ರನಾಗಿರುವ ಬ್ರಹ್ಮನು. ಆದರೂ ನೀನು ನಿನ್ನ ಸ್ವಾತಂತ್ರ್ಯದಿಂದಲೇ ಮಾಯೆಯನ್ನು ಅಂಗೀಕಾರಮಾಡಿ ಪುರುಷಲೀಲೆ ಯನ್ನು ಧಾರಣೆಮಾಡಿ ಅದೇ ಮಾಯೆಯಲ್ಲಿಯೇ ಅಶುದ್ಧನಾದ ಅಜ್ಞಾನಿ ಯಂತೆ ಜೀವಾತ್ಮರೂಪದಿಂದ ತೋರುತ್ತಿರುವೆ. "

ಋತ್ವಿಕರು :—

ಎಲೈ ನಿರಂಜನನೇ ! ನಮಗೆ ನಂದೀಶ್ವರನ ಶಾಪವಿರುವುದರಿಂದ ಕರ್ಮಮಾರ್ಗದಲ್ಲಿಯೇ ನಿಷ್ಠೆಯುಳ್ಳವರಾಗಿದ್ದೇವೆ. ನಿನ್ನ ತತ್ವವನ್ನು ತಿಳಿಯ ಲಾರೆವು. ಧರ್ಮವನ್ನೇ ಲಕ್ಷಿಸಿ ಮಾಡಲ್ಪಡುತ್ತಿರುವ, ವೇದದಿಂದ ಪ್ರತಿ ಪಾದಿತವಾದ ಈ ಯಜ್ಞದಲ್ಲಿ ಅಧಿಷ್ಠಾತೃಗಳಾದ ಇಂದ್ರಾದಿ ದೇವತೆಗಳು ನಿನ್ನ ಸ್ವರೂಪವೇ ಸರಿ.

ಸದಸ್ಯರು :—

ಎಲೈ ಆಶ್ರಯಸ್ವರೂಪನೆ ! ಈ ಸಂಸಾರಮಾರ್ಗವು ಬಹಳ ಕಠಿಣ ವಾದುದು. ಈ ಮಾರ್ಗದಲ್ಲಿ ವಿಶ್ರಾಂತಿ ಎಂಬುದೇ ಇಲ್ಲ. ಇದರಲ್ಲಿ ಎಲ್ಲಿ

ನೋಡಿದರೂ ಘೋರವಾದ ಕ್ಲೇಶವೆಂಬುದೊಂದೇ ವಿಶ್ರಾಮಸ್ಥಾನವು ಕಂ ಬರುತ್ತದೆ. ಇದರಲ್ಲಿ ಸಂಚರಿಸುವವರಿಗೆ ಕಾಲರೂಪೀ ಕೃಷ್ಣಸರ್ಪದ ಭಯ ಇದ್ದೇ ಇದೆ. ವಿಷಯರೂಪಮೃಗತೃಷ್ಣೆಯು (ಬಿಸಿಲ್ಗುದುರೆ) ಹೆಜ್ಜೆ ಹೆಜ್ಜೆ ಕಾಣಬರುತ್ತಿದೆ. ಸುಖದುಃಖರೂಪಿಗಳಾದ ಅನೇಕ ಹಳ್ಳಕೊಳ್ಳಗಳ ಎಲ್ಲೆಲ್ಲಿಯೂ ಖಲರೂಪೀ ಹುಲಿಯ ಭಯವಿದೆ. ಶೋಕರೂಪಿಯಾದ ಕಾಡ್ಗಿಚ್ಚು ಹತ್ತಿಕೊಂಡು ಉರಿಯುತ್ತಿದೆ. ಇಂತಹ ಸಂಸಾರಮಾರ್ಗದಲ್ಲಿ ಸಂಚರಿಸು ಅಜ್ಞಾನಿಯಾದ ಜೀವನು ನಿನ್ನ ಚರಣ ಕಮಲರೂಪಿಯಾದ ನಿರ್ಭ ಸ್ಥಾನವನ್ನು ಹೊಂದುವುದಾವಾಗ? ಅಭಿಮಾನಕ್ಕೆ ತವರ್ಮನೆಯಾ ಶರೀರವೂ ಮಮತೆಗೆಸ್ಥಾನವಾದ ಗೃಹವೂ ಒಲು ದೊಡ್ಡ ಹೊರೆಯಾ ಇವನಮೇಲೆ ನಿಂತಿರುವುವು. ಈ ಜೀವನು ಕಾಮಕ್ಕೆ ವಶನಾಗಿ ಸದ ತಪಿಸುತ್ತಿರುವನು.

ಶ್ರೀ ರುದ್ರಭಗವಾನ್ :—

ಎಲೈ ವರದದೇವ! ನಿನ್ನ ಪವಿತ್ರ ಚರಣಕಮಲಗಳೇ ಪುರುಷನಿಗೆ ಸಕ ಇಷ್ಟಾರ್ಥಗಳನ್ನೂ ಕೊಡ ಬಲ್ಲ ಕಾಮಧೇನುವಿನಂತಿರುವುವು. ಆದರೂ ಕಾಮನಾಶಹಿತರಾದ ಮುನಿಗಳು ನಿಷ್ಕಾಮರಾಗಿ ಈ ಚರಣ ಕಮಲಗಳನ್ನು ಭಜನೆ ಮಾಡುತ್ತಿರುವರು. ಭೋಗಮೋಕ್ಷ ಪ್ರದವಾದ ಈ ಚರಣ ಕಮಲಗಳನ್ನೇ ನಾನು ಸದಾ ಧ್ಯಾನಮಾಡುತ್ತಿರುವೆನು. ಅಜ್ಞಾನಿಗಳು ಆಚಾರಭ್ರಷ್ಟನೆಂದು ನನ್ನನ್ನು ನಿಂದೆಮಾಡಬಹುದು. ಆದರೂ ನಾನು ಅದಕ್ಕೆ ಲಕ್ಷ್ಯ ಕೊಡುವುದಿಲ್ಲ. ನನಗೆ ನಿನ್ನಅನುಗ್ರಹವು ಸದಾ ಇರುವುದರಿಂದ ನಾನು ಅದರಲ್ಲಿಯೇ ಸಂತುಷ್ಟನಾಗಿರುವೆನು.

ಭೃಗು :— ಎಲೈ ಈಶ್ವರನೇ! ಬ್ರಹ್ಮಾದಿದೇಹಧಾರಿಗಳು ನಿನ್ನ ಮಹಿಮೆಯಿಂದ ಮೋಹಿತರಾಗಿ ಅಜ್ಞಾನರೂಪ ಅಂಧಕಾರದಲ್ಲಿ ತೊಳಲು ತ್ತಿರುವರು. ನಿನ್ನ ತತ್ತ್ವವು ಅವರ ಆತ್ಮದಲ್ಲಿಯೇ ವಿರಾಜಮಾನವಾಗಿದ್ದರೂ ಅದನ್ನು ತಿಳಿಯಲಾರದೆ ಇರುವರು. ನಿನ್ನ ಮಾಯೆಯು ಪ್ರಬಲವಾದುದು. ನೀನು ನಿನ್ನನ್ನು ಶರಣುಹೊಂದಿ ಮೊರೆಬಿದ್ದವರ ಬಂಧುವಾಗಿರುವೆ. ನಾ ನಿನಗೆ ನಮಸ್ಕರಿಸುತ್ತೇವೆ ಶರಣಾಗತರಾದ ನಮ್ಮಲ್ಲಿ ಪ್ರಸನ್ನನಾಗು.

**ಬ್ರಹ್ಮ**—ಇಂದ್ರಿಯಗಳಿಂದ ಮನುಷ್ಯನು ಏನೇನು ಗ್ರಹಣ ಮಾಡು ವನೋ ಅದಾವುದೂ ಸತ್ಯರೂಪವಲ್ಲ. ಎಲ್ಲವೂ ಮಾಯಾ ಮಾತ್ರ. ನೀನು ಜ್ಞಾನಸಕ್ಕೆ ವಿಷಯನಾಗಿ, ಇಂದ್ರಿಯಗಳಿಗೆ ಆಶ್ರಯನಾದರೂ ಈ ಮಾಯಾ ಮಯ ಪದಾರ್ಥಗಳಿಗೆ ಸಿಕ್ಕದಂತಿರುವೆ.

**ಇಂದ್ರ**—ಅಚ್ಯುತ! ನೀನು ನಿರಾಕಾರನಾದರೂ, ನೀನು ಸಾಕಾರನಾಗುವುದೇನೂ ಕಷ್ಟವಲ್ಲ. ಅಂದರೆ ನೀನು ಹೇಗೆ ನಿರಾಕಾರನೋ ಹಾಗೆಯೇ ಸಾಕಾರನೂ ಆಹುದು ದೇವದ್ರೋಹಿಗಳಾದ ಅಸುರ ಗಣ ಗಳನ್ನು ನಾಶಮಾಡುವ ಶಸ್ತ್ರಗಳಿಂದ ಯುಕ್ತವಾದ ನಿನ್ನ ಈ ಶರೀರವು ಎಷ್ಟು ಮನೋಮೋಹಕವಾಗಿ ಆನಂದಕರವಾಗಿದೆ! ನಿನ್ನ ಈ ಶರೀರವೇ ಜಗತ್ಪಾಲಕವಾದುದು.

**ಋತ್ವಿಜ ಸ್ತ್ರೀಯರು**—ಎಲೈ ಯಜ್ಞರೂಪನೆ! ದಕ್ಷಪ್ರಜಾಪತಿಯು ನಿನ್ನ ಪೂಜೆಗಾಗಿಯೇ ಈ ಯಜ್ಞವನ್ನು ಪ್ರಾರಂಭ ಮಾಡಿದನು. ಆದೇ ದಕ್ಷನ ಮೇಲೆ ಕೋಪಗೊಂಡ ಶಿವನ ಕ್ರೋಧದಿಂದ ನಷ್ಟವಾಯಿತು. ಈಗ ನೀನು ಇದೇ ಯಜ್ಞವನ್ನು–ಸ್ಮಶಾನ ತುಲ್ಯವಾಗಿ ತೇಜೋಹೀನವಾದ ಈ ಯಜ್ಞಮಂಟಪವನ್ನು ನಿನ್ನ ನೇತ್ರ ಕಮಲಗಳಿಂದ ಚೆನ್ನಾಗಿ ನೋಡಿ ಅನುಗ್ರಹಿಸಿ, ಪವಿತ್ರವನ್ನಾಗಿ ಮಾಡು.

**ಋಷಿಗಳು**—ಭಗವನ್! ನಿನ್ನ ಚರಿತ್ರೆಯು ಅತ್ಯಂತ ವಿಚಿತ್ರವಾದುದು. ಸಾಮಾನ್ಯರಿಗೆ ಬುದ್ಧಿ ಗೋಚರವಾಗುವುದಿಲ್ಲ. ನೀನು ಕರ್ಮ ಮಾಡಿದರೂ, ಅವರಿಂದ ನಿರ್ಲಿಪ್ತನಾಗಿರುವೆ. ಬ್ರಹ್ಮಾದಿಗಳು ತಮ್ಮ ಶ್ರೇಯಸ್ಸಿಗಾಗಿ ಯಾವ ಲಕ್ಷ್ಮಿಯನ್ನು ಭಜಿಸುತ್ತಿರುವರೋ ಆ ಲಕ್ಷ್ಮೀದೇವಿಯು ಅವರ ನ್ನೆಲ್ಲಾ ಬಿಟ್ಟು ನಿನ್ನನ್ನು ಸೇವಿಸುತ್ತಿರುವಳು. ಆದರೂ ನೀನು ಆಕೆಯನ್ನು ಅಪೇಕ್ಷಿಸುವುದಿಲ್ಲ. ನಮ್ಮಗಳ ಮನೋರೂಪೀ ಗಜವು ಕ್ಲೇಶರೂಪೀ ದಾವಾನಲಕ್ಕೆ ಸಿಕ್ಕಿ ತಪಿಸುತ್ತಾ, ದಾಹ ನಿವಾರಣೆಗಾಗಿ ನಿನ್ನ ದಿವ್ಯ

ಕಥಾರೂಪ ಮಧುರ ಅಮೃತ ಪ್ರವಾಹವನ್ನು ಪ್ರವೇಶಿಸಿತು. ಈಗ ಅದಕ್ಕೆ ಆ ದಾವಾನಲದ ಸ್ಮರಣೆಯೂ ಬರುವುದಿಲ್ಲ. ಬ್ರಹ್ಮಾನಂದದಲ್ಲಿ ಮಗ್ನವಾಗಿರುವಂತೆ ಇದೆಯಾದುದರಿಂದ ಈ ಶೀತಲವಾದ ನದಿಯಿಂದ ಹೊರಕ್ಕೆ ಬರಲಾರದು.

**ದಕ್ಷಪತ್ನಿಯರು**—ಹೇ ದೇವ! ಬಾ! ನಮ್ಮಲ್ಲಿ ಪ್ರಸನ್ನನಾಗು. ನಿನಗೆ ಪ್ರಣಾಮಗಳು. ಶ್ರೀನಿವಾಸ! ನಿನ್ನ ಪ್ರಿಯೆಯಾದ ಲಕ್ಷ್ಮಿಯಿಂದ ನಮ್ಮನ್ನು ಅನುಗ್ರಹಿಸು. ನಾವು ಈಗ ಶ್ರೀ ಹೀನರಾಗಿದ್ದೇವೆ. ನಮಗೆ ತೇಜೋರೂಪಿಣಿಯಾದ ಲಕ್ಷ್ಮಿಯನ್ನು ಕೊಟ್ಟು ನಮ್ಮನ್ನು ಸನಾಥರನ್ನಾಗಿ ಮಾಡು. ಎಲೈ ಯಜ್ಞೇಶನೇ! ಕೈಕಾಲುಗಳಿದ್ದರೂ, ಶಿರಸ್ಸಿಲ್ಲದಿದ್ದರೆ, ದೇಹವು ಹೇಗೆ ಶೋಭಿಸುವುದಿಲ್ಲವೋ ಹಾಗೆ, ನೀನಲ್ಲದೆ ಇನ್ನಾವ ಅಂಗದಿಂದಲೂ ಈ ಯಜ್ಞವು ಶೋಭಿಸಲಾರದು.

**ಲೋಕಪಾಲರು**—ಎಲೈ ದೇವನೆ! ಈ ಜಗತ್ತನ್ನು ನೋಡುತ್ತಿರುವವನು ನೀನೇ. ಶಬ್ದಾದಿ ಸಮಸ್ತ ಪದಾರ್ಥಗಳನ್ನೆಲ್ಲಾ ಗ್ರಹಣ ಮಾಡುವ ಇಂದ್ರಿಯಗಳ ಮೂಲಕ ನೀನೊಬ್ಬನೇ ಕಾಣಬರುವವನು. ನಾವು ಎಲ್ಲಾ ಜೀವರಿಗೂ ಅವರ ಕರ್ಮಗಳಿಗೂ ಸಾಕ್ಷಿಗಳು. ಮಾಯೆಯನ್ನೇ ಬೆಳಗುತ್ತಿರುವ ಇಂದ್ರಿಯಗಳಿಂದ ನಿನ್ನನ್ನು ನಾವು ಹೇಗೆ ನೋಡಬಲ್ಲೆವು? ನಾವು ಮಾಯೆಯಿಂದ ಮೋಹಿತರಾಗಿದ್ದೇವೆ. ಪಂಚ ತತ್ವಗಳಿಗೆ ಪ್ರಕಾಶಕವಾದ ಆರನೆಯ ತತ್ವರೂಪ ಜೀವಾತ್ಮನನ್ನು ನೋಡುವಂತೆ ನೀನು ತೋರಿಸುತ್ತಿರುವುದರಿಂದ ಮಾಯಾ ಮೋಹಿತ ಇಂದ್ರಿಯಗಳಿಂದ ಶುದ್ಧ ಬ್ರಹ್ಮಸ್ವರೂಪನಾದ ನಿನ್ನನ್ನು ಹೇಗೆ ತಿಳಿಯಬಲ್ಲೆವು?

**ಯೋಗೇಶ್ವರರು**—ದೇವ! ನೀನು ವಿಶ್ವಾತ್ಮನು, ಪರಬ್ರಹ್ಮನು. ಯಾವ ವ್ಯಕ್ತಿಯು ನಿನ್ನನ್ನು ತನಗಿಂತ ಬೇರೆಯಾಗಿ ತಿಳಿಯುವು ದಿಲ್ಲವೋ ಅಂತಹವನಿಗಿಂತಲೂ ನಿನಗೆ ಹೆಚ್ಚಿನ ಪ್ರೀತಿಪಾತ್ರರು ಇಲ್ಲ.

ಯಾರು ಇಂತಹ ಅನನ್ಯ ಭಕ್ತಿಯಿಂದ ನಿನ್ನನ್ನು ಭಜಿಸುವರೋ ಅವರ ಮೇಲೆ ಭಕ್ತವತ್ಸಲನಾದ ನಿನ್ನ ಅನುಗ್ರಹವು ಸದಾ ಇರಬೇಕೆಂದೇ ನಾವು ನಿನ್ನನ್ನು ಪ್ರಾರ್ಥಿಸುತ್ತೇವೆ. ನಿನ್ನ ಮಾಯೆಯ ಗುಣಗಳು ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶಗಳಿಗೆ ಕಾರಣಗಳಾಗಿವೆ. ಅವುಗಳು ಜೀವರುಗಳ ಪೂರ್ವ ಕರ್ಮಾನುಸಾರ ವಿವಿಧವಾಗಿ ಕಾಣುತ್ತವೆ. ಅದೇ ಮಾಯೆಯ ವಿಭಿನ್ನ ಗುಣಗಳನ್ನು ಗ್ರಹಣಮಾಡಿ, ನೀನು ಬ್ರಹ್ಮಾದಿ ವಿವಿಧ ರೂಪಧಾರಣೆ ಮಾಡುತ್ತಿರುವೆ. ಬೇರೆ ಬೇರೆಯಾಗಿ ಕಾಣುತ್ತಿರುವೆ. ವಾಸ್ತವವಾಗಿ ನೀನು ನಿನ್ನ ರೂಪದಲ್ಲಿಯೇ ನಿಂತಿರುವೆ. ನೀನು ಏಕರೂಪನು. ಜಗತ್ತಿನಲ್ಲಿ ನೀನೊಬ್ಬನೇ ಇರುವವನು. ಮಾಯೆಯ ಗುಣಗಳು ನಿನ್ನಲ್ಲಿಲ್ಲ. ಆದುದ ರಿಂದ ಭೇದಭಾವವೂ ನಿನ್ನಲ್ಲಿಲ್ಲ. ಅಂತಹ ದೇವನಾದ ನಿನಗೆ ನಮಸ್ಕಾರ ಮಾಡುತ್ತೇವೆ.

ಶಬ್ದಬ್ರಹ್ಮ (ವೇದ) ವು ಸ್ತೋತ್ರಮಾಡಲಾರಂಭಿಸಿತು:—

ದೇವ! ನೀನು ಸತ್ವಗುಣವನ್ನು ಗ್ರಹಣಮಾಡಿದ್ದೀಯೆ. ಆದುದರಿಂದ ಧರ್ಮದ ಉತ್ಪತ್ತಿಯನ್ನೂ ಪಾಲನೆಯನ್ನೂ ಮಾಡುತ್ತಿರುವೆ. ನಿನಗೆ ಪ್ರಣಾಮಗಳು. ನೀನು ನಿರ್ಗುಣನೂ ಅಹುದು. ಒಬ್ಬನಲ್ಲಿಯೇ ನಿರ್ಗುಣದ ಮತ್ತು ಸಗುಣದ ಧರ್ಮವು ಅಸಂಭವವಾಗಿ ಕಾಣಬರುವುದಾದರೂ, ನಿನ್ನಲ್ಲಿ ಇದಾವುದೂ ಅಸಂಭವವಲ್ಲ. ನಿನ್ನ ತತ್ವವನ್ನು ನಾವಾಗಲೀ, ಬ್ರಹ್ಮಾದಿ ಗಳಾಗಲೀ ತಿಳಿಯಲಾರೆವು.

ಅಗ್ನಿ—ಯಾರ ತೇಜಸ್ಸಿನಿಂದ ನಾನು ತೇಜೋಯುಕ್ತನಾಗಿ ಸುಂದರ ಯಜ್ಞಗಳಲ್ಲಿ ಘೃತ ಮಿಶ್ರವಾದ ಆಹುತಿಯನ್ನು ದೇವತೆಗಳಿಗೆ ತಲಪಿಸುವೆನೋ, ಆ ಯಜ್ಞಮೂರ್ತಿಯಾದ ಯಜ್ಞರಕ್ಷಕನೇ ನೀನು. ಅಗ್ನಿಹೋತ್ರ, ದರ್ಶ, ಪೌರ್ಣಮಾಸ, ಚಾತುರ್ಮಾಸ್ಯ, ಪಶುಸೋಮ ಎಂಬ

*ಐದು ವಿಧವಾದ ಯಜ್ಞಮಂತ್ರಗಳಿಂದ ನೀನೇ ಪೂಜಿಸಲ್ಪಡುತ್ತಿರುವೆ.

**ಎಲ್ಲ ದೇವತೆಗಳು**—ಹೇ ನಾಥ! ನೀನೇ-ಆದಿಪುರುಷನು. ಪ್ರಳಯ ಕಾಲದಲ್ಲಿ ನಿನ್ನಿಂದಲೇ ರಚಿತವಾದ ಈ ಮಾಯಾಜಾಲರೂಪ ಪ್ರಪಂಚ ವನ್ನು ನಿನ್ನ ಉದರದಲ್ಲಿ ಲೀನಮಾಡಿಕೊಂಡು ಮಹಾಸಾಗರರೂಪ ಜಲ ದಲ್ಲಿ ಶೇಷಶಯನನಾಗುವೆ. ಜನೋಲೋಕ ಮುಂತಾದುವುಗಳಲ್ಲಿ ವಾಸಿಸುವ ಸಿದ್ಧರು, ತಮ್ಮತಮ್ಮ ಹೃದಯದಲ್ಲಿ ನಿನ್ನ ಆಧ್ಯಾತ್ಮ ಪದವಿಯನ್ನು ಕುರಿತು ಚಿಂತಿಸುತ್ತಿರುವರು. ಅಂತಹ ನಿನ್ನನ್ನು ಈಗ ನಮ್ಮ ಕಣ್ಣುಗಳಿಂದ ದರ್ಶನಮಾಡುವ ಭಾಗ್ಯವು ಒದಗಿತು. ಸೇವಕರಾದ ನಮ್ಮನ್ನು ಹೀಗೆಯೇ ಸದಾ ರಕ್ಷಿಸುತ್ತಾ ಅನುಗ್ರಹಿಸಬೇಕು.

**ಗಂಧರ್ವರು**—ಮರೀಚ್ಯಾದಿ ಋಷಿಗಳು, ಬ್ರಹ್ಮ, ಇಂದ್ರ ಮುಂತಾದ ದೇವತೆಗಳೂ ನಿನ್ನ ಅಂಶರೂಪರಾಗಿ, ಅಂಶದಲ್ಲಿ ಅಂಶರೂಪವಾದ ಕಲಾರೂಪ ವಾಗಿರುವರು. ಹೇ ನಾಥಾ! ಈ ಬ್ರಹ್ಮಾಂಡವು ನಿನ್ನ ಕ್ರೀಡಾಮಂದಿರ! ಇಂತಹ ನಿನ್ನನ್ನು ನಾವು ನಿತ್ಯನಿರಂತರ ನಮಸ್ಕರಿಸುತ್ತೇವೆ

**ವಿದ್ಯಾಧರರು**—ದೇವ! ಈ ಮನುಷ್ಯ ಶರೀರವು ಸಮಸ್ತ ಪ್ರಯೋಜನಗಳಿಗೂ ಸಿದ್ಧಿ ಸಾಧನವಾಗಿದೆ. ಇದನ್ನು ಹೊಂದಿಯೂ ಮಾಯಾ

---

* ಐದು ಮಂತ್ರಗಳು ಇವು.

೧] "ಓಶ್ರಾವಯ" ನಾಲ್ಕು ಅಕ್ಷರವುಳ್ಳದ್ದು.

೨] "ಯಜ" ಎರಡು ಅಕ್ಷರವುಳ್ಳದ್ದು.

೩] "ಯೇಯಜಾಮಹೇ" ಐದು ಅಕ್ಷರವುಳ್ಳದ್ದು.

೪] "ವಷಟ್ಕಾರ" ನಾಲ್ಕು ಅಕ್ಷರವುಳ್ಳದ್ದು.

೫] "ಸ್ವಾಹಾ" ಎರಡು ಅಕ್ಷರವುಳ್ಳದ್ದು.

ಸ್ಮೃತಿ। ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವಚ ।
ಹೂಯತೇ ಚ ಪುನರ್ದ್ವಾಭ್ಯಾಂ ಸವೋ ವಿಷ್ಣುಃ ಪ್ರಸೀದತು ॥

ಮೋಹಿತನಾದ ಈ ಕುಮತಿಯಾದ ಜೀವನು ಈ ಶರೀರದಲ್ಲಿ ಮತ್ತು ಇದಕ್ಕೆ ಸಂಬಂಧಪಟ್ಟ ಸ್ತ್ರೀಪುತ್ರಾದಿಗಳಲ್ಲಿ "ನಾನು, ನನ್ನದು" ಎಂಬ ಮಿಥ್ಯಾಭಿಮಾನವನ್ನು ಮಾಡುತ್ತಾನೆ. ದುರ್ಮಾರ್ಗಿಗಳಾದ ಪುತ್ರಾದಿಗಳು ಇವನನ್ನು ತ್ಯಾಗಮಾಡಿದರೂ ಇವನು ಮಾತ್ರ ಮಿಥ್ಯಾ ವಿಷಯಗಳಲ್ಲಿನ ಭ್ರಾಂತಿಯನ್ನು ಬಿಡದೆ ವೈರಾಗ್ಯವನ್ನು ಹೊಂದುವುದಿಲ್ಲ. ಇಂತಹ ಜೀವನು ಎಂದೆಂದಿಗೂ, ಮೋಹದಿಂದ ಮುಕ್ತಿಯನ್ನು ಹೊಂದಲಾರನು. ಆದರೆ ಯಾವನು ನಿನ್ನ ಕಥಾರೂಪೀ ಅಮೃತ ಪಾನಮಾಡುವನೋ ಅವನು ಶೀಘ್ರ ವಾಗಿ ನಿನ್ನ ಭಕ್ತಿಯಿಂದ ಮಾಯಾಮೋಹವನ್ನು ತ್ಯಜಿಸಿ ಸಂಸಾರದಿಂದ ಮುಕ್ತನಾಗಬಲ್ಲನು.

ಬ್ರಾಹ್ಮಣರು—ಭಗವನ್! ಯಜ್ಞಹವಿ, ಅಗ್ನಿ, ಮಂತ್ರ, ಕುಶ, ಯಜ್ಞ, ಪಾತ್ರೆ, ಸದಸ್ಯ, ಋತ್ವಿಜ, ಯಜಮಾನ, ಯಜಮಾನಪತ್ನಿ, ದೇವತಾ, ಯಜ್ಞಸಮಿಧಾ, ಅಗ್ನಿಹೋತ್ರ, ಸ್ವಧಾ, ಸೋಮ, ಆಜ್ಯ, ಬಲಿಪಶು ಮುಂತಾದುದೆಲ್ಲವೂ ನಿನ್ನ ಸ್ವರೂಪವೇ. ಎಲೈ ಯಜ್ಞಪುರುಷನೆ! ಗಜರಾಜನು ಕಮಲವನ್ನು ನೀರಿನಿಂದ ಕಿತ್ತು ಹೊರಕ್ಕೆ ಹಾಕುವಂತೆ, ಆದಿಯಲ್ಲಿ ಸಾಕಾರರೂಪವನ್ನು ಧಾರಣೆ ಮಾಡಿ. ರಸಾತಳದಲ್ಲಿ ಬಿದ್ದಿದ್ದಂಥಾ ಭೂಮಿಯನ್ನು ಲೀಲಾಜಾಲವಾಗಿ ಮೇಲಕ್ಕೆತ್ತಿ ತಂದವನು ನೀನೇ! ಭೂಮಿಯನ್ನು ಕೋರೆದಾಡೆಯ ಮೇಲೆತ್ತಿಕೊಂಡು ಬರುತ್ತಿದ್ದಂಥಾ ನಿನ್ನ ರೂಪವು ಬಲು ಸುಂದರವಾಗಿ ಕಾಣುತ್ತಿತ್ತು. ನಿನ್ನ ಅದ್ಭುತ ಲೀಲೆಯನ್ನು ನೋಡಿ ಸಿದ್ಧಪುರುಷರು ನಿನ್ನನ್ನು ಸ್ತೋತ್ರ ಮಾಡುತ್ತಿದ್ದರು. ಅಂತಹ ದೇವನೇ, ನೀನು ಈಗ ನಮ್ಮ ಮೇಲೆ ಪ್ರಸನ್ನನಾಗು. ನಮ್ಮ ಯಜ್ಞಕರ್ಮವು ಭ್ರಷ್ಟವಾಗಿ ಹೋಗಿದೆಯಾದುದರಿಂದ ನಿನ್ನ ದರ್ಶನವನ್ನು ನಾವು ಅಪೇಕ್ಷಿಸಿದೆವು. ನಿನ್ನ ಕೃಪಾದೃಷ್ಟಿಯಿಂದ ನೋಡಿ, ನಮ್ಮ ಈ ನಷ್ಟ ಯಜ್ಞವನ್ನು ಉದ್ಧರಿಸು. ಹೇ ಯಜ್ಞೇಶ್ವರ! ನಿನ್ನ ಕೇವಲ ನಾಮ ಸ್ಮರಣೆಯಿಂದಲೇ ಯಜ್ಞದ ಸಮಸ್ತ ವಿಘ್ನವೂ ನಾಶವಾಗುತ್ತಿರುವಾಗ ನೀನೇ ಸಾಕ್ಷಾತ್ ದರ್ಶನ ಕೊಟ್ಟಿರುವುದರಿಂದ ಇದು ಖಂಡಿತವಾಗಿಯೂ

ಉದ್ಧಾರವಾಗುವುದು. ನಾವು ಬಾರಿಬಾರಿಗೂ ನಿನ್ನನ್ನು ನಮಸ್ಕರಿಸುತ್ತೇವೆ.

ಈ ರೀತಿಯಾಗಿ ಎಲ್ಲರೂ ಯಜ್ಞಪಾಲಕನಾದ ವಿಷ್ಣುವನ್ನು ಸ್ತೋತ್ರ ಮಾಡಿದರು. ನಂತರ ದಕ್ಷನು ವೀರಭದ್ರನಿಂದ ನಾಶವಾಗಿದ್ದ ಯಜ್ಞವನ್ನು ಪುನಃ ಪ್ರಾರಂಭಿಸಿದನು. ವಿಷ್ಣುವು ಸಮಸ್ತ ಪ್ರಾಣಿಗಳ ಆತ್ಮಸ್ವರೂಪನಾಗಿದ್ದಾನೆ. ಎಲ್ಲ ಪೂಜೆಗಳೂ ಮುಟ್ಟುವುದು ಆತನಿಗೇ. ಆತನು ನಿತ್ಯತೃಪ್ತನು. ಆತನಿಗೆ ಮತ್ತಿನ್ನಾವ ಪೂಜಾದಿಗಳ ಆಶೆಯೂ ಇಲ್ಲ. ಆದರೂ ಭಕ್ತವತ್ಸಲನಾದುದರಿಂದ ಅರ್ಪಿಸಿದ ಪೂಜಾ ಭಾಗವನ್ನು ಸ್ವೀಕರಿಸಿ ಸಂತೋಷವನ್ನು ವ್ಯಕ್ತಪಡಿಸುತ್ತಾ ದಕ್ಷನಿಗೆ ಹೇಳಿದನು.:—

"ದಕ್ಷ! ಜಗತ್ಕಾರಣನಾದ ಆತ್ಮ, ಈಶ್ವರ, ಸಾಕ್ಷಿ, ಸ್ವಯಂಪ್ರಕಾಶಿತ ಮಾಯೆಯ ಉಪಾಧಿರಹಿತ ಪರಬ್ರಹ್ಮನೇ ನಾನು! ಈ ಬ್ರಹ್ಮ ಮತ್ತು ಶಿವ ಇವರಿಬ್ಬರೂ ನನ್ನ ರೂಪಗಳೇ. ನನ್ನ ಗುಣಮಯಿಯಾದ ಮಾಯೆಯನ್ನು ಗ್ರಹಣ ಮಾಡಿ, ಈ ಜಗತ್ತಿನ ಉತ್ಪತ್ತಿ, ಪಾಲನ, ಸಂಹಾರ ರೂಪಗಳಾದ ಭಿನ್ನ ಭಿನ್ನ ಕಾರ್ಯಗಳನ್ನು ಮಾಡುವುದಕ್ಕಾಗಿ ಬ್ರಹ್ಮ, ವಿಷ್ಣು, ಶಿವ ಎಂಬ ಭಿನ್ನಭಿನ್ನ ನಾಮಗಳನ್ನು ಯಥಾಕ್ರಮವಾಗಿ ಧಾರಣೆ ಮಾಡುತ್ತೇನೆ.

ನಾನು ಒಬ್ಬನೇ ಆದ ಅದ್ವಿತೀಯ ಪರಬ್ರಹ್ಮನು. ನನ್ನಿಂದ ಬ್ರಹ್ಮನನ್ನೂ ರುದ್ರನನ್ನೂ ಬೇರೆಯಾಗಿ ತಿಳಿಯುವ ಭೇದಬುದ್ಧಿಯುಳ್ಳ ಮನುಷ್ಯನು ಮೂರ್ಖನು. ನನ್ನ ಭಕ್ತರಾದ ಜ್ಞಾನಿಗಳು ಬ್ರಹ್ಮಾದಿಗಳಲ್ಲಿಯೇ ಅಲ್ಲ, ತಂತಮ್ಮ ತಲೆ ಕೈಕಾಲುಗಳೆಂಬ–ಒಂದೇ ಶರೀರದ ಅವಯವಗಳಲ್ಲಿ ಭೇದ ಮಾಡದಿರುವಂತೆ ಜಗತ್ತಿನ ಸಮಸ್ತ ಪ್ರಾಣಿಗಳಲ್ಲಿಯೂ ಭೇದವನ್ನು ಮಾಡಲಾರರು.

ನಾವು ಮೂವರೂ ಒಂದೇ ಪರಬ್ರಹ್ಮ ಸ್ವರೂಪರು. ನಾವೇ ಸಮಸ್ತ ಪ್ರಾಣಿಗಳ ಆತ್ಮಸ್ವರೂಪರಾಗಿದ್ದೇವೆ. ಹೀಗೆ ಯಾರು ನಮ್ಮ ಮೂವರಲ್ಲಿ

ಹಾಗೆಯೇ ಬ್ರಹ್ಮನಿಂದ ಹಿಡಿದು ಸಮಸ್ತ ಪ್ರಾಣಿಗಳಲ್ಲಿಯೂ, ಹಾಗೆಯೇ ನಮ್ಮಲ್ಲಿಯೂ, ತನ್ನಲ್ಲಿಯೂ ಭೇದಭಾವವನ್ನಿಡುವುದಿಲ್ಲವೋ ಆತನಿಗೇ ಸಂಪೂರ್ಣ ಶಾಂತಿಯು ಲಭ್ಯವಾಗುವುದು."

ಈರೀತಿಯಾಗಿ ಭಗವಂತನಾದ ಹರಿಯಿಂದ ಆಜ್ಞೆಯನ್ನು ಶಿರಸಾ ಧಾರಣೆಮಾಡಿ, ಪ್ರಜಾಪತಿಗಳಿಗೆಲ್ಲಾ ಪತಿಯಾದ ದಕ್ಷನು ಶ್ರದ್ಧೆಯಿಂದ ವಿಧಿಪೂರ್ವಕವಾಗಿ ಯಜ್ಞದಿಂದ ಹರಿಯನ್ನು, ಅಂಶದೇವತೆಗಳನ್ನೂ, ಪ್ರಧಾನದೇವತೆಗಳನ್ನೂ ಪೂಜಿಸಿದನು. ಏಕಾಗ್ರ ಚಿತ್ತನಾಗಿ ರುದ್ರಭಾಗ ದಿಂದ ರುದ್ರನನ್ನು ಪೂಜಿಸಿದನು. ಯಜ್ಞವನ್ನು ಕೊನೆಮುಟ್ಟಿಸುವ "ಉಪವಸಾನ" ಕರ್ಮದಿಂದ ಸೋಮಪಾನ ಮಾಡುವ ದೇವತೆಗಳು, ಋತ್ವಿಕ್ಕು ಗಳು, ಆಚಾರ್ಯ, ಸದಸ್ಯ ಮುಂತಾದ ಉಳಿದ ಜನರನ್ನು ಗೌರವಿಸಿದನು. ಕೊನೆಗೆ ಯಜ್ಞವನ್ನು ಸಮಾಪ್ತಿಮಾಡಿ, ಋತ್ವಿಕ್ ಆದಿಗಳೊಡನೆ ಅವಭೃಥ ಸ್ನಾನವನ್ನು ಮಾಡಿದನು.

ದಕ್ಷಪ್ರಜಾಪತಿಯು ತನ್ನ ಪ್ರಭಾವದಿಂದ ಸಿದ್ಧ–ಬ್ರಹ್ಮಜ್ಞಾನಿಯಾದರೂ, ಧಾರ್ಮಿಕನಾದರೂ ದೇವತೆಗಳು ಅವನಿಗೆ ಧರ್ಮಸ್ವರೂಪದ ಉಪದೇಶ ಮಾಡಿ ಸ್ವರ್ಗಕ್ಕೆ ಹೊರಟರು

ಹೀಗೆ ದಕ್ಷನ ಮಗಳಾದ ಸತೀದೇವಿಯು ತನ್ನ ಹಿಂದಿನ ಶರೀರವನ್ನು ತ್ಯಾಗಮಾಡಿ ಹಿಮವಂತನ ಪತ್ನಿಯಾದ ಮೇನಕೆಯ ಉದರದಲ್ಲಿ ಹುಟ್ಟಿ ದಳು ಎಂದು ಪ್ರಸಿದ್ಧವಾಯಿತು. ಪ್ರಳಯಕಾಲದಲ್ಲಿ ಸುಪ್ತವಾಗಿದ್ದ ಪ್ರಕೃತಿರೂಪೀ ಶಕ್ತಿಯು ಜಗದ್ಬೀಜನಾದ ಪುರುಷನನ್ನೇ ಭಜಿಸುವಂತೆ, ಈ ಅಂಬಿಕೆಯು ತನ್ನ ಪ್ರಿಯಪತಿಯಾದ ಶಿವನನ್ನು ತನ್ನ ಈ ಎರಡನೇ ಜನ್ಮ ದಲ್ಲಿಯೂ ಪತಿಯಾಗಬೇಕೆಂದು ಇಚ್ಛಿಸಿದಳು. ಈಶ್ವರನು ಅನನ್ಯಭಾದಿಂದಲೇ ಲಭ್ಯನು.

ದಕ್ಷಯಜ್ಞ ಧ್ವಂಸಕವಾದ ಈ ಶಂಭುವಿನ ಚರಿತ್ರೆಯನ್ನು ಬೃಹಸ್ಪತಿಯ ಶಿಷ್ಯನಾದ ಪರಮ ಭಗವದ್ಭಕ್ತ ಉದ್ಧವನಿಂದ ನಾನು ಕೇಳಿದೆನು.

ಪರಮಪವಿತ್ರವಾದ, ಯಶಸ್ಸನ್ನು ಕೊಡುವ, ಆಯುರ್ವೃದ್ಧಿಕಾರಕವಾದ, ಪಾಪನಾಶಕವಾದ ಈ ಈಶ್ವರಚರಿತ್ರೆಯನ್ನು ಭಕ್ತಿಭಾವದಿಂದ ಯಾರು ಕೇಳುತ್ತಾರೆಯೋ, ನಿತ್ಯವೂ ಪಠಿಸುತ್ತಾರೆಯೋ ಅವರು ಜನ್ಮಮರಣರೂಪವಾದ ಸಂಸಾರಕ್ಕೆ ಹಿಂದಿರುಗಲಾರರು.



# ತ್ರಯೋವಿಂಶ ಕಿರಣ

ಮೈತ್ರೇಯರು ಹೇಳುತ್ತಾರೆ—

" ವತ್ಸ ವಿದುರ ! ಸನಕಸನಂದನಾದಿ ನಾಲ್ಕು ಋಷಿಗಳು, ಮತ್ತು ನಾರದ, ಋಭು, ಹಂಸ, ಅರುಣ, ಯತಿ ಈ ಒಂಭತ್ತು ಜನ ಬ್ರಹ್ಮಪುತ್ರರು ಬಾಲಬ್ರಹ್ಮಚಾರಿಗಳಾಗಿ ವಿವಾಹ ಮಾಡಿಕೊಳ್ಳಲಿಲ್ಲ. ಆದುದರಿಂದ ಇವರಿಗೆ ವಂಶವಿಲ್ಲ ಅಧರ್ಮನೂ ಬ್ರಹ್ಮಪುತ್ರನೇ. ಅವನ ಹೆಂಡತಿಯು ಮೃಷಾ (ಸುಳ್ಳು) ಎಂಬುವಳು. ಅವಳಲ್ಲಿ ಅಧರ್ಮನಿಂದ ಧಂಭ ಎಂಬ ಮಗನೂ, ಮಾಯಾ ಎಂಬ ಮಗಳೂ ಹುಟ್ಟಿದರು. ಈ ಇಬ್ಬರನ್ನೂ ನಿರ್ಋತಿಯು ತೆಗೆದುಕೊಂಡು ಹೋದನು. ಏಕೆಂದರೆ ಅವನಿಗೆ ಮಕ್ಕಳಿರಲಿಲ್ಲ. ಮಾಯಾ ಮತ್ತು ದಂಭ ಇವರಿಬ್ಬರೂ ಒಡಹುಟ್ಟಿದವರೇ ಆದರೂ ಅಧರ್ಮನ ಅಂಶದಿಂದ 'ಹುಟ್ಟಿದವರಾದುದರಿಂದ ಅವರಿಬ್ಬರೂ ಒಬ್ಬರನ್ನೊಬ್ಬರು ಮದುವೆಯಾದರು. ಬ್ರಹ್ಮನಿಗೆ ಮಾಯಾ ಎಂಬ ಹೆಂಡತಿಯಿಂದ ಲೋಭನೆಂಬ ಪುತ್ರನೂ ನಿಃಕೃತಿ (ಹಠ) ಎಂಬ ಮಗಳೂ ಹುಟ್ಟಿದರು. ಈ ಇಬ್ಬರೂ ಪರಸ್ಪರ ವಿವಾಹವಾದರು ಇವರಿಂದ ಕ್ರೋಧ ಎಂಬ ಮಗನು, ಹಿಂಸಾ ಎಂಬ ಕನ್ಯೆಯೂ ಜನಿಸಿದರು ಇವರಿಗೆ ದುರುಕ್ತಿ ಎಂಬ ಕನ್ಯೆಯೂ, ಕಲಿ ಎಂಬ ಮಗನೂ ಹುಟ್ಟಿದರು. ದುರುಕ್ತಿಯ ಗರ್ಭ ದಲ್ಲಿ ಕಲಿಗೆ ಭೀತಿ ಎಂಬ ಮಗಳೂ ಮೃತ್ಯು ಎಂಬ ಪುತ್ರನೂ ಹುಟ್ಟಿದರು. ಮೃತ್ಯುವಿಗೆ ಭೀತಿಯಲ್ಲಿ ಯಾತನಾ ಎಂಬ ಮಗಳೂ, ನಿರಯಾ(ನರಕ) ಎಂಬ ಮಗನೂ ಹುಟ್ಟಿದರು. ನಾನು ನಿನಗೆ ಸಂಕ್ಷೇಪದಿಂದ ಈ ಪ್ರತಿ ಸರ್ಗವನ್ನೂ ಹೇಳಿದ್ದೇನೆ. ಇದು ಅಧರ್ಮನ ವಂಶ. ಈ ಅಧರ್ಮ ವಂಶವನ್ನು ತ್ಯಾಗಮಾಡುವುದರಿಂದ ಪುಣ್ಯವುಂಟಾಗುವುದು. ಆದುದರಿಂದ ಇದನ್ನೂ ಪವಿತ್ರವೆಂದು ತಿಳಿಯಬೇಕು. ಮೂರಾವರ್ತಿ ಈ ಅಧರ್ಮನ ವಂಶವನ್ನು ಕೇಳಿದರೆ, ಅವನ ಚಿತ್ತದ ದೋಷವು ದೂರವಾಗುವುದು.

ಎಲೈ ಕುರುಶ್ರೇಷ್ಠನೆ ! ಸ್ವಾಯಂಭುವ ಮನುವಿನ ವಂಶದವರ್ಣನೆ

ಯನ್ನೂ ಮಾಡುತ್ತೇನೆ. ಸ್ವಾಯಂಭುವ ಮನುವಿನ ಕೀರ್ತಿಯು ಪವಿತ್ರ ವಾದುದು. ಏಕೆಂದರೆ, ಈ ಮನುವಿನ ತಂದೆಯಾದ ಬ್ರಹ್ಮನು ಹರಿಯ ಅಂಶನು. ಶತರೂಪಾರಾಣಿಯಲ್ಲಿ ಸ್ವಾಯಂಭುವಮನುವಿನ ವೀರ್ಯದಿಂದ ಲೋಕರಕ್ಷಣೆಗಾಗಿ ಪರಮಾತ್ಮನ ಕಲಾರೂಪರಾದ ಪ್ರಿಯವ್ರತ, ಉತ್ತಾನಪಾದ ಎಂಬ ಮಕ್ಕಳಾದರು.

"ರಾಜ! ಉತ್ತಾನಪಾದರಾಜನಿಗೆ ಸುನೀತಿ ಸುರುಚಿ ಎಂಬ ಇಬ್ಬರು ರಾಣಿಯರು ಇದ್ದರು. ಸುನೀತಿಯ ಮಗನ ಹೆಸರು ಧ್ರುವ, ಸುರುಚಿಯ ಮಗನು ಉತ್ತಮನೆಂದು. ಉತ್ತಾನಪಾದನಿಗೆ ಸುರುಚಿಯ ಮೇಲೆ ಬಹಳ ಪ್ರೇಮವಿತ್ತು ಸುನೀತಿಯ ಮೇಲಿರಲಿಲ್ಲ. ಒಂದು ದಿನ ರಾಜನು ಸುರುಚಿಯ ಮಗನಾದ ಉತ್ತಮನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಟವಾಡಿಸುತ್ತಿದ್ದನು. ಅಷ್ಟರಲ್ಲೇ ಧ್ರುವನೂ ಬಂದು ತಂದೆಯ ತೊಡೆಯ ಮೇಲೆ ಹತ್ತಲು ಇಷ್ಟಪಟ್ಟನು. ಆದರೆ ರಾಜನು ಸುರುಚಿಯ ಭಯದಿಂದ ಧ್ರುವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳಲಿಲ್ಲ. ಅಹಂಕಾರದಿಂದ ತುಂಬಿದ ಸುರುಚಿರಾಣಿಯು ತನ್ನ ಮಗನಿಗೆ ಸಮಾನವಾಗಬೇಕೆಂದು ಇಷ್ಟಪಟ್ಟ ಸವತಿಯ ಮಗನಾದ ಧ್ರುವನಿಗೆ ಎದುರಿನಲ್ಲಿಯೇ ಅಸೂಯೆ (ಮಾತ್ಸರ್ಯ) ಯಿಂದ ಹೇಳಿದಳು. "ಧ್ರುವ! ನೀನು ರಾಜನ ಮಗನೇನೋ ನಿಜ. ಆದರೆ ನೀನು ರಾಜನ ತೊಡೆಯ ಮೇಲೆ ಕುಳಿತುಕೊಳ್ಳುವುದಕ್ಕೆ ಅಥವಾ ಸಿಂಹಾಸನಕ್ಕೆ ಯೋಗ್ಯನಲ್ಲ. ಏಕೆನ್ನುವೆಯೋ? ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರೆ, ಆ ಅಧಿಕಾರ ವನ್ನು ಸಂಪಾದಿಸುತ್ತಿದ್ದೆ. ನೀನು ಹುಡುಗ. ನೀನು ಮತ್ತೊಬ್ಬ ಸ್ತ್ರೀಯ ಹೊಟ್ಟೆಯಲ್ಲಿ ಹುಟ್ಟಿರುವೆಯೆಂದೂ ಆದಕಾರಣದಿಂದ ನಿನಗೆ ನಿಮ್ಮಪ್ಪನ ತೊಡೆಯ ಮೇಲೆ ಕುಳಿತುಕೊಳ್ಳಲು ಅಧಿಕಾರವಿಲ್ಲವೆಂದೂ ನಿನಗೆ ಗೊತ್ತಿಲ್ಲ. ಆದುದರಿಂದ ನೀನು ಇಂತಹ ದುರ್ಲಭವಾದ ಆಶೆಪಡುತ್ತಿರುವೆ. ನೀನು ನಿಮ್ಮ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲು ಇಚ್ಛಿಸುವು ದಾದರೆ, ತಪಸ್ಸು ಮಾಡಿ ದೇವರನ್ನು ಹೊಂದು. ಅವನನ್ನು ಒಲಿಸಿ ಕೊಂಡು ನನ್ನ ಹೊಟ್ಟೆಯಲ್ಲಿ ಹುಟ್ಟುವಂತೆ ಮಾಡಿಕೊಂಡು ಬಾ!"

ಸವತಿ ತಾಯಿಯಾದ ಸುರುಚಿಯು ಹೀಗೆ ಆಡಿದ ಕಠಿಣವಾದ ಮಾತುಗಳು ಧ್ರುವನ ಹೃದಯವನ್ನು ಬಾಣಗಳಂತೆ ಹೊಕ್ಕುವು. ಕೋಲಿನಿಂದ ಹೊಡೆದು ಎಬ್ಬಿಸಿದ ಸರ್ಪದಂತೆ ದೊಡ್ಡದಾಗಿ ಅಳಲಾರಂಬಿಸಿದನು. ಸ್ತ್ರೀಯ ವಶ ನಾದ ತಂದೆಯೂ ಸಹ ಸುಮ್ಮನೆ ಕುಳಿತುಕೊಂಡೇ ಇದನ್ನೆಲ್ಲಾ ಕೇಳಿದನು. ಅವನು ಏನನ್ನೂ ಹೇಳಲಿಲ್ಲ. ಧ್ರುವನು ತನ್ನ ಮಗನೆಂಬುದೇ ಮರೆತಂತೆ ತೋರಿತು. ಇದನ್ನು ನೋಡಿ ಧ್ರುವನು ಅಲ್ಲಿಂದ ಅಳುತ್ತಲೇ ತಾಯಿಯಾದ ಸುನೀತಿಯ ಹತ್ತಿರಕ್ಕೆ ಹೋದನು. ಸುನೀತಿಯು ದೊಡ್ಡ ದಾಗಿ ಉಸಿರುಬಿಡುತ್ತಾ ಕಣ್ಣೀರಿನ ಕೋಡಿಯನ್ನು ಸುರಿಸುತ್ತಾ ಇರುವ ಮಗನನ್ನು ತೊಡೆಯ ಮೇಲೆ ಎತ್ತಿಕೊಂಡಳು. ಅಷ್ಟರಲ್ಲಿ ಅಂತಃಪುರದ ದಾಸಿಯರು ಬಂದು ನಡೆದ ಸಮಾಚಾರವನ್ನು ಹೇಳಿದರು. ಸವತಿಯ ಮಾತು ಗಳನ್ನು ಕೇಳಿ ಸುನೀತಿಗೆ ಬಹಳ ಸಂಕಟವಾಯಿತು ಸುನೀತಿಯು ಶೋಕರೂಪ ವಾದ ದಾವಾನಲದಿಂದ ದಹಿಸಲ್ಪಟ್ಟ ಲತೆಯಂತೆ ಕುಗ್ಗಿ ಧೈರ್ಯವನ್ನು ಮರೆತು ದುಃಖಿಸಲಾರಂಭಿಸಿದಳು ಸವತಿಯ ಮಾತನ್ನು ಜ್ಞಾಪಿಸಿಕೊಂಡು ನೇತ್ರ ಕಮಲಗಳಿಂದ ಕಣ್ಣೀರಿನ ಕೋಡಿಯನ್ನೇ ಹರಿಸಿಬಿಟ್ಟಳು. ದುಃಖಸಮುದ್ರದ ದಡವನ್ನು ಕಾಣದೆ ದೊಡ್ಡದಾಗಿ ನಿಟ್ಟುಸಿರುಬಿಡುತ್ತಾ ಹೇಳಿದಳು—

"ಮಗು! ಇದರಲ್ಲಿ ಮತ್ತೊಬ್ಬರ ಮೇಲೆ ತಪ್ಪುಹೊರಿಸುವುದು ಸರಿಯಲ್ಲ ನಾವು ಹಿಂದೆ ಮತ್ತೊಬ್ಬರಿಗೆ ದುಃಖಕೊಟ್ಟುದರ ಕರ್ಮ ಫಲವನ್ನು ಈ ಜನ್ಮದಲ್ಲಿ ಅನುಭವಿಸಬೇಕಾಗಿದೆ. ಇದು ನನ್ನ ಹಿಂದಿನ ಕರ್ಮಫಲ. ಸುರುಚಿಯು ಹೇಳಿದುದು ಸರಿ. ನನ್ನಂತಹ ಅದೃಷ್ಟಹೀನಳ ಗರ್ಭದಲ್ಲಿ ಹುಟ್ಟಿ ನನ್ನ ಹಾಲಿನಿಂದಲೇ ಬೆಳೆದಿದ್ದೀಯೆ. ನಾನು ನಿಜವಾಗಿಯೂ ಅದೃಷ್ಟಹೀನಳೇ ರಾಜನಿಗೆ ನನ್ನನ್ನು ಹೆಂಡತಿಯೆಂದಾಗಲಿ ದಾಸಿಯೆಂದಾಗಲಿ ಕರೆಯುವುದು ಇಷ್ಟವಿಲ್ಲ. ನಿಮ್ಮ ಸವತಿತಾಯಿಯು ಹೇಳಿದ ಮಾತು—"ನಿನಗೆ ಉತ್ತಮನಂತೆ ಸಿಂಹಾಸನದ ಮೇಲೇರಲು ಇಚ್ಛೆಯಿದ್ದರೆ ಪರಮಾತ್ಮನ ಚರಣಕಮಲಗಳನ್ನು ಆರಾಧನೆ ಮಾಡು" ಎಂದು ಹೇಳಿದುದು ನ್ಯಾಯವು. ನಾನೂ ಸಹಾ ನಿನಗೆ ಹೇಳುವುದು ಇದೇ. ನೀನು ಈರ್ಷೆಯನ್ನು (ಮಾತ್ಸರ್ಯ) ಬಿಟ್ಟು ಶುದ್ಧ ಚಿತ್ತದಿಂದ ನಿನ್ನ ಸವತಿ

ತಾಯಿಯು ಹೇಳಿದಂತೆ ಮಾಡು. ಆ ಭಗವಾನ್ ವಿಷ್ಣುವು ಪ್ರಪಂಚವನ್ನು ಪಾಲನೆಮಾಡುವುದಕ್ಕೋಸ್ಕರವಾಗಿ ಶುದ್ಧಸತ್ವಗುಣವನ್ನು ಗ್ರಹಣಮಾಡಿದ್ದಾನೆ. ಭುಕ್ತಿ ಮತ್ತು ಮುಕ್ತಿಗಳನ್ನು ಕೊಡುವ ಆತನ ಚರಣಗಳನ್ನು ಯೋಗಿಗಳು ಮನಸ್ಸು, ಪ್ರಾಣಗಳನ್ನು ಸ್ವಾಧೀನಕ್ಕೆ ತಂದುಕೊಂಡು ತಪಸ್ಸನ್ನು- ಪ್ರಾಣಾಯಾಮವನ್ನು ಮಾಡುತ್ತಾರೆ. ಆ ಚರಣಕಮಲಗಳನ್ನು ಸೇವೆಮಾಡಿಯೇ ಬ್ರಹ್ಮನು ಬ್ರಹ್ಮಪದವಿಯನ್ನು ಹೊಂದಿದನು. ನಿಮ್ಮಜ್ಜನಾದ ಮನುವೂ ಸಹಾ ದಕ್ಷಿಣೆಯುಳ್ಳ ಯಜ್ಞಗಳಿಂದ ಸರ್ವವ್ಯಾಪಿಯಾದ ಅಂತರ್ಯಾಮಿಯಾದ ಭಗವಂತನನ್ನು ಉಪಾಸನೆ ಮಾಡಿ ರಾಜ್ಯಸುಖವನ್ನೂ, ದೇವತೆಗಳಿಗೆ ದುರ್ಲಭವಾದ ದಿವ್ಯ ಸುಖಗಳನ್ನೂ ಭೋಗಿಸಿ ಕೊನೆಯಲ್ಲಿ ಮೋಕ್ಷವನ್ನು ಹೊಂದಿದನು. ಮಗನೆ ! ಇವೆಲ್ಲವೂ ಹರಿಯಿಂದಲೇ ಅಲ್ಲವೆ ? ಮತ್ತಾರಿಂದಲೂ ಸಾಧ್ಯವಿಲ್ಲ. ಹರಿಯ ಅನುಗ್ರಹವಿಲ್ಲದೆ ಮತ್ತಾವುದರಿಂದಲೂ ಸಾಧ್ಯವಿಲ್ಲ. ನೀನು ಭಕ್ತವತ್ಸಲನಾದ ಆ ಹರಿಯ ಚರಣಗಳನ್ನು ಶರಣುಹೊಂದು ಮುಕ್ತಿಕಾಮಿಗಳಾದ ಯೋಗಿಗಳೂ ಸಹ ಆತನ ಚರಣಕಮಲಗಳನ್ನೇ ಹುಡುಕುತ್ತಾರೆ. ನೀನು ಏಕಾಗ್ರಭಾವವನ್ನು ಹೊಂದಿ ನಿನ್ನ ಧರ್ಮದಿಂದ ಚಿತ್ತವನ್ನು ಶುದ್ಧಮಾಡಿಕೋ. ಆ ಶುದ್ಧ ಹೃದಯದಲ್ಲಿ ಧ್ಯಾನಪೂರ್ವಕವಾಗಿ ಪರಮಪುರುಷನಾದ ಹರಿಯನ್ನು ಭಜನೆಮಾಡು. ಕಮಲನಯನನಾದ ಹರಿಯಲ್ಲದೆ, ನಿನ್ನ ದುಃಖವನ್ನು ದೂರಮಾಡಬಲ್ಲವರಾರೂ ಕಾಣುವುದಿಲ್ಲ ಜನಗಳು ಅತ್ಯಂತ ಪ್ರೇಮದಿಂದ ಯಾವ ಲಕ್ಷ್ಮಿಯನ್ನು ಹುಡುಕುತ್ತಿರುವರೋ ಆ ಲಕ್ಷ್ಮಿಯು ತನ್ನ ಕರಕಮಲಗಳೆಂಬ ದೀಪವನ್ನು ಹಿಡಿದು ಹರಿಯನ್ನು ಹುಡುಕುತ್ತಿರುತ್ತಾಳೆ "

ಧ್ರುವನು ತನ್ನ ತಾಯಿಯು ದುಃಖಿಸುತ್ತಾ ಹೇಳಿದ ಮಾತುಗಳನ್ನು ಕೇಳಿ ಬುದ್ಧಿಯಿಂದ ಮನಸ್ಸನ್ನು ಬಿಗಿಹಿಡಿದು ತಾಯಿಯು ಹೇಳಿದಂತೆ ತಂದೆಯ ಪಟ್ಟಣವನ್ನು ಬಿಟ್ಟು ಆಗಲೇ ಹೊರಟುಬಿಟ್ಟನು. ನಾರದನು ತನ್ನ ಯೋಗಬಲದಿಂದ ಈ ವೃತ್ತಾಂತವನ್ನೆಲ್ಲಾ ತಿಳಿದು ಧ್ರುವನು ಯಾವ ಇಚ್ಛೆಯಿಂದ ಕಾಡಿಗೆ ಹೋಗುತ್ತಿರುವನೆಂಬುದನ್ನೂ ಸಹ ತಿಳಿದುಕೊಂಡು

ಧ್ರುವನು ಹೋಗುವ ದಾರಿಯಲ್ಲಿ ಎದುರಿಗೆ ಬಂದನು. ಪಾಪನಾಶಕವಾದ ತನ್ನ ಮಂಗಳಮಯ ವರದ ಹಸ್ತವನ್ನು ಧ್ರುವನ ತಲೆಯಮೇಲಿಟ್ಟು "ಆಹಾ ! ಕ್ಷತ್ರಿಯ ತೇಜಸ್ಸು ಸ್ವಲ್ಪ ಅನಾದರವನ್ನೂ ಸಹಿಸಲಾರದಲ್ಲವೆ ? ಐದು ವರ್ಷದ ಹುಡುಗನಾದರೂ ಸವತಿ ತಾಯಿಯ ಕಟುವಚನಗಳನ್ನು ಮರೆಯಲಾರನಲ್ಲವೆ ? " ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡು ಧ್ರುವ ನನ್ನು ಕುರಿತು ಹೇಳಿದನು. " ಎಲೈ ಧ್ರುವನೆ ! ನೀನಿನ್ನು ಚಿಕ್ಕ ಹುಡುಗನು. ಆಟವಾಡುತ್ತಾ ಕಾಲಕಳೆಯುವ ವಯಸ್ಸು ಇದು ಇಂತಹುದರಲ್ಲಿ ನಿನಗೆ ಮಾನವೆಂದರೇನು ? ಅಪಮಾನವೆಂದರೇನು ? ನಿನಗೆ ಮಾನಾಪಮಾನಗಳ ವಿವೇಕವಿದೆಯೆಂದು ಭಾವಿಸಿದರೂ ನಿನ್ನ ಕರ್ಮವಲ್ಲದೆ ಮತ್ತಾವುದೂ ನಿನ್ನ ಅಸಂತೋಷಕ್ಕೆ ಕಾರಣವಾಗಲಾರದು. ಇತರರು ಅವಮಾನಮಾಡಿ ದುಃಖ ಕೊಟ್ಟರೆಂದು ಹೇಳುವುದು ತಪ್ಪುತಿಳಿವಳಿಕೆ ಮಾತ್ರ. ಮನುಷ್ಯನು ತನ್ನ ಕರ್ಮದಿಂದಲೇ ಸುಖ ದುಃಖಗಳನ್ನೂ ಆದರ ಅನಾದರಗಳನ್ನೂ ಹೊಂದುವನು. ಈಶ್ವರನ ಸಹಾಯವಿಲ್ಲದಿದ್ದರೆ ಯಾವ ಕಾರ್ಯವೂ ಸಫಲವಾಗಲಾರದು. ಆದುದರಿಂದ ವಿವೇಕಿಯು ತನಗೆ ಆಗುವ ಸುಖ ದುಃಖ, ಆದರ ಅನಾದರ ಗಳನ್ನು ದೈವದತ್ತವಾದುವೆಂದು ತಿಳಿದು ಸ್ವೀಕಾರಮಾಡಬೇಕು ಪುರುಷ ಪ್ರಯತ್ನದಿಂದ ದೈವವನ್ನು ಹಳಿಯಲೆತ್ನಿಸುವುದು ಮೂರ್ಖತ್ವ. ನಿನ್ನ ತಾಯಿಯು ಹೇಳಿದ ಯೋಗವು ಜಿತೇಂದ್ರಿಯರಲ್ಲದವರಿಗೆ ಕಷ್ಟ. ಈಶ್ವರ ನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುವುದು ಸುಲಭವಲ್ಲ. ದೊಡ್ಡ ದೊಡ್ಡ ತಪಸ್ವಿಗಳೂ, ಸರ್ವಸಂಗವನ್ನು ತ್ಯಾಗಮಾಡಿ ಮನಸ್ಸನ್ನೂ ಇಂದ್ರಿಯಗಳನ್ನೂ ಜಯಿಸಿರುವವರೂ ಸಹ ಯೋಗಾಭ್ಯಾಸಮಾಡುತ್ತಾ ಸಮಾಧಿಯಲ್ಲಿ ಬಹು ಕಾಲ ನಿಂತು ಜನ್ಮಜನ್ಮಾಂತರಗಳಲ್ಲಿಯೂ ಆತನನ್ನು ಹುಡುಕುತ್ತಾ ಪರಾಜಿತ ರಾಗಿ ಈಶ್ವರಪದವಿಯನ್ನು ಕಾಣದೆ ಸಂಕಟಪಡುತ್ತಿರುವರು. ಆದುದರಿಂದ ಈ ಯೋಚನೆಯನ್ನು ಬಿಡು. ನಿನ್ನ ಈ ಪ್ರಯತ್ನವು ನಿಷ್ಫಲ. ಈಶ್ವರ ನನ್ನು ಆರಾಧನೆ ಮಾಡುವ ಸಮಯವು ವೃದ್ಧಾಪ್ಯದಲ್ಲಿ. ಅದಕ್ಕೆ ಈಗೇಕೆ ಪ್ರಯತ್ನ ಪಡುವೆ ? ಸುಖದಿಂದ ಪೂರ್ವಾರ್ಜಿತ ಪುಣ್ಯದ ಕ್ಷಯವೂ ದುಃಖ ದಿಂದ ಪೂರ್ವಕೃತ ಪಾಪದ ಕ್ಷಯವೂ ಆಗುವುದೆಂದು ತಿಳಿದು ಸಮಾಧಾನ

ಹೊಂದಬೇಕು. ಇದೇ ಮೋಕ್ಷದ ದಾರಿ. ಸದ್ಗುಣಗಳಲ್ಲಿ ತನಗಿಂತ ಉತ್ತಮ ನಾದವನನ್ನು ನೋಡಿ ಸಂತೋಷಪಡಬೇಕು. ಕೀಳಾದವನಲ್ಲಿ ದಯೆ ಯನ್ನು ತೋರಬೇಕು. ಮತ್ತು ತನ್ನ ಸಮಾನನಾದ ಪುರುಷನಲ್ಲಿ ಮಿತ್ರತ್ವ ವನ್ನಿಡಬೇಕು. ಹೀಗೆ ಮಾಡಿದರೆ ದುಃಖವಾಗಲೀ ಸುಖವಾಗಲೀ ಬಾಧಿಸ ಲಾರದು."

ಧ್ರುವನು ಹೇಳುತ್ತಾನೆ— "ಭಗವನ್! ಸುಖದುಃಖಗಳಿಗೆ ಅಧೀನ ನಾದ ಪುರುಷನಿಗೆ ಕೃಪೆಯಿಟ್ಟು ತೋರಿಸಿಕೊಟ್ಟ ಶಾಂತಿಯ ಮಾತುಗಳು ನನ್ನಂತಹ ಅಜ್ಞಾನಿಗೆ ತಿಳಿಯದು. ಆದರೆ ಕ್ಷತ್ರಿಯಸ್ವಭಾವಕ್ಕೆ ವಶ ನಾಗಿದ್ದೇನೆ. ನಮ್ರತೆಯಾಗಲೀ ಶಾಂತಿಯಾಗಲೀ ನನ್ನಲ್ಲಿಲ್ಲ. ನನ್ನ ಹೃದಯವು ಸುರುಚಿಯ ದುರ್ವಚನರೂಪಬಾಣಗಳಿಂದ ಸೀಳಿಹೋಗಿದೆ. ಈ ಶಾಂತಿಯ ಉತ್ತರಗಳು ಅದರಲ್ಲಿ ನಿಲ್ಲಲಾರವು. ಬ್ರಹ್ಮರ್ಷೇ! ನನ್ನ ಅಜ್ಜ ಮುತ್ತಜ್ಜಂದಿರು ಯಾವ ಪದವಿಯನ್ನು ಹೊಂದಲಿಲ್ಲವೋ, ಮತ್ತು ಇನ್ನಾರಿಗೂ ಯಾವ ದುರ್ಲಭಪದವಿಯು ಪ್ರಾಪ್ತವಾಗಲಿಲ್ಲವೋ ಅಂತಹ ಲೋಕತ್ರಯ ದಲ್ಲಿ ಶ್ರೇಷ್ಠವಾದ ಪದವಿಯನ್ನು ಹೊಂದಲು ಅಪೇಕ್ಷಿಸುತ್ತೇನೆ. ಆ ದಾರಿಯನ್ನು ತೋರಿಸುವ ಕೃಪೆಮಾಡಬೇಕು. ತಾವು ಬ್ರಹ್ಮಮಾನಸ ಪುತ್ರರು. ನೀವು ವೀಣೆಯನ್ನು ಬಾರಿಸುತ್ತಾ, ಹರಿಗುಣವನ್ನು ಗಾನ ಮಾಡುತ್ತಾ ಲೋಕೋದ್ಧಾರಕ್ಕಾಗಿಯೇ ಅಜ್ಞಾನಾಂಧಕಾರವನ್ನು ನಾಶ ಮಾಡುವ ಸೂರ್ಯನಂತೆ ಲೋಕತ್ರಯದಲ್ಲಿ ಸಂಚರಿಸುತ್ತಿರುವಿರಿ."

ನಾರದನು ಧ್ರುವನ ಈ ಮಾತುಗಳನ್ನು ಕೇಳಿ ಅವನ ದೃಢಪ್ರತಿಜ್ಞೆಗಾಗಿ ಸಂತೋಷಪಟ್ಟು ದಯಾಪೂರ್ವಕವಾಗಿ ಬಾಲಕನಾದ ಧ್ರುವನಿಗೆ ಈ ರೀತಿ ಹೇಳಿ ದನು. "ಪುತ್ರ! ನಿನ್ನ ತಾಯಿಯು ನಿನಗೆ ಯಾವ ಉಪದೇಶಮಾಡಿರು ವಳೋ ಅದೇ ನಿನ್ನ ಕಾರ್ಯವನ್ನು ಸಿದ್ಧಮಾಡಿಕೊಡುವ ಮಂಗಳಮಯ ವಾದ ರಾಜಮಾರ್ಗ. ಈ ಮಾರ್ಗದಿಂದಲೇ ಶ್ರೀಹರಿಯನ್ನು ಭಜನೆ ಮಾಡು ನಿನ್ನ ಮನಸ್ಸನ್ನು ಭಕ್ತಿಯಿಂದ ಶುದ್ಧಮಾಡಿ ಹರಿಯಲ್ಲಿ ನಿಲ್ಲಿಸು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಹೊಂದಲು ಹರಿಚರಣಸೇವೆಯೊಂದೇ ನಿಜವಾದ ಮಾರ್ಗವು ನಿನಗೆ ಕಲ್ಯಾಣವಾಗಲಿ!

ನೀನು ಯಮುನಾನದಿಯ ದಡದಲ್ಲಿರುವ ಪವಿತ್ರತೀರ್ಥವಾದ ಮಧುವನಕ್ಕೆ (ಮಥುರಾಪುರಿಗೆ) ಹೋಗು. ಅಲ್ಲಿ ಪರಮಾತ್ಮನು ಯಾವಾಗಲೂ ಇರುತ್ತಾನೆ ಯಮುನೆಯ ಪವಿತ್ರಜಲದಲ್ಲಿ ತ್ರಿಕಾಲದಲ್ಲಿಯೂ ಸ್ನಾನ ಮಾಡು. ನಿನ್ನ ನಿತ್ಯಕರ್ಮಗಳನ್ನು ಪೂರ್ತಿ ಮಾಡಿಕೊಂಡು ದರ್ಭಾಸನದಲ್ಲಿ ಕುಳಿತು ಸ್ವಸ್ತಿಕಾದಿ ಯಾವುದಾದರೊಂದು ಆಸನದಲ್ಲಿ ಕುಳಿತುಕೊಳ್ಳಬೇಕು. ಪೂರಕ, ಕುಂಭಕ, ರೇಚಕ ಮೊದಲಾದ ಪ್ರಾಣಾ ಯಾಮದಿಂದ ಪ್ರಾಣಗಳನ್ನೂ, ಇಂದ್ರಿಯಗಳನ್ನೂ, ಮನಸ್ಸನ್ನೂ ಜಯಿಸಿ ಇವುಗಳ ಚಾಂಚಲ್ಯವನ್ನು ದೂರಮಾಡಿ ಸ್ಥಿರವಾದ ಮನಸ್ಸಿನಿಂದ ಜಗದ್ಗುರು ವಾದ ಶ್ರೀ ಹರಿಯನ್ನು ಈ ರೀತಿ ಧ್ಯಾನಿಸಬೇಕು—

"ಭಗವಂತನು ದೇವದುರ್ಲಭವಾದ ಪರಮಸುಂದರಮೂರ್ತಿಯು. ಆತನ ಮುಖವೂ, ನೇತ್ರಗಳೂ ಪ್ರಸನ್ನವಾಗಿವೆ. ಅವನ ನಾಸಿಕಾ, ಭ್ರುಕುಟಿ, ಕಪೋಲಗಳು ಸುಂದರವಾಗಿ ಮನೋಹರವಾಗಿವೆ. ವರಪ್ರದಾನ ಮಾಡಲು ಸಿದ್ಧವಾಗಿರುವಂತೆಯೇ ತೋರುತ್ತವೆ. ನವತಾರುಣ್ಯದೇಹ, ಅದರಲ್ಲಿನ ಸಮಸ್ತ ಅಂಗಗಳು ಸುಂದರವಾಗಿ ರಮಣೀಯವಾಗಿವೆ. ಅರುಣ ವರ್ಣದ ನೇತ್ರಗಳೂ, ಅಧರಗಳೂ ಆಶ್ರಿತರನ್ನು ಉದ್ಧರಿಸಲು ಸಿದ್ಧವಾಗಿವೆ. ದಯಾಸಾಗರನಾದ ಆ ದೇವನ ಹೃದಯದಲ್ಲಿ ಭೃಗುಮುನಿಯ ಪಾದ ಘಾತದ ಚಿಹ್ನೆಯಿದೆ. ಆ ದೇಹವು ಜಲಪೂರ್ಣವಾದ ನೀಲಮೇಘದಂತೆ ಶ್ಯಾಮಲವರ್ಣಯುಕ್ತವಾಗಿದೆ. ವನಮಾಲೆಯನ್ನು ಧರಿಸಿದ ನಾಲ್ಕು ಭುಜ ಗಳಲ್ಲಿಯೂ ಶಂಖ, ಚಕ್ರ, ಗದಾ, ಪದ್ಮಗಳು ಶೋಭಿಸುತ್ತಿವೆ ಮಕರಕುಂಡಲ ಗಳಿಂದಲೂ ಕೇಯೂರ ಕಂಕಣಾದಿಗಳಿಂದಲೂ ಅಮೂಲ್ಯರತ್ನ ಕಿರೀಟ ದಿಂದಲೂ ಶೋಭಿಸುತ್ತಿದ್ದಾನೆ. ಕಂಠದಲ್ಲಿ ಕೌಸ್ತುಭಮಣಿಯನ್ನು ಧರಿಸಿ ದ್ದಾನೆ. ಪೀತಾಂಬರಧಾರಿಯಾಗಿದ್ದಾನೆ. ಕಾಂಚನ ಮೇಖಲವು ಕಟಿಪ್ರದೇಶ ದಲ್ಲಿ ಪೀತಾಂಬರದ ಮೇಲೆ ಶೋಭಿಸುತ್ತಿದೆ. ಚರಣಗಳಲ್ಲಿ ಕಾಂಚನ ನೂಪುರಗಳು ಶೋಭಾಯಮಾನವಾಗಿವೆ. ಆ ಶಾಂತಮೂರ್ತಿಯು ದರ್ಶನ ಮಾತ್ರದಿಂದಲೇ ನಯನಮನೋಹರನಾಗಿದ್ದಾನೆ. ಅಪಾರವಾದ ಸುಖ ವನ್ನು ಕೊಡುತ್ತಾ ಭಕ್ತರ ಹೃದಯಸಿಂಹಾಸನದಲ್ಲಿ ವಿರಾಜಮಾನನಾಗಿದ್ದಾನೆ.

ಮೃದುಮಂದಹಾಸದಿಂದ ಪ್ರೇಮಪೂರ್ಣದೃಷ್ಟಿಯಿಂದ ಯುಕ್ತನಾದ ದೇವನನ್ನು ನೋಡುತ್ತಿರುವ ಭಕ್ತರ ಮನಸ್ಸುಗಳು ಆನಂದಪೂರ್ಣವಾಗಿ ಏಕಾಗ್ರವಾಗುವುವು.

ಹೀಗೆ ಶ್ರೀಹರಿಯನ್ನು ಧ್ಯಾನಮಾಡಲಾರಂಭಿಸಿದರೆ ಮನಸ್ಸು ಆ ದಿವ್ಯಮೂರ್ತಿಯಲ್ಲಿ ತಲ್ಲೀನವಾಗುವುದು. ಎಲೈ ರಾಜಕುಮಾರನೆ! ನಿನಗೆ ಪರಮ ರಹಸ್ಯವಾದ ಮಂತ್ರವನ್ನು ಉಪದೇಶಮಾಡುತ್ತೇನೆ. ಇದನ್ನು ಜಪಮಾಡುತ್ತಿರಬೇಕು ಏಳು ರಾತ್ರಿಗಳು ಪೂರ್ತಿ ಈ ಮಂತ್ರವನ್ನು ಜಪಿಸಿದರೆ ದೇವಗಣಗಳ ದರ್ಶನವಾಗುವುದು. ಈ ಮಂತ್ರವು **ಓಂ ನಮೋ ಭಗವತೇ ವಾಸುದೇವಾಯ** ಎಂಬ ದ್ವಾದಶಾಕ್ಷರಿಯು. ದೇಶ ಕಾಲ ವಿಭಾಗವನ್ನು ಬಲ್ಲ ಚತುರಪುರುಷನು ಈ ಮಂತ್ರವನ್ನು ಜಪಿಸುತ್ತಾ ಪವಿತ್ರ ಜಲ, ಮಾಲಾ, ವನ್ಯ, ಫಲ ಪುಷ್ಪ, ಕಂದಮೂಲ, ನುಂದರ ದೂರ್ವಾಯುಗ್ಮ, ವಲ್ಕಲ, ತುಳಸೀದಳ ಮುಂತಾದ ಪೂಜೋಪಕರಣಗಳಿಂದ ಹರಿಯನ್ನು ಪೂಜಿಸಬೇಕು. ಶಿಲೆಯಿಂದಲಾಗಲೀ, ಮಣ್ಣಿನಿಂದಲಾಗಲೀ ಮೂರ್ತಿಯನ್ನು ಮಾಡಬೇಕು. ಇಲ್ಲದಿದ್ದರೆ ಜಲದಲ್ಲಿಯೇ (ಕಲಶದಲ್ಲಿ)ನಾರಾಯಣನನ್ನು ಧ್ಯಾನಿಸಿ ಪೂಜಿಸಬೇಕು ಪೂಜೆಮಾಡುವ ಭಕ್ತನಿಗೆ ಚಿತ್ತವು ವಶದಲ್ಲಿರಬೇಕು. ಮನಸ್ಸಿನಲ್ಲಿ ಹರಿಯನ್ನು ಧ್ಯಾನಿಸಬೇಕು ಶಾಂತಸ್ವಭಾವವುಳ್ಳವನಾಗಿರಬೇಕು. ಮಾತನಾಡುವುದನ್ನು ಕಡಿಮೆಮಾಡಬೇಕು. ಅಥವಾ ಮೌನವನ್ನು ಹಿಡಿಯಬೇಕು ಕಾಡಿನಲ್ಲಿರುವ ಕಂದ ಮೂಲಫಲಗಳನ್ನು ಆಹಾರರೂಪವಾಗಿ ಸ್ವಲ್ಪ ಸ್ವಲ್ಪ ತಗೆದುಕೊಳ್ಳಬೇಕು. ಪವಿತ್ರಕೀರ್ತಿಯುಳ್ಳ ಪರಮಾತ್ಮನು ಇಚ್ಛಾಮಾತ್ರದಿಂದ ಮಾಯೆಯನ್ನು ಗ್ರಹಣಮಾಡಿ (ಅವತಾರವನ್ನು ತೆಗೆದುಕೊಂಡು) ಯಾವ ಯಾವ ಲೀಲೆಗಳನ್ನು ನಡೆಸಿದನೋ ಅವುಗಳನ್ನು ಹೃದಯದಲ್ಲಿ ಸ್ಮರಣೆಮಾಡುತ್ತಿರಬೇಕು. ಮಂತ್ರಮೂರ್ತಿಯಾದ ಆ ಭಗವಂತನ ಪೂಜೆಯನ್ನೆಲ್ಲಾ ದ್ವಾದಶಾಕ್ಷರದಿಂದಲೇ ಮಾಡಬೇಕು.

ಮೇಲೆ ಹೇಳಲ್ಪಟ್ಟ ರೀತಿಯಿಂದ ಸಕಾಮನಾಗಿ ಮನಸ್ಸಿನಿಂದ, ಮಾತಿನಿಂದ, ದೇಹದಿಂದ ಭಕ್ತಿಭಾವಪೂರ್ವಕವಾಗಿ ಸೇವೆಯನ್ನು ಅಥವಾ ಉಪಾಸನೆಯನ್ನು ಮಾಡಿದರೆ ನಿಷ್ಕಪಟಹೃದಯದ ಉಪಾಸಕನ ಭಾವವನ್ನು ವೃದ್ಧಿಮಾಡುವ ಶ್ರೀ ಹರಿಯು ಭಕ್ತನ ಇಷ್ಟವನ್ನನುಸರಿಸಿ ಧರ್ಮಾರ್ಥಕಾಮ ಮೋಕ್ಷರೂಪಗಳಾದ ಕಲ್ಯಾಣಗಳನ್ನು ಅನುಗ್ರಹ ಮಾಡುತ್ತಾನೆ. ಯಾವನು ಧರ್ಮಾರ್ಥಕಾಮಗಳನ್ನು ತ್ಯಾಗಮಾಡಿ ಮೋಕ್ಷಲಾಭ ಒಂದನ್ನೇ ಇಚ್ಛಿಸುತ್ತಾನೆಯೋ ಆತನು ಇಂದ್ರಿಯಗಳನ್ನು ವಿಷಯಗಳಿಂದ–ಶಬ್ದಾದಿಭೋಗಗಳಿಂದ ಹಿಂದಿರುಗಿಸಿ ಅನನ್ಯಭಾವವನ್ನು ಧಾರಣೆಮಾಡಿ ದೃಢಭಕ್ತಿಯೋಗದಿಂದ ಭಗವಂತನನ್ನು ಭಜನೆಮಾಡಬೇಕು.

ದೇವರ್ಷಿಯಾದ ನಾರದನ ಈ ಉಪದೇಶವನ್ನು ಕೇಳಿ ರಾಜಕುಮಾರನಾದ ಧ್ರುವನು ಅವನಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿದನು. ಈತನಿಂದ ಬೀಳ್ಕೊಂಡು ಶ್ರೀ ಹರಿಯ ಚರಣಚಿನ್ಹೆಯಿಂದ ಪವಿತ್ರವಾದ ಮಧುವನಕ್ಕೆ ಹೊರಟನು.

ಧ್ರುವನು ತಪಸ್ಸನ್ನುಮಾಡುವುದಕ್ಕಾಗಿ ಮಧುವನಕ್ಕೆ ಹೊರಟ ಮೇಲೆ ನಾರದನು ಉತ್ತಾನಪಾದರಾಯನ ಅಂತಃಪುರಕ್ಕೆ ಹೋದನು. ರಾಜನು ಯಥಾಯೋಗ್ಯವಾದ ಸತ್ಕಾರಮಾಡಿದ ನಂತರ ದುಃಖದಿಂದ ಬಾಡಿದ ಆತನ ಮುಖವನ್ನು ನೋಡಿ ಕಾರಣವನ್ನು ವಿಚಾರಿಸಿದನು. ರಾಜನು ವ್ಯಸನದಿಂದ ಹೇಳಿದನು—

“ದೇವಋಷಿಗಳೆ! ನನ್ನ ದುಃಖದ ಕಾರಣವು ನನ್ನ ಅವಿವೇಕವು. ಸ್ತ್ರೀಲಂಪಟನಾದ ನಾನು ಚತುರನಾದ ಐದು ವರ್ಷದ ಬಾಲಕನನ್ನು ತಿರಸ್ಕರಿಸಿದೆನು. ಅವನು ನನ್ನ ತೊಡೆಯನ್ನು ಹತ್ತಿ ಕುಳಿತುಕೊಳ್ಳಲಿಚ್ಛಿಸಿದಾಗ ಸ್ತ್ರೀಜಿತನಾಗಿದ್ದ ನಾನು ಅವನನ್ನು ಪ್ರೇಮಯುಕ್ತನಾಗಿ ಕಾಣಲಿಲ್ಲ. ಆ ಬಾಲಕನು ಕ್ರೋಧದಿಂದಲೂ ವ್ಯಸನದಿಂದಲೂ ದುಃಖಿಸುತ್ತಾ ಕಾಡಿಗೆ ಹೊರಟುಹೋದನು. ಕಾಡುದಾರಿಯಲ್ಲಿ ನಡೆದುಹೋಗುವ

ಆ ಬಾಲಕನ ಕೋಮಲ ಪಾದಗಳಿಗೆ ಮುಳ್ಳು ಕಲ್ಲುಗಳಿಂದ ದುಃಖ ವಾಯಿತೇ ? ಸಿಂಹವ್ಯಾಘ್ರಾದಿಹಿಂಸ್ರಪಶುಗಳಿಂದ ಆತನಿಗೆ ತೊಂದರೆಯು ಆಗಿರಬಹುದಲ್ಲವೆ ? ನನ್ನಂತಹ ಪಾಪಿಯು ಜಗತ್ತಿನಲ್ಲಿರುವನೆ ? ಸ್ತ್ರೀವ್ಯಾಮೋಹಕ್ಕೆ ಒಳಗಾಗಿ ನನ್ನಿಂದ ಆದ ತಪ್ಪಿಗಾಗಿ ಬಹಳ ಪಶ್ಚಾತ್ತಾಪವಾಗುತ್ತಿದೆ. ಆ ಮಗುವು ಮನೆಯಿಂದ ಒಬ್ಬನೇ ಒಂಟಿ ಯಾಗಿ ಬರಿ ಕಾಲಿನಲ್ಲಿ ನಡೆದುಹೋದುದನ್ನು ಕೇಳಿ ನಿದ್ರಾಹಾರಗಳು ನನ್ನ ಸಮೀಪಕ್ಕೆ ಬಾರದಂತಾಗಿವೆ. ”

ನಾರದ :—ರಾಜ ! ನೀನು ಆ ಮಗನಿಗಾಗಿ ದುಃಖಪಡಬೇಡ. ಆತನನ್ನು ಕಾಪಾಡುವವನು ಪರಮಾತ್ಮನಿದ್ದಾನೆ. ಅನಾಥರಿಗೆಲ್ಲಾ ರಕ್ಷಕನು ಅವನೊಬ್ಬನೇ. ನಿನ್ನ ಮಗನು ಸಾಮಾನ್ಯನೆಂದು ಭಾವಿಸ ಬೇಡ. ಆವನ ಪೂರ್ವಪುಣ್ಯವು ಬಹಳ ದೊಡ್ಡದು. ಅಂತಹ ಮಗನು ನಿನ್ನ ಉದರದಲ್ಲಿ ಹುಟ್ಟಿಬಂದುದು ನಿನ್ನ ಅದೃಷ್ಟವೇ ಸರಿ. ದೇಹವು ನಿನ್ನದು. ಆದರೆ ಅದರೊಳಗಿನ ಆತ್ಮವು ನಿನ್ನ ಬುದ್ಧಿಗೂ ನಿಲುಕಲಾರ ದಷ್ಟು ದೊಡ್ಡದು. ಅವನ ಯಶಸ್ಸು ಜಗತ್ತಿನ ತುಂಬಾ ಹರಡುವುದು. ದೊಡ್ಡ ದೊಡ್ಡ ಲೋಕಪಾಲಕರು ಮಾಡದಂತಹ ಮಹತ್ಕಾರ್ಯಗಳನ್ನು ಮಾಡಬಲ್ಲ ಪ್ರತಾಪಶಾಲಿಯಾಗುವನು. ಅವನು ಬಹುಜಾಗ್ರತೆ ಯಾಗಿಯೇ ನಿನ್ನ ಸಮೀಪಕ್ಕೆ ಹಿಂದಿರುಗುವನು. ಅವನಿಂದ ನಿನ್ನ ಯಶಸ್ಸೂ ಭೂಮಿಯಲ್ಲಿ ಹರಡುವುದು.

ಉತ್ತಾನಪಾದರಾಜನಿಗೆ ದೇವರ್ಷಿಯ ಈ ಮಾತುಗಳಿಂದ ಸ್ವಲ್ಪ ಸಮಾಧಾನವೇನೋ ಆಯಿತು. ಆದರೆ ಸುಖಭೋಗಗಳನ್ನು ತೊರೆದು ಮನೆಯಲ್ಲಿಯೇ ತಪಸ್ವಿಯಂತೆ ಹಗಲಿರುಳೂ ಪುತ್ರನನ್ನು ಕುರಿತು ಚಿಂತಿಸಲಾರಂಭಿಸಿದನು.

ಧ್ರುವನು ಮಧುವನದಲ್ಲಿ ಸ್ನಾನಮಾಡಿ ಆ ರಾತ್ರಿಯನ್ನು ನಿಯಮದಿಂದ ಕಳೆದನು. ಏಕಾಗ್ರಮನಸ್ಸಿನಿಂದ ದೇವರ್ಷಿಯ ಉಪದೇಶದಂತೆ ಪರಮಾತ್ಮನನ್ನು ಧ್ಯಾನಮಾಡಲಾರಂಭಿಸಿದನು. ಮೂರು

ದಿನಗಳಿಗೊಮ್ಮೆ ಒಂದೆರಡು ಫಲಗಳನ್ನು ಭಕ್ಷಿಸಿ ಶರೀರವನ್ನು ರಕ್ಷಿಸುತ್ತಾ ಶ್ರೀ ಹರಿಯ ಸೇವೆಯಲ್ಲಿ ಮೊದಲನೆಯ ತಿಂಗಳನ್ನು ಕಳೆದನು. ಎರಡನೆಯ ತಿಂಗಳಲ್ಲಿ ಆರಾರು ದಿನಗಳಿಗೊಮ್ಮೆ ಮರಗಳಿಂದ ಬಿದ್ದು ಒಣಗಿದ ಎಲೆಗಳನ್ನೂ ಹುಲ್ಲನ್ನೂ ತಿಂದು ಪರಮಾತ್ಮನನ್ನು ಸೇವೆ ಮಾಡಲಾರಂಭಿಸಿದನು. ಹಾಗೆಯೇ ಮೂರನೆಯ ತಿಂಗಳಲ್ಲಿ ಒಂಭತ್ತು ದಿನಗಳಿಗೊಮ್ಮೆ ನೀರನ್ನು ಕುಡಿಯುತ್ತಾ ಹರಿಯ ಧ್ಯಾನದಲ್ಲಿ ಆಸಕ್ತ ನಾದನು. ನಾಲ್ಕನೆಯ ತಿಂಗಳಲ್ಲಿ ಹನ್ನೆರಡು ದಿನಗಳಿಗೊಮ್ಮೆ ವಾಯು ಸೇವನೆಯೊಂದರಿಂದಲೇ ದೇಹವನ್ನು ರಕ್ಷಿಸುತ್ತಾ ಪ್ರಾಣಾಯಾಮದಿಂದ ಶ್ರೀ ಹರಿಯ ಆರಾಧನೆಯಲ್ಲಿ ತತ್ಪರನಾದನು. ಐದನೆಯ ತಿಂಗಳಲ್ಲಿ ಶ್ವಾಸವನ್ನು ಬಂಧಿಸಿ ಕಂಬದಂತೆ ಒಂಟಿಕಾಲಿನಲ್ಲಿ ನಿಂತು ಹೃದಯ ದಲ್ಲಿ ಬ್ರಹ್ಮಾತ್ಮಾನುಸಂಧಾನಮಾಡಲಾರಂಭಿಸಿದನು. ಶಬ್ದಾದಿ ವಿಷಯ ಗಳಿಗೂ, ಚಕ್ಷುರಾದಿ ಇಂದ್ರಿಯಗಳಿಗೂ ಆಶ್ರಯವಾದ ಮನಸ್ಸನ್ನು ಬಾಹ್ಯಪದಾರ್ಥಗಳಿಂದ ಹಿಂಸೆಳೆದು ಹೃದಯದಲ್ಲಿ ನಿಲ್ಲಿಸಿ ಭಗವಂತನಾದ ಹರಿಯ ಧ್ಯಾನದಲ್ಲಿ ನಿಯೋಗಿಸಿದನು. ಆಗ ಧ್ರುವನಿಗೆ ಪರಮಾತ್ಮನ ರೂಪವೊಂದಲ್ಲದೆ ಮತ್ತೇನೂ ಕಾಣದಂತಾಯಿತು. ಮಹತ್ತು ಮುಂತಾದ ತತ್ತ್ವಗಳಿಗೆ ಆಧಾರನಾದ ಮತ್ತು ಪ್ರಕೃತಿಪುರುಷರಿಗೆ ಒಡೆಯನಾದ ಪರಬ್ರಹ್ಮನನ್ನು ಧ್ರುವನು ತನ್ನ ಹೃದಯದಲ್ಲಿ ಧ್ಯಾನಯೋಗದಿಂದ ನಿಲ್ಲಿಸಿದಾಗ ಲೋಕತ್ರಯವೂ ನಡುಗಲಾರಂಭಿಸಿತು. ಒಂಟಿಕಾಲಿ ನಲ್ಲಿ ನಿಂತಿದ್ದ ಆ ರಾಜಕುಮಾರನ ಹೆಬ್ಬೆರಳಿನಿಂದ ಒತ್ತಲ್ಪಟ್ಟ ಪೃಥ್ವಿಯು ಆನೆಯು ಹತ್ತಿದ ನಾವೆಯಂತೆ ಅಲುಗಾಡಲಾರಂಭಿಸಿತು. ಧ್ರುವನು ಪ್ರಾಣವನ್ನೂ ಆ ಪ್ರಾಣದ್ವಾರವನ್ನೂ ಬಂಧಿಸಿ ಈಶ್ವರನಲ್ಲಿ ಇಟ್ಟು ತನ್ನಲ್ಲಿ ಜೀವನನ್ನೂ ದೇವನಲ್ಲಿ ತನ್ನನ್ನೂ ಭೇದಭಾವರಹಿತನಾಗಿ ನೋಡುತ್ತಾ ವಿಶ್ವಮೂರ್ತಿಯಾದ ಭಗವಂತನನ್ನು ಧ್ಯಾನಮಾಡಲು ಆರಂಭಿಸಿದಾಗ ಜಗತ್ತಿನ ಜೀವಜಂತುಗಳ ಪ್ರಾಣವಾಯುವೇ ನಿಂತು ಹೋಯಿತು. ಅಂದರೆ ಧ್ರುವನು ತನ್ನ ಆತ್ಮನನ್ನು ಪರಮಾತ್ಮನಲ್ಲಿ ನಿಲ್ಲಿಸಿ ತನ್ಮಯನಾದನು. ಸರ್ವಾಂತರ್ಯಾಮಿಯಾದ ಪರಮಾತ್ಮನು

ಜಗದ್ವ್ಯಾಪಿಯಾಗಿದ್ದಾನೆಯಾದುದರಿಂದ ವಿಶ್ವವ್ಯಾಪಿಯಾದ ಆ ದೇವ ನನ್ನು ಹೃದಯದಲ್ಲಿ ಸ್ಥಾಪಿಸಿ ಆತನು ತನ್ನ ಪ್ರಾಣವಾಯುವನ್ನು ನಿರೋಧಮಾಡಿದಾಗ ವಿಶ್ವದಲ್ಲಿ ಓತಪ್ರೋತನಾಗಿ ಸಂಚರಿಸುವ ಪ್ರಾಣ ವಾಯುವಿನ ಸಂಚಾರವು ನಿಂತುಹೋಯಿತು. ಶ್ರೀ ಕೃಷ್ಣನು ಒಂದು ಅಗಸೇ ಎಲೆಯ ಚೂರನ್ನು ತಿಂದು ತೃಪ್ತನಾದಾಗ ಲೋಕತ್ರಯವೂ ತೃಪ್ತವಾಗಲಿಲ್ಲವೆ ? ಧ್ಯಾನಾವಸ್ಥೆಯಲ್ಲಿ ಧ್ರುವನ ಆತ್ಮವು ವಿಶ್ವಾತ್ಮನೊಡನೆ ಸಮರಸವಾದಾಗ ಜಗತ್ತಿನ ಜೀವನಾಡಿಯು ನಿಂತು ಹೋಗುವುದರಲ್ಲಿ ಆಶ್ಚರ್ಯವೇನಿದೆ ? ಜಗತ್ತಿನ ಜೀವರಾಶಿಗಳ ಜೀವ ನಾಡಿಯು ನಿಂತುಹೋದ ಮೇಲೆ ಅಷ್ಟದಿಕ್ಪಾಲಕರು ಅವರ್ಣನೀಯ ವಾದ ದುಃಖದಿಂದ ಪೀಡಿತರಾಗಿ ಭಕ್ತಭಯಭಂಜನನಾದ ಶ್ರೀ ಹರಿ ಯನ್ನು ಶರಣುಹೊಂದಿದರು.

ಹರಿಯ ಸಮೀಪಕ್ಕೆ ಹೋಗಿ ದೇವತೆಗಳು ಈ ರೀತಿ ಹೇಳಿದರು. " ಭಗವನ್ ! ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚದಲ್ಲಿನ ಸಮಸ್ತ ಪ್ರಾಣಿಗಳ ಶ್ವಾಸಗಳು ನಿಂತುಹೋದುದೇಕೆ ? ಹಿಂದೆಂದೂ ಈ ರೀತಿಯಾಗಿರಲಿಲ್ಲ. ಈ ಕ್ಲೇಶದಿಂದ ನಮ್ಮನ್ನು ಶೀಘ್ರವಾಗಿ ಬಿಡಿಸ ಬೇಕು. ನೀನು ಶರಣಾಗತವತ್ಸಲನು. ಆದುದರಿಂದ ನಿನಗೆ ಶರಣು ಬಂದಿರುವ ನಮ್ಮನ್ನು ಉದ್ಧರಿಸುವ ಕೃಪೆಮಾಡಬೇಕು. " ಎಂದು ಹೇಳುತ್ತಾ ದೇವದೇವನ ಚರಣಗಳಿಗೆರಗಿದರು. ಪರಮಾತ್ಮನು ನಸುನಗುತ್ತಾ ಹೇಳಿದನು--

" ದೇವತೆಗಳೇ ! ಹೆದರಬೇಡಿ. ಬಾಲಕನೊಬ್ಬನ ಕಠಿಣ ತಪಸ್ಸಿ ನಿಂದ ಜಗತ್ತಿನ ಜೀವರಾಶಿಗಳ ಪ್ರಾಣವು ನಿಂತುಹೋಗಿದೆ. ಅದನ್ನು ನಾನು ಸರಿಪಡಿಸುತ್ತೇನೆ. ಆ ಬಾಲಕನು ಉತ್ತಾನಪಾದರಾಯನ ಮಗನಾದ ಧ್ರುವನು. ಈಗಲೇ ಅವನಲ್ಲಿಗೆ ಹೋಗಿ ಅವನನ್ನು ಅನುಗ್ರಹಿಸಿ ತಪಸ್ಸಿನ ಪ್ರಭಾವದಿಂದ ನನ್ನಲ್ಲಿ ಲೀನವಾಗಿರುವ ಆತನನ್ನು ಬಹಿರ್ಮುಖಗೊಳಿಸುತ್ತೇನೆ. ನಂತರ ಎಲ್ಲಾ ಪ್ರಾಣಿಗಳೂ ಸರಿಯಾಗಿ

ಉಸಿರಾಡುವಂತಾಗುತ್ತದೆ. ” ಭಗವಂತನ ವಾಕ್ಯವನ್ನು ಕೇಳಿದ ದೇವತೆಗಳಿಗೆ ಭಯವು ದೂರವಾಯಿತು. ಅವರೆಲ್ಲರೂ ಪರಮಾತ್ಮನಿಗೆ ಪ್ರಣಾಮಮಾಡಿ ಸ್ವರ್ಗಕ್ಕೆ ಹೊರಟುಹೋದರು. ಭಗವಂತನು ಭಕ್ತನಾದ ಧ್ರುವನನ್ನು ನೋಡಲು ಮಧುವನಕ್ಕೆ ಹೊರಟನು.

ಧ್ರುವನ ಬುದ್ಧಿಯು ದೃಢಭಕ್ತಿಯೋಗದಿಂದ ನಿಶ್ಚಲವಾಗಿತ್ತು. ಅವನು ತನ್ನ ಹೃದಯಕಮಲದಲ್ಲಿ ವಿದ್ಯುತ್ಪ್ರಭೆಯಂತೆ ತೇಜೋಮೂರ್ತಿಯಾದ ಪರಮಾತ್ಮನ ಮೂರ್ತಿಯನ್ನು ಧ್ಯಾನಮಾಡುತ್ತಿದ್ದನು. ಇದ್ದಕ್ಕಿದ್ದಂತೆಯೇ ಹೃದಯದಲ್ಲಿ ನಿಂತಿದ್ದ ಮೂರ್ತಿಯು ಅಂತರ್ಧಾನವಾದುದರಿಂದ ಗಾಬರಿಗೊಂಡ ಧ್ರುವನು ಕಣ್ಣುಬಿಡಲು ತನ್ನೆದುರಿಗೆ ಅದೇ ರೂಪದಿಂದಲೇ ಶ್ರೀ ಹರಿಯು ನಿಂತಿದ್ದುದನ್ನು ಕಂಡನು. ಧ್ರುವನು ಆನಂದಸಂಭ್ರಮಗಳಿಂದ ಮೇಲಕ್ಕೆದ್ದು. ಭಗವಂತನಿಗೆ ಸಾಷ್ಟಾಂಗ ನಮಸ್ಕಾರಮಾಡಿದನು. ನೇತ್ರಗಳಿಂದ ಕುಡಿಯುವಂತೆ, ಬಾಯಿಯಿಂದ ಚುಂಬಿಸುವಂತೆ, ಭುಜಗಳಿಂದ ಆಲಂಗಿಸುವಂತೆ ಆ ಬಾಲಕನು ಶ್ರೀ ಹರಿಯನ್ನು ಎವೆಯಿಕ್ಕದೆ ನೋಡಲಾರಂಭಿಸಿದನು. ಎರಡು ಕೈಗಳನ್ನೂ ಜೋಡಿಸಿ ಎದ್ದು ನಿಂತುಕೊಂಡು ಸ್ತೋತ್ರಮಾಡಲು ಪ್ರಯತ್ನಪಟ್ಟರೂ ಓದಲೂ ಬರೆಯಲೂ ಕಲಿತಿಲ್ಲದ ಚಿಕ್ಕ ಬಾಲಕನಾದುದರಿಂದ ಸ್ತೋತ್ರ ಮಾಡಲಾಗಲಿಲ್ಲ ಹೃದಯಾಂತರ್ಯಾಮಿಯಾದ ಪರಮಾತ್ಮನಿಗೆ ಇದು ಗೊತ್ತಾಗಿ ಆತನು ವೇದತತ್ತ್ವಸ್ವರೂಪವಾದ ತನ್ನ ಶಂಖವನ್ನು ಧ್ರುವನ ಕೆನ್ನೆಗೆ ತಾಕಿಸಿದನು. ಧ್ರುವನಿಗೆ ಆಗ ಜೀವಬ್ರಹ್ಮೈಕ್ಯಾನುಭವವಾಯಿತು. ಈಶ್ವರನ ಕೃಪೆಯಿಂದ ಆ ಕ್ಷಣದಲ್ಲಿಯೇ ಪ್ರಾಪ್ತವಾದ ವೇದಮಯವಾಕ್ಯಗಳಿಂದ ಭಕ್ತಿಭಾವಪೂರ್ವಕವಾಗಿ ಲೋಕತ್ರಯದಲ್ಲಿಯೂ ಪ್ರಸಿದ್ಧವಾದ ಕೀರ್ತಿಯುಳ್ಳ ಶ್ರೀ ಹರಿಯನ್ನು ಸ್ತೋತ್ರ ಮಾಡಲಾರಂಭಿಸಿದನು. ಬ್ರಹ್ಮಜ್ಞಾನವು ಪ್ರಾಪ್ತವಾದುದರಿಂದ ಧ್ರುವನಿಗೆ ಉಭಯಪದವು ಪ್ರಾಪ್ತವಾದಂತಾಯಿತು. ಧ್ರುವನು ಹೇಳಿದನು. “ ಪ್ರಭೋ ! ಯಾರು ತನ್ನ ಚೈತನ್ಯಶಕ್ತಿಯಿಂದ ಸಮಸ್ತ ಇಂದ್ರಿಯಗಳನ್ನೆಲ್ಲಾ ಬದುಕಿಸುತ್ತಾನೆಯೋ ಮತ್ತು ಯಾರ ಅಸ್ತಿತ್ವದಿಂದ ಕೈ,

ಕಾಲು, ಕಣ್ಣು, ಮೂಗು ಮುಂತಾದ ಸಮಸ್ತ ಅವಯುವಗಳೂ ತಮ್ಮ ತಮ್ಮ ಕೆಲಸಗಳನ್ನು ಮಾಡಲು ಸಮರ್ಥವಾಗುವುವೋ ಅಂತಹ ಆತ್ಮಸ್ವರೂಪನಾದ ಪರಮಪುರುಷನು ನೀನೇ. ಅಂತಃಕರಣದಲ್ಲಿ ಪ್ರವೇಶ ಮಾಡಿ ನನ್ನ ಈ ವಾಕ್‌ಶಕ್ತಿಯನ್ನು ನಿನ್ನ ಜ್ಞಾನಶಕ್ತಿಯಿಂದ ಬೆಳಗಿಸುತ್ತಿರುವೆ. ಹೇ ದೇವಾ! ನಿನ್ನನ್ನು ನಮಸ್ಕರಿಸುತ್ತೇನೆ. ಅಗ್ನಿಯೇ ಮುಂತಾದ ದೇವತೆಗಳು ವಾಕ್ ಮುಂತಾದ ಇಂದ್ರಿಯ ಗಳಿಗೆ ಅಧಿಷ್ಠಾತೃಗಳಾಗಿಯೂ ಪ್ರಕಾಶಕರಾಗಿಯೂ ಇರುವರೆಂದು ಹೇಳುತ್ತಾರೆ. ಆದರೆ ದೇವತೆಗಳೆಲ್ಲಾ ನಿನ್ನ ಸ್ವರೂಪವೇ ಸರಿ. ನೀನು ನಿನ್ನ ಶಕ್ತಿಯಾದ, ತ್ರಿಗುಣಮಯಿಯಾದ ಮಾಯೆಯ ಮೂಲಕ ಮಹತ್ತತ್ವ ಮುಂತಾದ ಪದಾರ್ಥಗಳನ್ನು ಸೃಷ್ಟಿಮಾಡುವೆ. ಮಾಯೆಯ ಮಿಥ್ಯಾಗುಣಗಳಾದ ಇಂದ್ರಿಯಗಳಲ್ಲಿ ಅಧಿಷ್ಠಾತೃಗಳಾದ ಅಗ್ನಿಯೇ ಮುಂತಾದ ದೇವತೆಗಳ ಸ್ವರೂಪದಿಂದ ನೀನೇ ಅಧಿಷ್ಠಾತೃವಾಗಿ ಅವು ಗಳ ಶಕ್ತಿಯನ್ನು ಪ್ರಕಾಶಗೊಳಿಸುವಂತೆ ಮಾಡುವೆ. ಅಗ್ನಿಯು ಒಂದೇ ಆದರೂ ಅನೇಕ ಕಟ್ಟಿಗೆಗಳಲ್ಲಿ ಅನೇಕ ರೂಪಗಳಾಗಿ ಕಾಣುವಂತೆ ನೀನು ಒಬ್ಬನೇ ಆದರೂ ಅನೇಕ ಪದಾರ್ಥಗಳಲ್ಲಿ ಅನೇಕ ರೂಪವಾಗಿ ಕಾಣುತ್ತಿರುವೆ. ನೀನಲ್ಲದೆ ಜಗತ್ತಿನಲ್ಲಿ ಚೈತನ್ಯ ಶಕ್ತಿಯುಕ್ತವಾದುದು ಮತ್ತೊಂದಿಲ್ಲ. ಎಲೈ ನಾಥನೇ! ಸರ್ವಶ್ರೇಷ್ಠ ನಾದ ಬ್ರಹ್ಮನೂ ಸಹ ಸೃಷ್ಟಿಯ ಆದಿಕಾಲದಲ್ಲಿ ಮಲಗಿ ಎದ್ದ ಪುರುಷನಂತೆ ನಿನ್ನನ್ನೇ ಶರಣುಹೋಗುತ್ತಾನೆ. ನಿನ್ನಿಂದ ಕೊಡಲ್ಪಟ್ಟ ಜ್ಞಾನದಿಂದಲೇ ತನ್ನೊಳಗೆ ನೋಡಿಕೊಂಡು ಈ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಮೋಕ್ಷಾಪೇಕ್ಷೆಯುಳ್ಳ ಯೋಗಿಗಳು ನಿನ್ನ ಚರಣ ಗಳನ್ನೇ ಶರಣುಹೋಗುತ್ತಾರೆ. ಹೇ ದೀನಬಂಧು! ನಿನ್ನ ಚರಣಗಳನ್ನು ಕೃತಘ್ನನಲ್ಲದೆ ಮತ್ತಾರು ಮರೆಯಬಲ್ಲರು? ಸಂಸಾರಬಂಧನದಿಂದ ತಪ್ಪಿಸಿ ಮುಕ್ತಿಯನ್ನು ದಾನಮಾಡಬಲ್ಲ ನಿನ್ನನ್ನು ಜಗತ್ತಿನ ತುಚ್ಛ ಕಾಮನಾಪೂರ್ತಿಗಾಗಿ ಸೇವೆಮಾಡುವವರ ಬುದ್ಧಿಯು ನಿನ್ನ ಮಾಯೆ ಯಿಂದಲೇ ಮೋಹಿತವಾಗಿರುವುದು. ನೀನು ಕಲ್ಪವೃಕ್ಷಸ್ವರೂಪನು!

ನಿನ್ನನ್ನು ಒಲಿಸಿಕೊಂಡ ನಂತರ ಹಸಿಯ ಹೆಣದಂತಿರುವ ಈ ಶರೀರದಿಂದ ಭೋಗಮಾಡಲು ವಿಷಯಸುಖಗಳನ್ನು ಯಾರು ಅಪೇಕ್ಷಿಸುತ್ತಾರೆಯೋ ಅವರು ನಿಜವಾಗಿಯೂ ಮೂರ್ಖರೇ ಸರಿ. ಏಕೆಂದರೆ ವಿಷಯ ಭೋಗಗಳಿಂದ ಹೊಂದುವ ಸುಖವು ನಮಗೆ ನರಕದಲ್ಲಿಯೂ ಸಿಕ್ಕಬಲ್ಲದು.

ದೇವ ! ನಿನ್ನ ಚರಣಕಮಲಗಳ ಧ್ಯಾನದಿಂದ, ನಿನ್ನ ಭಕ್ತರ ಭಕ್ತಿಪೂರಿತಗಳಾದ ಮಾತುಗಳನ್ನೇ ಕೇಳುವುದರಿಂದ, ಯಾವ ಆನಂದವು ಪ್ರಾಪ್ತವಾಗುವುದೋ ಆ ಆನಂದವು ಮುಕ್ತಿಯಲ್ಲಿಯೂ, ಬ್ರಹ್ಮಾಂಡ ದಲ್ಲಿಯೂ ಸಿಕ್ಕಲಾರದು. ಸ್ವರ್ಗಾದಿಸುಖಗಳನ್ನು ಆ ಆನಂದಕ್ಕೆ ಸರಿಗಟ್ಟಲಾದೀತೆ ? ಸ್ವರ್ಗಾದಿಲೋಕಗಳು ಕಾಲನ ಪ್ರಹಾರದಿಂದ ನಾಶವಾಗುವುವು. ಆ ಲೋಕಗಳಲ್ಲಿರುವ ಜನಗಳು ತಮ್ಮ ತಮ್ಮ ಪುಣ್ಯಕರ್ಮಗಳ ಫಲಭೋಗವು ತೀರಿದ ನಂತರ ತಲೆಕೆಳಗಾಗಿ ಭೂಮಿಗೆ ಉರುಳುವರು. ಎಲೈ ಅನಂತನೆ ! ನಿನ್ನ ಭಕ್ತಿಯಲ್ಲಿ ಧೃಢವಾಗಿ ನಿಂತಿರುವ ಶುದ್ಧಾಂತಃಕರಣವುಳ್ಳ ಭಕ್ತರ ಸಂಗವನ್ನೇ ನಾನು ಅಪೇಕ್ಷಿಸುತ್ತೇನೆ. ನಿನ್ನ ಗುಣಗಳನ್ನು ವರ್ಣಿಸುವ ದಿವ್ಯ ಕಥಾ ರೂಪ ಅಮೃತವನ್ನು ಪಾನಮಾಡಲು ಇಚ್ಛೆಯುಳ್ಳವನಾಗಿ ಸತ್ಸಂಗದ ಸಹಾಯದಿಂದ ಅನೇಕ ಕಷ್ಟಪರಂಪರೆಗಳಿಂದ ಕೂಡಿದ ಘೋರಸಂಸಾರ ಸಾಗರವನ್ನು ಅತಿ ಸುಲಭವಾಗಿಯೇ ದಾಟಬಲ್ಲೆನು ಕಮಲನಾಭ ! ನಿನ್ನ ಚರಣಕಮಲಗಳ ಸುಗಂಧದಿಂದ ಮೋಹಿತವಾದ ಚಿತ್ತವುಳ್ಳ ಸತ್ಪುರುಷರ ಸಂಗವನ್ನೇ ಯಾರು ಅಪೇಕ್ಷಿಸುವರೋ ಅಂಥವರಿಗೆ ತಮ್ಮ ಅತ್ಯಂತ ಪ್ರಿಯವಾದ ಶರೀರದ ಮೇಲೆಯಾಗಲೀ, ಅದರ ಸಂಬಂಧಿ ಗಳಾದ ಪತ್ನಿ, ಪುತ್ರ, ಧನ, ಗೃಹ, ಕನಕಾದಿಗಳ ಮೇಲಾಗಲೀ ಆಶೆಯು ಇರುವುದಿಲ್ಲ. ಎಲೈ ಆದಿಪುರುಷನೇ ! ಅಜನೆ ! ನಾನು ನಿನ್ನ ಈ ಸಗುಣವಿರಾಡ್ರೂಪವನ್ನು ತಿಳಿಯಬಲ್ಲೆನು. ಪಶು, ವೃಕ್ಷ, ಪರ್ವತ, ದೇವ, ಮನುಷ್ಯಾದಿಗಳೂ, ಸತ್, ಅಸತ್ ಪದಾರ್ಥ ಗಳೂ ಎಲ್ಲವೂ ಈ ವಿರಾಡ್ರೂಪದಲ್ಲಿ ಅಡಕವಾಗಿವೆ. ಈ ಶರೀರವು

ಮಹದಾದಿತತ್ತ್ವಗಳಿಂದ ರಚಿತವಾಗಿರುವುದು. ಇದನ್ನು ಮೀರಿದ, ವಾಣಿಗೂ ಮನಸ್ಸಿಗೂ ಅಗೋಚರವಾದ, ನಿನ್ನ ನಿರಾಕಾರ ಪರಮ ಸ್ವರೂಪವನ್ನು ತಿಳಿಯಲಾರೆನು. ಕಲ್ಪಾಂತದಲ್ಲಿ ಯಾವ ಮಹಾ ಪುರುಷನು ಈ ಸಂಪೂರ್ಣ ಜಗತ್ತನ್ನೂ ತನ್ನ ಹೃದಯಕಮಲದಲ್ಲಿ ಧಾರಣೆಮಾಡಿಕೊಂಡು ಯೋಗನಿದ್ರಾಪರವಶನಾಗಿ ಶೇಷಶಯ್ಯೆಯ ಮೇಲೆ ಮಲಗುವನೋ ಮತ್ತು ಯಾರ ನಾಭಿರೂಪವಾದ ಸಾಗರ ದಿಂದ ಸುವರ್ಣವರ್ಣ-ಲೋಕಮಯವಾದ ಕಮಲವು ಉತ್ಪನ್ನವಾಗು ತ್ತದೆಯೋ ಆ ನಾರಾಯಣನು ನೀನೇ. ಆದುದರಿಂದ ನಾನು ನಿನಗೆ ಪ್ರಣಾಮಮಾಡುತ್ತೇನೆ. (ಧ್ರುವನಿಗಾಗ ಪರಮಾತ್ಮನ ಅನುಗ್ರಹದಿಂದ ನಿರ್ಗುಣರೂಪದ ಜ್ಞಾನವಾದುದರಿಂದ ಮುಂದೆ ಅದೇ ಭಾಷೆಯಲ್ಲಿ ಮಾತನಾಡುತ್ತಾನೆ.)

ಪ್ರಭೋ! ನೀನು ಜೀವಾತ್ಮನಿಂದ ಭಿನ್ನನು. ಏಕೆಂದರೆ ನೀನು ನಿತ್ಯಮುಕ್ತನು. ಜೀವನು ಸಂಸಾರದಿಂದ ಬದ್ಧನು. ನೀನು ಜ್ಞಾನಮಯನಾದುದರಿಂದ ಶುದ್ಧನು. ಜೀವನು ಅಜ್ಞಾನಮಯ ನಾದುದರಿಂದ ಮಲಿನನು. ನೀನು ಸರ್ವಜ್ಞನು. ಜೀವನು ಅಜ್ಞನು. ನೀನು ಚೈತನ್ಯನು. ಜೀವನು ಜಡನು, ಸ್ವಯಂಪ್ರಕಾಶನಲ್ಲ. ನೀನು ನಿರ್ವಿಕಾರನು. ಜೀವನು ವಿಕಾರಯುಕ್ತನು. ನೀನು ಅನಾದಿ ಪುರುಷನು. ಜೀವನು ಆದಿ ಅಂತ್ಯಗಳುಳ್ಳವನು. ನೀನು ಷಡ್ಗುಣೈಶ್ವರ್ಯ ಯುಕ್ತನು. ಜೀವನು ಆ ಐಶ್ವರ್ಯಗಳಿಂದ ರಹಿತನು. ನೀನು ಗುಣತ್ರಯಕ್ಕೆ ಅಧೀಶ್ವರನು. ಜೀವನು ತ್ರಿಗುಣಗಳಿಗೆ ಅಧೀನನು. ನೀನು ಬುದ್ಧನು. ಅವಸ್ಥೆಗಳಿಗೆ ಸಾಕ್ಷಿಯು ನಿನ್ನ ದೃಷ್ಟಿಯು ಅಖಂಡಿತ. (ಅಖಂಡ)

[ಜೀವನಸ್ವರೂಪವು— ಚೈತನ್ಯಂ ಯದಧಿಷ್ಠಾನಂ ಲಿಂಗದೇಹಶ್ಚ ಯಃ ಪುನಃ। ಚಿಚ್ಛಕ್ತಿ ರ್ಲಿಂಗದೇಹಸ್ಥಾ ತತ್ಸಂಘೋ ಜೀವ ಉಚ್ಯತೇ ॥

ಜಗತ್ತಿಗೆ ಅಧಿಷ್ಠಾನವಾದ ಚೈತನ್ಯ, ಲಿಂಗದೇಹ, ಆ ಲಿಂಗದೇಹ ದಲ್ಲಿ ಪ್ರತಿಫಲಿಸಿದ ಚಿಚ್ಛಕ್ತಿಯು, ಈ ಮೂರೂ ಸೇರಿದ ಗುಂಪನ್ನು ಜೀವನೆಂದು ಕರೆಯುತ್ತಾರೆ. ಜಗತ್ತಿಗೆ ಅಧಿಷ್ಠಾನವಾದ ಚೈತನ್ಯವು ಅಖಂಡವಾಗಿ ಸರ್ವವ್ಯಾಪಿಯಾಗಿದೆ. ಲಿಂಗದೇಹರೂಪಿಯಾದ ಕನ್ನಡಿ ಯಲ್ಲಿ ಅದು ಪ್ರತಿಫಲಿಸಿದಾಗ, ಆ ಪ್ರತಿಬಿಂಬವು ಚಿಚ್ಛಕ್ತಿಯಾಗು ತ್ತದೆ. ಲಿಂಗದೇಹವು ಭಿನ್ನವಾದರೆ, ಅದರಲ್ಲಿ ಅಧಿಷ್ಠಾತೃ ಚೈತನ್ಯವು ಪ್ರತಿಫಲಿಸಲಾಗುವುದಿಲ್ಲ. ಚಿಚ್ಛಕ್ತಿಯು ಉತ್ಪನ್ನವಾಗುವುದಿಲ್ಲ. ಆಗ ಜೀವತ್ವವು ಸಿದ್ಧವಾಗುವುದಿಲ್ಲ.]

ನೀನು ಬುದ್ಧಿಯ ಅವಸ್ಥೆಗಳಿಗೆ ಸಾಕ್ಷಿಯು. ನಿನ್ನ ದೃಷ್ಟಿಯು ಅಖಂಡಿತ. (ಅಖಂಡ) ನೀನು ಜಗತ್ತನ್ನು ಪಾಲನೆಮಾಡುವುದ ಕ್ಕಾಗಿ ಸಾತ್ವಿಕನಾಗಿ ಯಜ್ಞಪುರುಷನಾದ ವಿಷ್ಣುರೂಪದಿಂದ ಪ್ರಕಟ ನಾಗಿದ್ದೀಯೆ! ಸಮಯಕ್ಕೆ ತಕ್ಕಂತೆ ಪರಸ್ಪರ ವಿರುದ್ಧ ಗತಿಯುಳ್ಳ ವಿವಿಧ ಶಕ್ತಿಶಾಲಿನಿಯಾದ, ವಿದ್ಯಾ, ಅವಿದ್ಯಾರೂಪ ಪ್ರಕೃತಿಯು ಯಾರಲ್ಲಿ ಹುಟ್ಟಿ ಲಯಹೊಂದುವುದೋ ಆ ವಿಶ್ವೋತ್ಪತ್ತಿ ಕಾರಕ ನಾದ ಅನಾದಿ, ಆದಿ, ಅದ್ವಿತೀಯ, ಅನಂತ ಅವಿಕಾರ, ಆನಂದಮಯ ಬ್ರಹ್ಮನು ನೀನೇ. ನಾನು ನಿನಗೆ ಶರಣುಬಂದಿದ್ದೇನೆ. ಭಗವನ್! ಯಾವ ನಿಷ್ಕಾಮಭಕ್ತರು. ಪರಮಾನಂದ ರೂಪವಾದ ನಿನ್ನ ಕೋಮಲ ಚರಣ ಕಮಲಗಳನ್ನು ಭಜಿಸುತ್ತಾರೆಯೋ ಅವರು ಯಥಾರ್ಥ ಪರಮಾರ್ಥ ರೂಪವಾದ ಮುಕ್ತಿಫಲವನ್ನು ಹೊಂದುವರು. ಆದರೆ ಅರ್ಯನೆ! ನೀನು ನನ್ನಂತಹ ಸಕಾಮ ಭಕ್ತನನ್ನೂ ಸಹ ಅನುಗ್ರಹ ಮಾಡಲು ಕಾತುರನಾಗಿ ಹಸುವು ತನ್ನ ಕರುವನ್ನು ವ್ಯಾಘ್ರಾದಿಗಳಿಂದ ರಕ್ಷಿಸಿ, ಹಾಲು ಕುಡಿಸಿ ಕಳಿಸುವಂತೆ ರಕ್ಷಿಸುತ್ತಿರುವೆ. ನೀನು ಸರ್ವದಾ ಜಗತ್ಕಲ್ಯಾಣವನ್ನು ಮಾಡುವುದರಲ್ಲಿಯೇ ತತ್ಪರನಾಗಿರುವೆ.

ಉತ್ತಮ ಸಂಕಲ್ಪವುಳ್ಳ ವಿವೇಕಿಯಾದ ಧ್ರುವನು ಸ್ತೋತ್ರ ಮಾಡಲು ಭಕ್ತವತ್ಸಲನಾದ ಭಗವಂತನು ಪ್ರಸನ್ನನಾಗಿ ಈ ರೀತಿ ಹೇಳಿದನು.

"ಎಲೈ ರಾಜಕುಮಾರನೇ! ನಿನ್ನ ಮನೋರಥವನ್ನು ನಾನು ತಿಳಿದಿದ್ದೇನೆ. ಸುವ್ರತ! ನಿನಗೆ ಕಲ್ಯಾಣವಾಗಲಿ. ನಿನ್ನ ಮನೋರಥವು ದುರ್ಲಭವಾದರೂ ಅದನ್ನು ನಾನು ನಡೆಸಿಕೊಡುತ್ತೇನೆ. ನನ್ನ ಕೃಪೆಯಿಂದ ನಿನಗೆ ಧ್ರುವಪದವು ಸಿಕ್ಕುವುದು. ಇದುವರೆಗೆ ಅದನ್ನಾರೂ ಪಡೆದಿಲ್ಲ. ಅದು ಪರಮ ಪ್ರಕಾಶಯುಕ್ತವಾದುದು. ಆ ಧ್ರುವಲೋಕದ ಆಶ್ರಯದಿಂದಲೇ ಗ್ರಹ, ನಕ್ಷತ್ರ, ತಾರಾಗಣ ಜ್ಯೋತಿಶ್ಚಕ್ರಗಳು ನಿಂತಿರುವುವು. ಕಲ್ಪಾಂತಪರ್ಯಂತ ಇರುವ ಲೋಕಗಳು ನಾಶ ಹೊಂದಿದರೆ, ಆ ಧ್ರುವಲೋಕವು ನಾಶಹೊಂದುವುದಿಲ್ಲ. ಗಾಣದಲ್ಲಿ ಎತ್ತು ಮಧ್ಯದ ಮರದ ಸುತ್ತಲೂ ತಿರುಗುತ್ತಿರುವಂತೆಯೇ ತಾರಾಗಣಗಳೂ, ನಕ್ಷತ್ರರೂಪವಾದ ಧರ್ಮವೂ, ಅಗ್ನಿ ಇಂದ್ರ ಕಶ್ಯಪಾದಿ ಸಪ್ತರ್ಷಿಗಳೂ ಆ ಲೋಕದ ನಾಲ್ಕು ಸುತ್ತಲೂ ತಿರುಗುತ್ತಿರುವರು. ಈ ಭೂಲೋಕದಲ್ಲಿಯೂ ಸಹ ನಿಮ್ಮ ತಂದೆಯು ನಿನಗೆ ರಾಜ್ಯವನ್ನು ಕೊಟ್ಟು ವನಕ್ಕೆ ಹೋಗುವನು. ನೀನು ಮೂವತ್ತಾರು ಸಹಸ್ರ ವರ್ಷ ರಾಜ್ಯಭಾರ ಮಾಡುವೆ. ಆದರೂ ನನ್ನ ಅನುಗ್ರಹದಿಂದ ನಿನ್ನ ಅಂತಃಕರಣವು ವಿಷಯ ಭೋಗದಲ್ಲಿ ಲುಪ್ತವಾಗುವುದಿಲ್ಲ. ನಿನ್ನ ತಮ್ಮನಾದ ಉತ್ತಮನು ಬೇಟೆಗಾಗಿ ಕಾಡಿಗೆ ಹೋಗುವನು. ಅಲ್ಲಿ ಒಬ್ಬ ಯಕ್ಷನಿಂದ ಅವನ ಮೃತ್ಯುವಾಗುವುದು. ಉತ್ತಮನ ತಾಯಿಯಾದ ಸುರುಚಿಯು ಮಗನನ್ನು ಹುಡುಕಿಕೊಂಡು ಹೋಗುವಳು. ಅಲ್ಲಿ ಕಾಡುಗಿಚ್ಚಿನಲ್ಲಿ ಸಿಕ್ಕಿ ಆವಳೂ ಮೃತಳಾಗುವಳು. ಯಜ್ಞಪುರುಷನಾದ ನನ್ನ ಪ್ರೀತ್ಯರ್ಥವಾಗಿ ನೀನು ಹೆಚ್ಚು ಹೆಚ್ಚು ದಕ್ಷಿಣೆಗಳುಳ್ಳ ಯಜ್ಞಗಳನ್ನು ಮಾಡುವೆ. ಈ ಲೋಕದಲ್ಲಿನ ಸಮಸ್ತ ಸುಖಗಳನ್ನೂ ಅನುಭವಿಸುವೆ. ಕೊನೆಯಲ್ಲಿ ವಾರ್ಧಿಕ್ಯವು ಬಂದ ನಂತರ ನನ್ನ ಸ್ಮರಣೆಮಾಡುತ್ತಾ ಧ್ರುವಲೋಕಕ್ಕೆ ಹೋಗುವೆ. ಧ್ರುವ ಲೋಕವು ಸಪ್ತಋಷಿಗಳ ಮೇಲಿದೆ. ಅದಕ್ಕೆ ಸಮಸ್ತರೂ ನಮಸ್ಕಾರ ಮಾಡುತ್ತಾರೆ. ಯೋಗಿಗಳು ಅಲ್ಲಿಗೆ ಹೋದನಂತರ ಪುನಃ ಸಂಸಾರಕ್ಕೆ ಹಿಂದಿರುಗುವುದಿಲ್ಲ."

ಮೈತ್ರೇಯರು ಹೇಳುತ್ತಾರೆ—ಹೀಗೆ ಧ್ರುವನಿಂದ ಪೂಜಿಸಲ್ಪಟ್ಟ ಗರುಡ ಧ್ವಜನಿಂದ ಹರಿಯು ಧ್ರುವನಿಗೆ ಅತ್ಯುತ್ತಮ ಸ್ಥಿತಿಯನ್ನು ದಯಪಾಲಿಸಿ ಅವನು ನೋಡುತ್ತಿರುವಂತೆಯೇ ಅಂತರ್ಧಾನನಾದನು. ಧ್ರುವನು ತನ್ನ ಮನಸ್ಸಿನ ಕಾಮನೆಯನ್ನು ಪೂರ್ತಿಮಾಡಿಕೊಂಡು ತನ್ನ ಪಟ್ಟಣಕ್ಕೆ ಹಿಂತಿರುಗಿದನು. ಆದರೂ ಅವನ ಮನಸ್ಸಿಗೆ ಹೆಚ್ಚು ಸುಖವಾಗಲಿಲ್ಲ.

ವಿದುರನು ಕೇಳಿದನು.

" ಪ್ರಭು ಮಾಯಾಶಕ್ತಿ ಯುಕ್ತನಾದ ಶ್ರೀಹರಿಯ ದುರ್ಲಭ ವಾದ ಪರಮಪದವಿಯನ್ನು ಆತನ ಚರಣ ಸೇವೆಯಿಂದ ಒಂದೇ ಜನ್ಮ ದಲ್ಲಿ ಪಡೆದರೂ ಜ್ಞಾನಿಯಾದ ಧ್ರುವನಿಗೆ ಸಂತೋಷವಾಗಲಿಲ್ಲವೇಕೆ ?

ಸವತಿ ತಾಯಿಯ ಬಾಣದಂತಹ ಮಾತುಗಳು ಎದೆಗೆ ಚುಚ್ಚಿ ದಂತಾಗಿ " ತಪಸ್ಸು ಮಾಡಿದ ನಂತರ, ಶ್ರೀಹರಿಯನ್ನು ಹೊಂದಿದಾಗ ಮುಕ್ತಿಯನ್ನು ಕೇಳದೆ ಭೋಗವನ್ನು ಕೇಳಿ ತಪ್ಪು ಮಾಡಿದೆನಲ್ಲಾ ! ಬಾಲ ಬ್ರಹ್ಮಚಾರಿಗಳಾದ ಸನಕ ಸನಂದನಾದಿಗಳು ಅನೇಕ ಜನ್ಮಗಳ ವರೆಗೂ ಸಮಾಧಿಯಲ್ಲಿ ನಿಂತು ಕಠಿಣ ತಪಸ್ಸುಮಾಡಿ ಯಾವ ಪರಮ ಪದವನ್ನು ತಿಳಿದರೋ ಆ ದೇವದೇವನ ಚರಣಕಮಲಗಳನ್ನು ಕೇವಲ ಆರೇ ಆರು ತಿಂಗಳಲ್ಲಿ ನಾನು ಪಡೆದರೂ ಕೊನೆಗೆ ಅದನ್ನು ಕಳೆದು ಕೊಂಡೆನಲ್ಲಾ, ನನ್ನ ಬುದ್ಧಿಯು ಭೋಗದಲ್ಲಿ ಸಿಕ್ಕಿಕೊಂಡಿತು. ಎಂತಹ ಅವಿವೇಕ ! ಜಗತ್ತಿನ ಸಮಸ್ತ ದುಃಖಗಳಿಂದಲೂ ಪಾರು ಮಾಡಬಲ್ಲ ಶ್ರೀಹರಿಯ ಚರಣಗಳಿಗೆ ಶರಣು ಬಂದರೂ ಕೂಡ ಒಂದಿಲ್ಲದಿದ್ದರೊಂದು ದಿನ ನಾಶವಾಗುವ ತುಚ್ಛಸುಖವನ್ನು ಕೇಳಿದೆ ನಲ್ಲಾ ! ಇತರರ ಅಭಿವೃದ್ಧಿಯನ್ನು ಸಹಿಸದಿರುವ ದೇವತೆಗಳು ನನ್ನ ಮನಸ್ಸಿನಲ್ಲಿ ಪ್ರವೇಶಮಾಡಿ ನನಗೆ ಈ ಬುದ್ಧಿಯನ್ನು ಹುಟ್ಟಿಸಿರಬೇಕು " ನೀನಿನ್ನೂ ಚಿಕ್ಕ ಬಾಲಕನು. ನಿನಗೆ ಮಾನವೇನು ಅವಮಾನ ವೇನು " ಎಂದು ಮುಂತಾಗಿ ಉಪದೇಶಮಾಡಿದ ನಾರದರ ಮಾತು

ನಿಜವಾಗಿಯೂ ಸತ್ಯವೇ. ನಾನೊಬ್ಬ ಅವಿವೇಕಿ. ನಿದ್ದೆಯಲ್ಲಿರುವ ಮನುಷ್ಯನು ಸ್ವಪ್ನದಲ್ಲಿ ತನಗೆ ಇತರರಿಂದ ದುಃಖವಾಗುತ್ತದೆಂದು ಭಾವಿಸಿ ಅಲ್ಲಿ ತಾನೇ ತಾನಲ್ಲದೇ ಮತ್ತಾರೂ ಇಲ್ಲದಿದ್ದರೆ ಇತರರಿಂದ ಆಗುವ ದುಃಖದ ಭ್ರಾಂತಿಗೆ ಮರುಳಾಗುವಂತೆ ನಾನು ನನ್ನ ಸೋದರ ನನ್ನು ನನಗಿಂತಲೂ ಭಿನ್ನನೆಂದು ಭಾವಿಸಿ ಅವನ ಸುಖವನ್ನು ನನ್ನ ಸುಖವೆಂದು ತಿಳಿಯದೆ ಸವತಿತಾಯಿಯ ಕಟುವಚನಗಳಿಂದ ದುಃಖಿಸಿ ಮಾಯಾಮೋಹಕ್ಕೆ ಒಳಗಾದೆನಲ್ಲಾ, ಜಗತ್ತಿನಲ್ಲಿರುವವನು ಅಖಂಡ ಪರಿಪೂರ್ಣಪರಬ್ರಹ್ಮನೊಬ್ಬನೇ. ಅವನಲ್ಲದೇ ಬೇರಾವುದೂ ಇಲ್ಲವೇ ಇಲ್ಲ. ಇಚ್ಛಾದ್ವೇಷಗಳೆಲ್ಲಾ ಮಾಯಾ ಮೋಹಜನಿತ ವಿಕಾರಗಳು. ಮರಣವು ಸಿದ್ಧವಾಗಿರುವವನಿಗೆ ಔಷಧವು ಹೇಗೆ ವ್ಯರ್ಥವೋ ಹಾಗೆಯೇ ನಾನು ದೇವನಿಂದ ಕೇಳಿಕೊಂಡ ವರವು ವ್ಯರ್ಥ ಮಾತ್ರ. ಯಾರನ್ನು ಹೊಂದುವುದು ಅತ್ಯಂತ ಕಠಿಣವೋ ಅಂತಹ ಶ್ರೀಹರಿಯನ್ನು ಮುಕ್ತಿ ದಾಯಕನಾದ ದೇವನನ್ನು ತಪಸ್ಸಿನಿಂದ ಪ್ರ ಸ ನ್ನ ನ ನ್ನಾ ಗಿ ಮಾಡಿ ಕೊಂಡರೂ ಜನ್ಮಮರಣ ರೂಪಿಯಾದ ಸಂಸಾರದೊಳಗಿನ ತುಚ್ಛ ಪದವಿಯನ್ನೇ ನಾನು ಕೇಳಿಕೊಂಡೆ. ಆ ದೇವನು ನನಗೆ ಬ್ರಹ್ಮಾ ನಂದವನ್ನು ಕೊಡುವುದರಲ್ಲಿದ್ದನು. ನಾನು ಅದಕ್ಕೆ ಬದಲಾಗಿ ಅಜ್ಞಾನದ ಮೋಹಕ್ಕೆ ಒಳಗಾಗಿ ಜಗತ್ತಿನ ಸನ್ಮಾನವನ್ನು–ಹೆಚ್ಚು ಗಾರಿಕೆಯ ಪದವಿಯನ್ನು ಕೇಳಿಕೊಂಡೆನಲ್ಲಾ! ಯಾವನಾದರೊಬ್ಬ ದರಿದ್ರನು ಬಹುಕಾಲ ಕಷ್ಟಪಟ್ಟು ಅತ್ಯಂತ ಶ್ರಮದಿಂದ ಚಕ್ರವರ್ತಿ ಯನ್ನು ಒಲಿಸಿಕೊಂಡು ಎಂತಹ ಐಶ್ವರ್ಯವನ್ನಾದರೂ ಕೊಡಬಲ್ಲ ಅವನಿಂದ ಅತ್ಯುತ್ತಮ ಲಾಭವನ್ನು ಪಡೆಯುವುದಕ್ಕೆ ಪ್ರತಿಯಾಗಿ ಯಾವುದೋ ಅನುಪಯೋಗವಾದ ಪದಾರ್ಥವನ್ನು ಕೇಳಿದಂತಾಯಿ ತಲ್ಲಾ!" ಎಂದು ಮುಂತಾಗಿ ಪಶ್ಚಾತ್ತಾಪಪಡಲಾರಂಭಿಸಿದನು.

ಎಲೈ ವಿದುರನೇ! ಶ್ರೀಹರಿಯ ಚರಣಕಮಲಗಳನ್ನೇ ಸರ್ವಸ್ವ ವೆಂದು ನಂಬಿರುವ ನಿನ್ನಂತಹ ಭಕ್ತರು ಆ ಪರಮಾತ್ಮನ ದಾಸ್ಯಭಾವ

ವೊಂದನ್ನು ಹೊರತಾಗಿ ಮತ್ತೇನನ್ನೂ ಬೇಡರು. ತಾನಾಗಿಯೇ ಒದಗುವ ಸುಖ ದುಃಖಗಳಿಂದಲೇ ತೃಪ್ತಿಹೊಂದುವರು.

ಇತ್ತಲಾಗಿ ರಾಜಾ ಉತ್ತಾನಪಾದನಿಗೆ ಧ್ರುವನು ಪಟ್ಟಣಕ್ಕೆ ಹಿಂತಿರುಗುತ್ತಿರುವನೆಂಬ ಸಮಾಚಾರವು ತಿಳಿಯಲು ಸತ್ತುಹೋದ ಮನುಷ್ಯನು ಪುನಃ ಬದುಕಿಬಂದನೆಂದಾರಾದರೂ ಹೇಳಿದರೆ ಅದನ್ನು ನಂಬುವುದು ಹೇಗೆ ಅಸಾಧ್ಯವೋ ಹಾಗೆಯೇ "ನನ್ನಂತಹ ದೌರ್ಭಾಗ್ಯನಿಗೆ ಅಂತಹ ಪುಣ್ಯವು ಇದೆಯೆ" ಎಂದು ಮುಂತಾಗಿ ಮೊದಮೊದಲು ಸಂಶಯಪಟ್ಟನು. ದೇವರ್ಷಿಯಾದ ನಾರದನ ಮಾತುಗಳು ಜ್ಞಾಪಕಕ್ಕೆ ಬಂದಾಗ, ಅವನ ಸಂಶಯವು ನಿವಾರಣೆಯಾಗಿ ಮಗನ ಆಗಮನ ವಾರ್ತೆಯಿಂದ ಸಂತೋಷಪಟ್ಟನು. ಈ ವರ್ತಮಾನವನ್ನು ತಂದು ಕೊಟ್ಟವರಿಗೆ ತನ್ನ ಕೊರಳಿನಲ್ಲಿದ್ದ ಅತ್ಯಂತ ಅಮೌಲ್ಯವಾದೊಂದು ರತ್ನಹಾರವನ್ನು ತನ್ನ ಕುತ್ತಿಗೆಯಿಂದ ತೆಗೆದು ದಾನಮಾಡಿದನು. ಭಂಗಾರದಿಂದ ಸಜ್ಜಿತವಾದ ಉತ್ತಮಾಶ್ವಗಳಿಂದ ಸಿದ್ಧವಾದ ರಥದಲ್ಲಿ ಕುಳಿತುಕೊಂಡು ಅವನನ್ನು ಎದುರುಗೊಳ್ಳುವುದಕ್ಕಾಗಿ ಹೊರಟನು. ರಾಜನೆಂದರೆ ಬ್ರಾಹ್ಮಣರು, ಮಂತ್ರಿ, ಪರಿಚಾರಕರು, ಬಂಧುಬಾಂಧವರು ಹೊರಟರು. ರಾಜನ ಮುಂದೆ ಶಂಖ, ದುಂದುಭಿ, ವೇಣು ಮುಂತಾದ ಶುಭವಾದ್ಯಗಳವರೂ, ವೇದಮಂತ್ರಗಳನ್ನು ಪಾರಾಯಣ ಮಾಡುವ ಬ್ರಾಹ್ಮಣರೂ ಹೊರಟರು. ಮಗನನ್ನು ಎದುರುಗೊಳ್ಳುವುದಕ್ಕಾಗಿ ಕಾತುರನಾಗಿದ್ದ ರಾಜನು ಪ್ರಯಾಣಮಾಡುತ್ತಿರಲು ಅತ್ಯುತ್ತಮ ಸ್ವರ್ಣಾಭರಣಗಳನ್ನು ಧರಿಸಿದ ಸುನೀತಿ ಸುರುಚಿ ರಾಣಿಯರು ಉತ್ತಮನನ್ನು ಜೊತೆಯಲ್ಲಿ ಕುಳ್ಳಿರಿಸಿಕೊಂಡು ಪಾಲಕಿಯಲ್ಲಿ ಹೊರಟರು. ಉಪವನದ ಸಮೀಪಕ್ಕೆ ಬಂದಾಗ, ಎದುರಿಗೆ ಬರುತ್ತಿರುವ ಧ್ರುವನನ್ನು ಕಂಡು ಉಪವನದ ಸಮೀಪಕ್ಕೆ ಬಂದನಂತರ ಧ್ರುವನು ಬರುತ್ತಿರುವುದನ್ನು ನೋಡಿದ ರಾಜನು ಥಟ್ಟನೆ ರಥದಿಂದಿಳಿದು ಬರಿಗಾಲಿನಲ್ಲಿಯೇ ಓಡಿಹೋಗಿ ಪ್ರೇಮದಿಂದ ವಿಹ್ವಲನಾಗಿ ಪರಮಾತ್ಮನ

ಚರಣಕಮಲದ ಸ್ಪರ್ಶದಿಂದ ಸಂಸಾರ ಬಂಧನ ವಿಮುಕ್ತಿಯನ್ನು ಪಡೆದಿದ್ದ ಧ್ರುವನನ್ನು ಎರಡು ಬಾಹುಗಳಿಂದಲೂ ಆಲಂಗಿಸಿ ತಬ್ಬಿಕೊಂಡನು. ಮನಸ್ಸು ಉತ್ಕಂಠಿತವಾಗುತ್ತಿರಲು ಬಾರಿಬಾರಿಗೂ ದೊಡ್ಡ ಉಸಿರನ್ನು ಬಿಡುತ್ತಿದ್ದನು. ಬಾರಿಬಾರಿಗೂ ಮಗನ ತಲೆಯನ್ನು ಆಘ್ರಾಣಿಸುತ್ತಿದ್ದನು. ಪಶ್ಚಾತ್ತಾಪದಿಂದ ದಗ್ಧವಾಗಿದ್ದ ಆತನ ಹೃದಯವು ತೃಪ್ತಿಗೊಂಡಿತು. ಧ್ರುವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಆನಂದದಿಂದ ತುಂಬಿದ ಆತನ ನೇತ್ರಗಳಿಂದ ಧಾರಾಕಾರವಾಗಿ ಹರಿಯುತ್ತಿದ್ದ ಜಲಬಿಂದುಗಳು ಧ್ರುವನ ತಲೆಯನ್ನು ನೆನಸಿದವು. ಸಜ್ಜನ ಶ್ರೇಷ್ಠನಾದ ಧ್ರುವನು ತಂದೆಯ ಪಾದಗಳಿಗೆ ನಮಸ್ಕರಿಸಿದನು. ರಾಜನು ಆಶೀರ್ವದಿಸಿದನು ಧ್ರುವನು ತನ್ನ ತಾಯಿಯಾದ ಸುನೀತಿಗೆ ಪ್ರಣಾಮಮಾಡಿ ಆಕೆಯ ಆಶೀರ್ವಾದವನ್ನು ಶಿರಸಾ ಧಾರಣಮಾಡಿದನು. ಸುರುಚಿಯು ತನ್ನ ಪಾದಗಳಿಗೆ ನಮಸ್ಕರಿಸುತ್ತಿರುವ ಧ್ರುವನನ್ನು ನೋಡಿ ಈ ಬಾಲಕನಿಗೆ ತಾನು ಕೊಟ್ಟ ದುಃಖದಿಂದ ತಾನು ನಾಚಿಕೊಂಡು ಪಶ್ಚಾತ್ತಾಪದಿಂದ ಕಣ್ಣೀರು ಸುರಿಸಲಾರಂಭಿಸಿದಳು. ಗದ್ಗದ ಕಂಠದಿಂದ ಹೇಳಿದಳು " ಪುತ್ರ ! ಚಿರಂಜೀವಿಯಾಗು " ಎಂದು

ಸುರುಚಿಯು ದ್ವೇಷಬುದ್ಧಿಯನ್ನು ಬಿಟ್ಟು ಪಶ್ಚಾತ್ತಾಪಪಟ್ಟುದು ಆಶ್ಚರ್ಯವೆಂದು ಕಾಣಬಹುದಾದರೂ ವಿಶ್ವಮೂರ್ತಿಯಾದ ಭಗವಂತನಿಂದ ಅನುಗ್ರಹಿಸಲ್ಪಟ್ಟು ಪುಣ್ಯಶರೀರಿಯಾದ ಧ್ರುವನನ್ನು ನೋಡುತ್ತಲೇ ಸರ್ವಾಂತರ್ಯಾಮಿಯಾದ ಪರಮಾತ್ಮನು ಆಕೆಯ ಹೃದಯದೊಳಹೊಕ್ಕು ದ್ವೇಷದ ಸ್ಥಾನದಲ್ಲಿ ಪ್ರೇಮವನ್ನು ಹುಟ್ಟಿಸುವುದು ಆಶ್ಚರ್ಯವಲ್ಲ.

ಬಾಲಕರಾದ ಧ್ರುವ ಉತ್ತಮರು ಪರಸ್ಪರಪ್ರೇಮದಿಂದ ರೋಮಾಂಚಿತಾಂತಃಕರಣರಾಗಿ ಗದ್ಗದಕಂಠರಾಗಿ ಆನಂದಾಶ್ರುಗಳನ್ನು ಸುರಿಸಲಾರಂಭಿಸಿದರು. ಧ್ರುವನ ತಾಯಿಯಾದ ಸುನೀತಿಗೆ ತನ್ನ ಪ್ರಾಣಪ್ರಿಯ ವೀರ ಪುತ್ರನನ್ನು ನೋಡಿದೊಡನೆ ಪ್ರೇಮವು ಉಕ್ಕಿ

ಬಂತು. ಅವಳ ದುಃಖವೆಲ್ಲವೂ ದೂರವಾಯಿತು. ವೀರಮಾತೆಯಾದ ಅವಳ ಸ್ತನಗಳೆರಡೂ ಪ್ರೇಮಾಶ್ರುಗಳಿಂದ ನೆನೆದುಬಿಟ್ಟವು. ಪುತ್ರ ಸ್ನೇಹವು ಉಕ್ಕೇರಲು ಅವಳ ಸ್ತನಗಳಿಂದ ಸ್ತನ್ಯವು ಧಾರೆಧಾರೆಯಾಗಿ (ಅಂದರೆ ಅಮೃತವು) ಹೊರಡಲಾರಂಭಿಸಿದವು. ಪುರವಾಸಿಗಳು ಈ ಮಾತೆಯನ್ನೂ ತೇಜಸ್ವಿಯಾದ ಪುತ್ರನನ್ನೂ ಪರಸ್ಪರ ಆಲಂಗಿಸು ತ್ತಿರುವ ಆನಂದಾಶ್ರುಗಳಿಂದ ತುಂಬಿದ ಅಂತಃಕರಣಗಳ ಸ್ಥಿತಿಯನ್ನು ನೋಡುತ್ತಿದ್ದಂತೆಯೇ ಸ್ತೋತ್ರಮಾಡಲಾರಂಭಿಸಿದರು.

“ ದೇವಿ, ನೀನು ಭಾಗ್ಯವಂತೆ. ಇದುವರೆವಿಗೂ ರಾಜನ ಅನಾದರ ದಿಂದ ಸಹಿಸಲಾರದ ದುಃಖವನ್ನು ಅನುಭವಿಸಿದ್ದೀಯೆ. ನಿನ್ನ ಈ ಪುಣ್ಯಾತ್ಮನಾದ ಪುತ್ರನು ನಿನ್ನ ದುಃಖವನ್ನು ದೂರಮಾಡಿ ನಿನಗೆ ಕೀರ್ತಿಯನ್ನು ತಂದ್ದಿದಾನೆ. ರಾಜನು ಪಶ್ಚಾತ್ತಾಪಪಟ್ಟಿದ್ದಾನೆ. ನಿನ್ನ ಸವತಿಯು ದ್ವೇಷ ಬುದ್ಧಿಯನ್ನು ಬಿಟ್ಟಿದ್ದಾಳೆ. ನಿನ್ನ ಪ್ರತಾಪಿ ಯಾದ ಕುಮಾರನು ಪರಮಾತ್ಮನ ಅನುಗ್ರಹವನ್ನು ಸಂಪಾದಿಸಿಕೊಂಡು ಜಗದ್ವಿಖ್ಯಾತನಾಗಿ ಮೆರೆಯುತ್ತಿದ್ದಾನೆ. ನೀನಿನ್ನು ಚಿಂತೆಯನ್ನು ಬಿಡು. ನಿನ್ನ ಮಗನು ಏಕಚ್ಛತ್ರಾಧಿಪತಿಯಾಗಿ ಭೂಮಂಡಲವನ್ನು ಆಳುವನು. ನೀನು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯದ ಫಲವೇ ಇದು. ನೀನು ಖಂಡಿತವಾಗಿಯೂ ಜನ್ಮಾಂತರದಲ್ಲಿ ಭಕ್ತ ಭಯ ಭಂಜನನಾದ ಜನಾರ್ದನನನ್ನು ಚೆನ್ನಾಗಿ ಪೂಜೆಮಾಡಿದ್ದೀಯೆ ? ಆ ಈಶ್ವರನ ಧ್ಯಾನಮಾಡುವ ಯೋಗಿಗಳು ದುರ್ಜಯವಾದ ಮೃತ್ಯುವನ್ನು ಜಯಿಸಬಲ್ಲರು. ನಿನ್ನ ಮಗನು ಎಂತೆಂತಹ ಯೋಗಿಗಳಿಗೂ ಅಸಾಧ್ಯ ವಾದ ಪದವಿಯನ್ನು ಪಡೆದಿದ್ದಾನೆ. ಇದಕ್ಕಿಂತಲೂ ಹೆಚ್ಚಿನ ಪುಣ್ಯವು ಜಗತ್ತಿನಲ್ಲಿದೆಯೆ ? ”

ತದನಂತರ ರಾಜನು ಪಟ್ಟದಾನೆಯ ಮೇಲೆ ತನ್ನ ಕುಮಾರರಿಬ್ಬ ರನ್ನು ಕುಳ್ಳಿರಿಸಿಕೊಂಡು ಪುರಪ್ರವೇಶಮಾಡಿದನು. ಮಾರ್ಗ ಮಧ್ಯ ದಲ್ಲಿ ರಾಜಬೀದಿಯ ಎಡಡು ಕಡೆಗಳಲ್ಲಿಯೂ ಸಹಸ್ರಾರು ಜನಗಳು ನಿಂತು ಜಯಜಯಕಾರ ಮಾಡುತ್ತಿದ್ದರು. ಪಟ್ಟಣ ಅತ್ಯಂತ ಸಂಭ್ರಮ

ದಿಂದ ಅಲಂಕರಿಸಲ್ಪಟ್ಟಿತು ಪ್ರತಿಯೊಂದು ಮನೆಯೂ ತಳಿರುತೋರಣ ಗಳಿಂದಲೂ, ವಿವಿಧ ವಿಚಿತ್ರ ಪುಷ್ಪಾಹಾರಗಳಿಂದಲೂ ಶೋಭಿಸುತ್ತಿದ್ದಿತು. ಮಕರಾಕೃತಿಗಳಾದ ದೊಡ್ಡದೊಡ್ಡ ಮಹಾದ್ವಾರಗಳ ಇಕ್ಕೆಲದಲ್ಲಿಯೂ ಫಲಪುಷ್ಪ ಮಂಜುಳಮಂಜರೀಯುಕ್ತ ಕದಲೀ ವೃಕ್ಷಗಳು ಶೋಭಿಸು ತ್ತಿದ್ದವು. ಅಲ್ಲಲ್ಲಿ ದೊಡ್ಡದೊಡ್ಡ ಚಪ್ಪರಗಳು ವಿವಿಧ ರೀತಿಗಳಲ್ಲಿ ಅಲಂಕರಿಸಲ್ಪಟ್ಟಿದ್ದವು. ಸುವರ್ಣವರ್ಣದ ಗೋಡೆಗಳೂ, ಗೋಪುರಗಳೂ, ಗೋಪುರಯುಕ್ತಗಳಾದ ಸೌಧಗಳೂ ಸ್ವರ್ಗಲೋಕದಿಂದಿಳಿದು ಬ-ದ ವಿಮಾನಗಳಂತೆ ಶೋಭಿಸುತ್ತಿದ್ದವು. ರಸ್ತೆಗಳು ಸುಂದರವಾಗಿ ಅಲಂಕರಿಸಲ್ಪಟ್ಟು ಸುಗಂಧಯುಕ್ತವಾಗಿ ಶೋಭಿಸುತ್ತಿದ್ದವು. ರಥವು ಎದುರಿಗೆ ಬರುತ್ತಿದ್ದಂತೆ ಅಕ್ಷತೆ ಅರಳು ಫಲಪುಷ್ಪಗಳನ್ನು ಆನಂದದಿಂದ ಪುರನಾರಿಯರು ರಥದ ಮೇಲೆ ಎಸೆಯುತ್ತಾ ಆಶೀರ್ವದಿಸುತಿದ್ದರು.

ಹೀಗೆ ಪುಷ್ಪವೃಷ್ಟಿಯು ಆಗುತ್ತಿರುವಾಗ ಧ್ರುವನು ಅಮೌಲ್ಯ ರತ್ನಖಚಿತವಾಗಿ ಅಲಂಕೃತವಾಗಿದ್ದ ರಾಜಭವನವನ್ನು ಪ್ರವೇಶಿಸಿ ದನು.

ಹೀಗೆ ಸರ್ವಪ್ರಕಾರದಿಂದಲೂ ಆಶೀರ್ವದಿಸಲ್ಪಡುತ್ತಾ ಮಾತಾ ಪಿತೃಗಳ ಲಾಲನೆ ಪಾಲನೆಗಳಿಂದ ಸ್ವರ್ಗವಾಸಿಯಾದ ದೇವೇಂದ್ರಪುತ್ರ ಜಯಂತನಂತೆ ಅರಮನೆಯಲ್ಲಿ ಭೋಗವಿಲಾಸ ಸಾಮಗ್ರಿಗಳ ಮಧ್ಯೆ ಸುಂದರ ಫಲಪುಷ್ಪಭರಿತ ಉಪವನಗಳ ಮಧ್ಯೆ ವಿಹರಿಸುತ್ತಿದ್ದನು. ತನ್ನ ತಪಸ್ಸಿನ ಅನುಭವವನ್ನು—ಹರಿದರ್ಶನದ ಅದ್ಭುತಪ್ರಭಾವವನ್ನು ವರ್ಣಿ ಸುತ್ತಿರುವ ಪುತ್ರನ ಅಪಾರಜ್ಞಾನದಿಂದ ಆಶ್ಚರ್ಯಹೊಂದಿ ರಾಜನು ಭಗವದ್ವಿಭೂತಿಯನ್ನು ಸ್ಮರಿಸಿಕೊಂಡು ಆನಂದಿಸಿದನು. ಧ್ರುವನಿಗೆ ಪ್ರಾಪ್ತ ವಯಸ್ಸು ಬಂದಮೇಲೆ ಪ್ರಜೆಗಳಇಚ್ಛೆಯಂತೆ ರಾಜ್ಯಾಭಿಷೇಕಮಾಡಿ ವಿಷಯ ಸುಖದಿಂದ ವೈರಾಗ್ಯವನ್ನು ಹೊಂದಿ ಉತ್ತಾನಪಾದರಾಯನು ತಪಸ್ಸಿಗಾಗಿ ಅರಣ್ಯಕ್ಕೆ ಹೊರಟನು.



# ಚತುರ್ವಿಂಶ ಕಿರಣ

ಮೈತ್ರೇಯರು ಹೇಳುತ್ತಾರೆ—

"ವತ್ಸ ವಿದುರ! ಧ್ರುವನು ರಾಜನಾದ ಕೆಲವು ಕಾಲಾನಂತರ ಶಿಶುಮಾರನೆಂಬ ಪ್ರಜಾಪತಿಯ ಮಗಳಾದ 'ಭ್ರಮಿ' ಎಂಬ ಕನ್ಯೆಯನ್ನು ವಿವಾಹವಾದನು. ಆಕೆಯ ಗರ್ಭದಲ್ಲಿ ಕಲ್ಪ ಮತ್ತು ವತ್ಸರ ಎಂಬ ಇಬ್ಬರು ಗಂಡುಮಕ್ಕಳಾದರು. ಧ್ರುವನ ಎರಡನೆಯ ಹೆಂಡತಿಯಾದ, ವಾಯುವಿನ ಮಗಳಾದ ಇಲಾ ಎಂಬುವಳ ಗರ್ಭದಲ್ಲಿ ಉತ್ಕಲ ಎಂಬ ಪುತ್ರನೂ ಸ್ತ್ರೀಯರಲ್ಲಿ ರತ್ನದಂತಿರುವ ಒಬ್ಬ ಮಗಳೂ ಹುಟ್ಟಿದರು. ಉತ್ತಮನಿಗೆ ಮದುವೆಯಾಗುವುದಕ್ಕೆ ಮುಂಚೆಯೇ ಅವನು ಬೇಟೆಗಾಗಿ ವನಕ್ಕೆ ಹೋಗಿರಲು ಬಲಶಾಲಿಯಾದ ಯಕ್ಷನು ಅವನನ್ನು ಹಿಮಾಚಲದ ತಪ್ಪಲಿನಲ್ಲಿ ಕೊಂದುಹಾಕಿದನು ಅವನ ತಾಯಿಯೂ ಸಹ ಅವನನ್ನು ಹುಡುಕಿಕೊಂಡು ಹೋಗಿ ದಾವಾನಲಕ್ಕೆ (ಕಾಡ್ಗಿಚ್ಚು) ಸಿಕ್ಕಿ ನತ್ತುಹೋದಳು. ಧ್ರುವನು ಯಕ್ಷನಿಂದ ತನ್ನ ತಮ್ಮನ ಮರಣವಾದುದನ್ನು ಕೇಳಿದನು. ಅವನ ಹೃದಯವು ಪ್ರತೀಕಾರ ತೆಗೆದುಕೊಳ್ಳಬೇಕೆಂಬ ಭಾವನೆಯಿಂದ ಕ್ರೋಧದಿಂದಲೂ, ಶೋಕದಿಂದಲೂ, ವ್ಯಾಕುಲವನ್ನು ಹೊಂದಿತು ಅವನು ಉತ್ತರದಿಕ್ಕಿಗೆ ಪ್ರಯಾಣಮಾಡಿ ಏಕಾಂಗಿಯಾಗಿ ರಥದಲ್ಲಿ ಕುಳಿತು ಕುಬೇರನ ಅಲಕಾಪುರಿಗೆ ಹೊರಟನು. ಹಿಮಾಚಲದ ತಪ್ಪಲಿನಲ್ಲಿ ರುದ್ರನ ಅನುಚರರಾದ ಯಕ್ಷರ ಪಟ್ಟಣವನ್ನು ಕಂಡನು. ಅಲ್ಲಿಗೆ ಹೋಗಿ ಅರಿಭಯಂಕರವಾದ ಶಂಖವನ್ನು ಊದಿದನು. ಅದರ ಶಬ್ದವು ಆಕಾಶದಲ್ಲಿ ದಶದಿಕ್ಕುಗಳನ್ನು ತುಂಬಿಬಿಟ್ಟಿತು. ಆ ಘೋರ ಶಬ್ದದಿಂದ ಯಕ್ಷಸ್ತ್ರೀಯರು ಭಯಪಟ್ಟು ಓಡಲಾರಂಭಿಸಿದರು ಮಹಾಪರಾಕ್ರಮಿಗಳಾದ ಯಕ್ಷರು ತಮ್ಮ ತಮ್ಮ ಶಸ್ತ್ರಗಳನ್ನು ತೆಗೆದು

ಕೊಂಡು ಪಟ್ಟಣದಿಂದ ಹೊರಗೆಬಂದರು. ಉಗ್ರಧನುಸ್ಸುಳ್ಳ ಧ್ರುವನು ಯಕ್ಷರುಗಳನ್ನು ನೋಡಿ ಒಂದೇ ಸಾರ್ತಿಗೆ ಪ್ರತಿಯೊಬ್ಬನಿಗೂ ಮೂರು ಮೂರು ಬಾಣಗಳಿಂದ ಹೊಡೆದನು ತಮ್ಮ ತಲೆಗಳಲ್ಲಿ ಚುಚ್ಚಿದ ಈ ಬಾಣಗಳಿಂದ ಯಕ್ಷರು ಧ್ರುವನ ಪರಾಕ್ರಮಕ್ಕೆ ಮೆಚ್ಚಿ ತಲೆದೂಗಿದರು. ಆದರೆ ಏಟುಬಿದ್ದ ಸರ್ಪದಂತೆ ಅವರು ಇವನ ವಿಜಯವನ್ನು ಸಹಿಸದೆ ಕ್ರೋಧಿತರಾದರು. ಅವರೆಲ್ಲರೂ ಸೇರಿ ಒಂದೇ ಸಾರ್ತಿಗೆ ಆರು ಆರು ಬಾಣಗಳನ್ನು ಬಿಡಲಾರಂಭಿಸಿದರು. ಆ ಹದಿಮೂರುಲಕ್ಷ (೧) ಅಯುತ ಯಕ್ಷರೆಲ್ಲಾ ಸೇರಿ ರಥ ಸಾರಥಿ ಸಹಿತನಾದ ಧ್ರುವನ ಮೇಲೆ ಪರಿಘೆ, ನಿಸ್ತ್ರಿಂಶ, ಪ್ರಾಸ, ಶೂಲ, ಪರಿಶ್ವಧ, ಶಕ್ತಿ, ಋಷ್ಟಿ ಮತ್ತು ಭುಶುಂಡಿಮುಂತಾದ ಶಸ್ತ್ರಗಳ ಮತ್ತು ವಿವಿಧ ಪಂಖಗಳುಳ್ಳ ಬಾಣಗಳ ಮಳೆಯನ್ನೇ ಕರೆದುಬಿಟ್ಟರು. ಜಲಧಾರೆಯು ನಿರಂತರವಾಗಿ ಸುರಿಯುತ್ತಿರುವಾಗ ಪರ್ವತವು ಮುಚ್ಚಲ್ಪಡುವಂತೆ ಈ ಅಸ್ತ್ರಶಸ್ತ್ರಗಳ ಸಮೂಹದಲ್ಲಿ ಧ್ರುವನು ಮುಚ್ಚಿಹೋದನು. ಅಂತರಿಕ್ಷದಲ್ಲಿ ಯುದ್ಧವನ್ನು ನೋಡುತ್ತಾ ನಿಂತಿದ್ದ ಸಿದ್ಧರು ಧ್ರುವನು ಕಾಣದಂತಾಗಲು "ಅಯ್ಯೋ ಮನುವಂಶದ ಸೂರ್ಯನು ಯಕ್ಷಸೇನಾರೂಪ ಸಾಗರದಲ್ಲಿ ಮುಳುಗಿ ಹೋದನಲ್ಲಾ" ಎಂದು ದುಃಖಿಸುತ್ತಾ ಹಾಹಾಕಾರ ಮಾಡಲಾರಂಭಿಸಿದರು. ಯಕ್ಷರು ತಮಗೆ ಜಯವಾಯಿತೆಂದು ಆನಂದದಿಂದ ಗರ್ಜಿಸಲಾರಂಭಿಸಿದರು ಇಷ್ಟರಲ್ಲಿ ಮಂಜಿನ ಸಮೂಹವನ್ನು ನಾಶಮಾಡಿ ಸೂರ್ಯನಾರಾಯಣನು ಉದಯಿಸುವಂತೆ ಆ ಶಸ್ತ್ರಸಮೂಹವನ್ನು ನಾಶಮಾಡುತ್ತಿರುವ ಧ್ರುವನು ತನ್ನ ರಥದೊಡನೆ ಕಾಣಿಸಿಕೊಂಡನು. ತನ್ನ ಭಯಂಕರವಾದ ಧನುಸ್ಸನ್ನು ಟಂಕಾರ ಮಾಡುತ್ತಾ ಧ್ರುವನು ಶತ್ರುಗಳನ್ನು ಛಿನ್ನರನ್ನಾಗಿ ಮಾಡುತ್ತಾ ವಾಯುವು ಮೇಘಗಳ ಗುಂಪನ್ನು ಕತ್ತರಿಸಿಹಾಕುವಂತೆ ಶತ್ರುಗಳ ಶಸ್ತ್ರಗಳನ್ನು ಕತ್ತರಿಸುತ್ತಿದ್ದನು ನಂತರ ಅವನು ಯಕ್ಷರಮೇಲೆ ಲೆಕ್ಕವಿಲ್ಲದಷ್ಟು ಬಾಣಗಳನ್ನು ಬಿಟ್ಟನು. ಧ್ರುವನಿಂದ ಬಿಡಲ್ಪಟ್ಟ ಬಾಣಗಳು ಯಕ್ಷರ

---

(೧) ಒಂದು ಅಯುತಕ್ಕೆ ಹತ್ತು ಸಾವಿರ. ಹದಿಮೂರು ಲಕ್ಷ ಅಯುತ ಯಕ್ಷರು.

ಕವಚಸಹಿತಗಳಾದ ಎದೆಗಳನ್ನು ವ ಜ್ರ ದ ಂ ತೆ ಚುಚ್ಚಲಾರಂಭಿಸಿದವು. ಯಕ್ಷರ ಕುಂಡಲಮಂಡಿತ ಮುಖಗಳೂ, ಮನೋಹರವಲಯ ಭೂಷಿತ ಭುಜಗಳೂ, ಸುವರ್ಣವರ್ಣಗಳಾದ ತಾಲಸದೃಶ ತೊಡೆಗಳೂ ಆ ರಣ ಭೂಮಿಯಲ್ಲಿ ಧ್ರುವನ ಭಲ್ಲ ಎಂಬ ಬಾಣಗಳಿಂದ ಕತ್ತರಿಸಿ ಹರಡಲ್ಪಟ್ಟವು. ವೀರರನ್ನು ಉತ್ಸಾಹಗೊಳಿಸುವ ಯುದ್ಧಭೂಮಿಯು ಕತ್ತರಿಸಲ್ಪಟ್ಟ ಅವರ ಹಾರ, ಕೇಯೂರ, ಮುಕುಟಾದಿಗಳಿಂದ ಶೋಭಾಯಮಾನವಾಗಿ ಕಾಣುತ್ತಿತ್ತು. ಅನೇಕಯಕ್ಷರು ಹೀಗೆ ಕ್ಷತ್ರಿಯ ಶ್ರೇಷ್ಠನಾದ ಧ್ರುವನ ಬಾಣಗಳಿಂದ ನಷ್ಟವಾದರು. ಅಲ್ಪಸ್ವಲ್ಪ ಉಳಿದವರ ಅಂಗಗಳೂ ಸಹಾ ಛಿನ್ನಭಿನ್ನವಾದವು ಸಿಂಹದ ಆಕ್ರಮಣದಿಂದ ಘಾಯಹೊಂದಿದ ಗಜಗಳಂತೆ ಕಳೆದುಳಿದ ಯಕ್ಷರು ಓಡಲಾರಂಭಿಸಿದರು ಶಸ್ತ್ರವನ್ನು ಕೈಯಲ್ಲಿ ಹಿಡಿದ ಒಬ್ಬ ಶತ್ರುವೂ ಎದುರಿಗೆ ನಿಲ್ಲದಿರಲು ಧ್ರುವನು ಕಾರ್ಯವಾದುದರಿಂದ ಅ ಲ ಕಾ ಪು ರಿ ಗೆ ಹೋಗಬೇಕೆಂದು ಯೋಚಿಸಿದನು. ಅದರೊಡನೆ ಇವರೆಲ್ಲರೂ ಮಾಯಾವಿಗಳೆಂದೂ ಮಾಯಾವಿಗಳ ಮಧ್ಯದಲ್ಲಿ ಸಿಕ್ಕಿಕೊಂಡರೆ ವಿವಿಧ ತೊಂದರೆಗಳಿಗೆ ಸಿಕ್ಕಿಕೊಳ್ಳಬೇಕಾಗುವುದೆಂದೂ ತಟ್ಟನೆ ಹೊಳೆಯಿತು. ಇಷ್ಟರಲ್ಲಿಯೇ ಸಾಗರದ ಘರ್ಜನೆಯಂತೆ ಭಯಂಕರ ಶಬ್ದವೊಂದು ಕೇಳಿಸಿತು ಅದರೊಡನೆಯೇ ಆಕಾಶವೆಲ್ಲಾ ದೊಡ್ಡ ಬಿರುಗಾಳಿಯಿಂದಲೂ, ಅಂಧಕಾರದಿಂದಲೂ ಮುಚ್ಚಿಹೋಯಿತು. ಒನಕೆಯಂತೆ ದೊಡ್ಡ ದೊಡ್ಡ ಹನಿಗಳುಳ್ಳ ಮುಸಲಧಾರೆಯು ಪ್ರಾರಂಭವಾಯಿತು. ಮೇಲಿನಿಂದ ರಕ್ತ, ಕೀವು, ಶ್ಲೇಷ್ಮ, ಮಲ, ಮೂತ್ರ ಮುಂತಾದ ಅಪವಿತ್ರವಸ್ತುಗಳು ಸುರಿಯಲಾರಂಭಿಸಿದವು. ರಕ್ತದ ಮಳೆಯು ಒಂದೇ ಸಮನೆ ಸುರಿಯುತ್ತಿತ್ತು. ಧ್ರುವನ ಎದುರಿಗೆ ರುಂಡವಿಲ್ಲದ ಹೆಣಗಳು ಹಾರಿ ಬರುತ್ತಿದ್ದವು. ನಂತರ, ಆಕಾಶದಲ್ಲಿ ದೊಡ್ಡ ಪರ್ವತವೊಂದು ಕಾಣಿಸಿಕೊಂಡಿತು. ಅದರಿಂದ ಧ್ರುವನ ಮೇಲೆ ಕಲ್ಲು, ಗದೆ, ಪರಿಘೆ, ನಿಸ್ತ್ರಿಂಶ, ಮುಸಲ ಮುಂತಾದ ಆಯುಧಗಳ ಮಳೆಯು ಬೀಳಲಾರಂಭಿಸಿತು. ವಜ್ರದಂತೆ ಭಯಂಕರವಾದ ಹೆಡೆಯನ್ನೆತ್ತಿಕೊಂಡು ಕ್ರೋಧದಿಂದೊಡಗೂಡಿದ ಕಣ್ಣುಗಳಿಂದ ಬೆಂಕಿಯನ್ನು ಕಾರುತ್ತಾ ಘೋರ

ಸರ್ಪವೊಂದು ಧ್ರುವನ ಎದುರಿಗೆ ಬಂದಂತೆ ಕಾಣಿಸಿತು. ಮತ್ತಗಜಗಳೂ, ಸಿಂಹಗಳೂ, ಹುಲಿಗಳೂ ಗುಂಪು ಗುಂಪಾಗಿ ಹಾರುತ್ತಾ ಧ್ರುವನ ಎದುರಿಗೆ ಓಡಿಬರುತ್ತಿದ್ದವು. ಪ್ರಳಯಕಾಲದಂತೆ ಭಯಂಕರವಾದ ಮಹಾಸಾಗರವು ಭೋರ್ಗರೆಯುತ್ತಾ ಭೂಮಿಯನ್ನು ನಾಲ್ಕು ಕಡೆಯಿಂದಲೂ ನುಂಗಿಕೊಂಡು ಬರುತ್ತಿತ್ತು. ಈ ರೀತಿ ಧ್ರುವನಿಗೆ ಭಯವನ್ನು ಹುಟ್ಟಿಸುವುದಕ್ಕಾಗಿ ಹೇಡಿಗಳನ್ನು ಹೆದರಿಸುವ ವಿವಿಧ ಮಾಯಾಜಾಲಗಳನ್ನು ಯಕ್ಷರು ತೋರಿಸಲಾರಂಭಿಸಿದರು. ಈ ಆಸುರೀಮಾಯೆಗಳನ್ನು ಯಕ್ಷರು ಪ್ರಯೋಗಿಸುತ್ತಿರುವುದನ್ನು ನೋಡಿ ಯುದ್ಧವನ್ನು ನೋಡಲು ಅಲ್ಲಿಗೆ ಬಂದಿದ್ದ ಮುನಿಗಳು "ಎಲೈ ಉತ್ತಾನಪಾದಪುತ್ರನೆ, ಶರಣಾಗತರಕ್ಷಕನಾದ, ಶಾರ್ಙಧನುರ್ಧಾರಿಯಾದ, ದುಃಖನಿವಾರಕನಾದ ಶ್ರೀಹರಿಯು ನಿನ್ನನ್ನು ರಕ್ಷಿಸಿ ಕಾಪಾಡಲಿ." ಎಂದು ಆಶೀರ್ವದಿಸುತ್ತಿದ್ದರು.

ಹೀಗೆ ಆಶೀರ್ವದಿಸುತ್ತಿರುವ ಮುನಿಗಳ ಮಾತುಗಳನ್ನು ಕೇಳಿ ಧ್ರುವನು ಶಾಂತಚಿತ್ತನಾಗಿ ಶುದ್ಧಾಚಮನಮಾಡಿ ಧನುಸ್ಸಿನಲ್ಲಿ ನಾರಾಯಣಾಸ್ತ್ರವನ್ನು ಅನುಸಂಧಾನಮಾಡಿದನು ನಾರಾಯಣಾಸ್ತ್ರವನ್ನು ಅನುಸಂಧಾನಮಾಡುತ್ತಲೇ ಯಕ್ಷರ ಮಾಯೆಯೆಲ್ಲಾ ನಷ್ಟವಾಗಿ ಹೋಯಿತು. ಧ್ರುವನು ಆ ನಾರಾಯಣಾಸ್ತ್ರವನ್ನು ಸುವರ್ಣಪುಂಖ ೧) ಮತ್ತು ಕಲಹಂಸದ ಪಂಖವುಳ್ಳ ಬಾಣದಲ್ಲಿ ಅನುಸಂಧಾನ ಮಾಡಿದಾಗ ಅದು ಕೇಕೆಹಾಕುತ್ತಾ ನವಿಲು ವನವನ್ನು ಪ್ರವೇಶಿಸುವಂತೆ ಶತ್ರುಸೇನೆಯನ್ನು ಪ್ರವೇಶಿಸಿತು. ಏಟುತಿಂದ ಸರ್ಪದಂತೆ ಯಕ್ಷಸಮೂಹವು ಶಸ್ತ್ರಗಳನ್ನು ಹಿಡಿದು ಧ್ರುವನಮೇಲೇರಿ ಬಂದಿತು. ಧ್ರುವನ ಬಾಣಗಳಿಂದ ಅವರ ಅಂಗಾಂಗಗಳೆಲ್ಲಾ ಕತ್ತರಿಸಿಹೋಗಿ ಮರಣಹೊಂದಿದರು.

ಹೀಗೆ ಯಕ್ಷರು ನಾಶಹೊಂದುತ್ತಿರಲು ಅವರ ಮೇಲೆ ದಯೆಯಿಂದ

---

೧) ಬಾಣದ ಮೇಲುಭಾಗವು ಪುಂಖ. ಹಿಂಭಾಗವು ಪಂಖ.

ಮಹಾನುಭಾವನಾದ ಸ್ವಾಯಂಭುವಮನುವು ಮಹರ್ಷಿಗಣದಿಂದೊಡಗೂಡಿ ಯುದ್ಧಭೂಮಿಗೆ ಬಂದನು. ತನ್ನ ಮೊಮ್ಮಗನಿಗೆ ಈ ರೀತಿ ಹೇಳಿದನು:-

"ಮಗು! ಕ್ರೋಧವು ಬಲು ದೊಡ್ಡ ಪಾಪಿಯು. ಆ ಕ್ರೋಧವೇ ನರಕದ ಬಾಗಿಲು. ಆದುದರಿಂದ ಇದನ್ನು ತ್ಯಾ ಗ ಮಾ ಡು. ಈ ಕ್ರೋಧಕ್ಕೆ ವಶನಾಗಿಯೇ ನೀನು ಅನೇಕ ನಿರಪರಾಧಿಗಳಾದ ಯಕ್ಷರನ್ನು ನಾಶಮಾಡಿರುವೆ. ಸಣ್ಣ ಅಪರಾಧಕ್ಕಾಗಿ ಸಮಸ್ತ ಯಕ್ಷಕುಲದ ನಾಶ ಕ್ಕಾಗಿ ಉದ್ಯುಕ್ತನಾಗಿದ್ದೀಯೆ. ಇದು ನಮ್ಮ ಕುಲಕ್ಕೆ ಭೂಷಣವಲ್ಲ. ಸಜ್ಜನರು ಈ ನಿನ್ನ ಕುಕರ್ಮವನ್ನು ನಿಂದಿಸುತ್ತಾರೆ ನಿನ್ನ ತಮ್ಮನು ನಿನಗೆ ಪ್ರಿಯನಾಗಿದ್ದುದು ನಿಜ. ಅವನ ವಧೆಯಿಂದ ಕುಪಿತನಾಗಿ ನೀನು ಈ ಕೆಟ್ಟ ಕೆಲಸಕ್ಕೆ ಕೈ ಹಾಕಿರುವೆಯಲ್ಲವೆ? ನಿನ್ನ ತಮ್ಮನನ್ನು ಕೊಂದ ವನು ಒಬ್ಬ ಯಕ್ಷನು. ನೀನು ಅದಕ್ಕೆ ಪ್ರತೀಕಾರವಾಗಿ ಅನೇಕ ಯಕ್ಷ ರನ್ನು ಕೊಂದಿರುವೆ. ದೇಹಾಭಿಮಾನಿಯಾಗಿ ಪಶುವಿನಂತೆ ಪ್ರಾಣಿ ಹಿಂಸೆಯಲ್ಲಿ ಉದ್ಯುಕ್ತನಾಗುವುದು ಭಗವದ್ಭಕ್ತರ, ಸಾಧುಗಳ ಮಾರ್ಗವಲ್ಲ. ವತ್ಸ! "ಎಲ್ಲ ಪ್ರಾಣಿಗಳೂ ನನ್ನಿಂದ ಭಿನ್ನವಲ್ಲ." ಎಂಬ ಸಮಬುದ್ಧಿ ಯಿಂದ ಸಮಸ್ತ ಪ್ರಾಣಿಗಳಲ್ಲಿಯೂ ನಿಂತಿರುವ ಶ್ರೀಹರಿಯನ್ನು ಒಲಿಸಿ ಕೊಂಡು ನೀನು ವಿಷ್ಣುವಿನ ಪರಮಪದವಾದ ಧ್ರು ವ ಲೋ ಕ ವ ನ್ನು ಸಂಪಾದಿಸಿರುವೆ. ನೀನು ಹರಿಯ ಹೃದಯದಲ್ಲಿ ಪ್ರಿಯನಾಗಿರುವೆ. ಹರಿ ಭಕ್ತರೂ ಸಹಾ ನಿನ್ನನ್ನು ಸಾಧುವೆಂದು ಹೊಗಳುತ್ತಾರೆ. ಹೀಗಿದ್ದ ನೀನು ಸಾಧುಗಳ ವ್ರತವಾದ ಸಮದೃಷ್ಟಿಯ ಪಾಠವನ್ನು ಕಲಿತಿದ್ದರೂ ಇಂತಹ ನಿಂದಿತಕರ್ಮದಲ್ಲಿ ಹೇಗೆ ಪ್ರವೃತ್ತನಾದೆ? ತನಗಿಂತ ಹೆಚ್ಚಿ ನವರಲ್ಲಿ ಸಹನಶೀಲತೆಯನ್ನೂ ತನಗಿಂತ ಕೀಳಾದವರಲ್ಲಿ ದಯೆಯನ್ನೂ ತನಗೆ ಸಮಾನರಾದವರಲ್ಲಿ ಮಿತ್ರತ್ವವನ್ನೂ ಮಾಡುತ್ತಾ ಸಮಸ್ತ ಪ್ರಾಣಿ ಗಳಲ್ಲಿಯೂ ಸಮದೃಷ್ಟಿಯನ್ನು ಇಡುವುದರಿಂದ ಸಮಸ್ತ ಪ್ರಾಣಿಗಳ ಆತ್ಮ ಸ್ವರೂಪನಾದ ಶ್ರೀಹರಿಯು ಪ್ರಸನ್ನನಾಗುತ್ತಾನೆ. (ಸಂತೋಷಪಡು ತ್ತಾನೆ.) ಸರ್ವವ್ಯಾಪಿಯಾದ ಭಗವಂತನು ಪ್ರಸನ್ನನಾದರೆ ಆ ಪುರುಷನು

ಮಾಯೆಯ ಗುಣಗಳಿಂದ–ಲಿಂಗಶರೀರದಿಂದ ಮುಕ್ತನಾಗಿ ಸುಖಸ್ವರೂಪ ನಾದ ಪರಬ್ರಹ್ಮನನ್ನು ಹೊಂದಿ ಕೃತಾರ್ಥನಾಗುತ್ತಾನೆ. ನೀನು ಆತ್ಮ ತತ್ತ್ವವನ್ನು ವಿಚಾರಮಾಡಿದ್ದರೆ ನಿನಗೆ ತಮ್ಮನಿದ್ದುದೂ ಅವನನ್ನಾರೋ ಕೊಂದರೆಂಬುದೂ ಮಾಯೆಯ ಭ್ರಾಂತಿಯೆಂದು ಗೊತ್ತಾಗುವುದು. ಪಾಂಚಭೌತಿಕ ತತ್ತ್ವಗಳಿಂದ ಸ್ತ್ರೀಪುರುಷರುಗಳ ಉತ್ಪತ್ತಿಯೂ ಅವ ರಿಬ್ಬರ ಸಂಯೋಗದಿಂದ ಇತರ ಹೆಣ್ಣು ಗಂಡುಗಳ ಉತ್ಪತ್ತಿಯೂ ಆಗು ವುವು. ಪರಮಾತ್ಮನ ಮಾಯೆಯಿಂದಲೇ ಸತ್ವರಜಸ್ತಮೋಗುಣಗಳ ಮಿಲನವು. ದೇಹೇಂದ್ರಿಯಾದಿಗಳ ಉತ್ಪತ್ತಿಯೂ ಅವುಗಳಿಂದಲೇ. ಅವುಗಳಿಂದಲೇ ಪಾಲನೆಯೂ ನಾಶವೂ ಆಗುವುವು. ನಿರ್ಗುಣನಾದ ಪರಮೇಶ್ವರನು ಇವುಗಳಿಗೆ ಕಾರಣಮಾತ್ರವು ಈ ಸೃಷ್ಟಿ ಮುಂತಾದ ಕಾರ್ಯಗಳಿಗೂ ಅವನಿಗೂ ಕೊಂಚವೂ ಸಂಬಂಧವಿಲ್ಲ ಕಾರ್ಯ (ಶರೀರ) ಕಾರಣ (ಜೀವ) ಸ್ವರೂಪವಾದ ವಿಶ್ವಚಕ್ರವು ಸೂಜಿಗಲ್ಲಿನ ಎದುರಿಗೆ ಕಬ್ಬಿಣವು ತಿರುಗುವಂತೆ ಆತನ ಶಕ್ತಿಯಿಂದ ತಿರುಗುತ್ತಿರುತ್ತದೆ. ಎಲೈ ಕುಮಾರನೆ ! ನೀನು ಸೃಷ್ಟಿ ಮುಂತಾದ ಕಾರ್ಯವನ್ನು ನೋಡಿ ಈಶ್ವರನು ಮಾಯೆಯ ಗುಣಗಳಿಂದ ಲೇಪಹೊಂದುವನೆಂದು ಭ್ರಮಿಸ ಬೇಡ. ಈಶ್ವರನು ತನ್ನ ಕಾಲಶಕ್ತಿಯಿಂದ ಈ ಸೃಷ್ಟಿಕಾರ್ಯಗಳಿಗೆ ಕಾರಣರೂಪವಾಗಿ ಸತ್ವಾದಿಗುಣಗಳನ್ನು ನಿಯಾಮಕ ಮಾಡಿ ತಾನು ಜಗತ್ತಿನ ಉತ್ಪತ್ತಿಕಾಲದಲ್ಲಿ ಸೃಷ್ಟಿಕರ್ತನೆಂದೂ, ಪಾಲನೆಯ ಕಾಲದಲ್ಲಿ ಪಾಲಕನೆಂದೂ, ಸಂಹಾರಕಾಲದಲ್ಲಿ ಲಯಕರ್ತನೆಂದೂ ಹೇಳಿಸಿಕೊಂಡರೂ ಅದು ಕಲ್ಪನೆ ಮಾತ್ರ. ಆತನು ಅಕರ್ತನು. ಆತನ ಶಕ್ತಿಯಾದ "ಕಾಲ"ನ ಚರ್ಯೆಗಳು ಅಚಿಂತ್ಯ, ಅತರ್ಕ್ಯ. ಈಶ್ವರನೇ ತಂದೆ ತಾಯಿಗಳ ಮೂಲಕ ಮಕ್ಕಳನ್ನು ಹುಟ್ಟಿಸುತ್ತಾನೆ. ೧) ಪ್ರಾಣಿಗಳಿಂದ ಪ್ರಾಣಿಗಳಿಗೆ ಮರಣವನ್ನು ಮಾಡಿಸುತ್ತಾನೆ ಈಶ್ವರನು ಸಮದರ್ಶಿಯು. ಆತನೇ ಸಮಸ್ತಕ್ಕೆ ನಿಯಂತೃವು, ಅನಂತನು, ಅನಾದಿಯು. ಆತನ

೧) ಜೀವೋ ಜೀವಸ್ಯ ಜೀವನಂ
ಒಂದು ಪ್ರಾಣಿಯನ್ನು ತಿಂದು ಮತ್ತೊಂದು ಬದುಕಬೇಕು.

ಕಾಲರೂಪವಾದ ಶಕ್ತಿಯು ಯಾವಾಗಲೂ ಕ್ಷೀಣವಾಗಲಾರದು. ಈಶ್ವರನಿಗೆ ತನ್ನದೆಂಬುದೂ, ಪರರದೆಂಬುದೂ ಇಲ್ಲ ಶತ್ರುವೂ ಇಲ್ಲ, ಮಿತ್ರನೂ ಇಲ್ಲ. ಮೃತ್ಯುರೂಪನೂ ಅವನೆ ಸಮದರ್ಶಿಯೂ ಅವನೇ. ಸಮಸ್ತ ಜೀವರೂ ತಮ್ಮ ತಮ್ಮ ಕರ್ಮಗಳಿಗೆ ತಕ್ಕಂತೆ ಅನುಕೂಲ ಫಲಗಳನ್ನೂ ಪ್ರತಿಕೂಲಫಲಗಳನ್ನೂ ಹೊಂದುತ್ತಾರೆ ಧೂಳಿಯು ಹೇಗೆ ಗಾಳಿಯನ್ನು ಅನುಸರಿಸಿ, ಅದು ಎಲ್ಲಿಗೆ ಹೊತ್ತುಕೊಂಡುಹೋದರೆ ಅಲ್ಲಿಗೆ ಹೋಗುವುದೋ ಹಾಗೆಯೇ ಸಮಸ್ತರೂ ಈಶ್ವರನ ಕಾಲರೂಪ ವಾದ ಗತಿಯನ್ನು ಅನುಸರಿಸುತ್ತಾರೆ ಅಂಧಕಾರದಲ್ಲಿಯಾಗಲೀ ಬೆಳಕಿನಲ್ಲಾಗಲೀ, ಬೆಂಕಿಯಲ್ಲಾಗಲೀ, ನೀರಿನಲ್ಲಾಗಲೀ ಧೂಳಿಯ ಕಣವು ಬಿದ್ದರೆ ವಾಯುವಿಗೆ ಹೇಗೆ ವಿಷಮತೆಯು (ಹೆಚ್ಚು ಕಡಿಮೆ) ಇರಲಾರದೋ ಹಾಗೆಯೇ ಜೀವರ ಸುಖದುಃಖಗಳು ಅವರವರ ಕರ್ಮಫಲ ವನ್ನು ಅನುಸರಿಸುವುದರಿಂದ ಈಶ್ವರನಿಗಾವ ಹೆಚ್ಚು ಕಡಿಮೆಯೂ ತೋರದು. ಈಶ್ವರನು ವೃದ್ಧಿ ಕ್ಷಯರಹಿತನು. ಸ್ವಸ್ಥನು. ಅಕಾಲ ಮೃತ್ಯುವಿನಿಂದ ರಕ್ಷಿಸುವುದಾಗಲೀ, ಕಾಲಮೃತ್ಯುವು ಬರುವುದಾಗಲೀ ಅವರವರ ಕರ್ಮಾನುಗುಣವಾಗಿ ಜೀವರು ಹೊಂದುತ್ತಾರೆ. ಈಶ್ವರನ ವಿಷಯದಲ್ಲಿನ ವಿವಾದವು ನಾಮಮಾತ್ರ. ಕೆಲವರು ಅವನನ್ನು ಕರ್ಮ ವೆನ್ನುವರು. ಕೆಲವರು "ಸ್ವಭಾವ" ವೆನ್ನುವರು. ಮತ್ತೆ ಕೆಲವರು ಕಾಲನೆನ್ನುವರು, ದೈವವೆನ್ನುವರು. ಕೆಲವರು ಮನುಷ್ಯನ ಇಚ್ಛಾ ಸ್ವರೂಪನು ಎನ್ನುವರು. ಆದರೆ ಈಶ್ವರನು ಅವ್ಯಕ್ತನು. ಆದುದರಿಂದ ಅಪ್ರಮೇಯನು. ಪ್ರಮಾಣಾದಿಗಳಿಂದಾತನನ್ನು ಗುರ್ತಿಸಲಾಗುವುದಿಲ್ಲ. ಆತನಲ್ಲಿ ಮಹತ್ತತ್ವ ಮುಂತಾದ ಅನೇಕ ಶಕ್ತಿಗಳು ಬೆಳಗುತ್ತವೆ. ಆತನ ಶಕ್ತಿಯಾದ ಕಾಲನ ಚೇಷ್ಟೆಯನ್ನಾರೂ ಊಹಿಸಲೂ ಶಕ್ತರಲ್ಲ ರಾದುದರಿಂದ ಈಶ್ವರನ ಸ್ವರೂಪವನ್ನು ವರ್ಣಿಸುವುದು ಸಾಧ್ಯವೇ ಇಲ್ಲ. ಈಶ್ವರನಂತೆ ಮತ್ತೊಬ್ಬರಿಲ್ಲದ್ದರಿಂದ ಈಶ್ವರನನ್ನು ಈಶ್ವರನೇ ಎಂದು ಹೇಳಬೇಕಾಗುತ್ತೆ

ಪುತ್ರ, ಕುಬೇರಕಿಂಕರನಾದ ಯಕ್ಷನು ನಿನ್ನ ತಮ್ಮನನ್ನು ಕೊಂದವನಲ್ಲ. ಪ್ರಾಣಿಗಳ ಉತ್ಪತ್ತಿಗೂ ನಾಶಕ್ಕೂ ಅವರವರ ಕರ್ಮಾನುಸಾರ ಫಲದಾತನು ಈಶ್ವರನೇ. ಆದುದರಿಂದ ಆತನಲ್ಲದೆ ಮತ್ತಾರೂ ಯಾರನ್ನೂ ಹುಟ್ಟಿಸಲಾರರು ; ಕೊಲ್ಲಲಾರರು ಆ ಈಶ್ವರನೇ ಪ್ರಪಂಚವನ್ನು ಸೃಷ್ಟಿಮಾಡುವವನು, ನಾಶಮಾಡುವವನು. ಆದರೆ ಆತನಲ್ಲಿ ಅಹಂಕಾರವಿಲ್ಲದ್ದರಿಂದ ಆ ಗುಣಕರ್ಮಗಳಿಂದ ಲೇಪಹೊಂದುವುದಿಲ್ಲ. ಆತನು ತನ್ನ ಶಕ್ತಿಯಾದ ಮಾಯೆಯ ಆಧಾರದಿಂದ ಸೃಷ್ಟಿಸ್ಥಿತಿ ಲಯಗಳನ್ನು ಮಾಡುತ್ತಾನೆ ಆತನೇ ಸಮಸ್ತ ಪ್ರಾಣಿಗಳ ಪ್ರಕಾಶಕನು, ಪ್ರಭುವು ಮತ್ತೂ ಆತ್ಮನು. ಆತನೇ ಈ ಜಗತ್ತಿಗೆ ಅತ್ಯಂತ ಹೆಚ್ಚಿನ ಆಶ್ರಯಸ್ಥಾನವು. ಭಕ್ತರಿಗೆ ಅಮೃತ ಸ್ವರೂಪನಾಗಿಯೂ ಅಭಕ್ತರಿಗೆ ಮೃತ್ಯುರೂಪನಾಗಿಯೂ ತೋರುತ್ತಾನೆ. ಮೂಗುದಾರಹಾಕಿದ ಪಶುವು ಹೇಗೆ ಪರಾಧೀನವಾಗಿ ಹೇಳಿದಂತೆ ಕೇಳುವುದೋ ಹಾಗೆಯೇ ಬ್ರಹ್ಮಾದಿಗಳೂ ಕೂಡ ಆತನ ನಿಯಮಕ್ಕೆ ಬದ್ಧರಾಗಿ ಆಜ್ಞಾಪಾಲನೆಮಾಡುತ್ತಾರೆ. ಆ ಈಶ್ವರನನ್ನೇ ಸರ್ವವ್ಯಾಪಿಯೆಂದು ತಿಳಿದು ಅನನ್ಯಭಾವದಿಂದ ಭಜಿಸು. ನೀನು ಐದು ವರ್ಷದ ಬಾಲಕನಾಗಿದ್ದಾಗ, ಸವತಿತಾಯಿಯ ವಚನರೂಪಬಾಣಗಳಿಂದ ವ್ಯಥಿತನಾಗಿ ಕಾಡಿಗೆ ಹೋದೆ ತಪಸ್ಸಿನಿಂದ ದೇವನನ್ನು ಆರಾಧಿಸಿ ಲೋಕತ್ರಯಗಳನ್ನೂ ಮೀರಿದ ಧ್ರುವಪದವನ್ನು ಪಡೆದೆ. ಆ ನಿರ್ಗುಣನಾದ, ಅವಿನಾಶಿಯಾದ, ಅದ್ವಿತೀಯನಾದ ಆ ಪರಮಾತ್ಮನನ್ನು ಭೇದಭಾವರಹಿತನಾಗಿ, ಆತ್ಮದರ್ಶಿಯಾಗಿ ನಿನ್ನೊಳಗೆ ನೋಡು ಆತನು ಸಮಸ್ತರ ಹೃದಯದಲ್ಲಿಯೂ ಇರುವನು. ಸದಾ ವಿಮುಕ್ತಸ್ವರೂಪನು. ಆತನಲ್ಲಿ ಭೇದಮಯವಾದ ಈ ಜಗತ್ತು ತೋರುತ್ತಿರುವುದು. ಎಲ್ಲರ ಅಂತರಾತ್ಮನಾಗಿ, ಐಶ್ವರ್ಯಯುಕ್ತನಾಗಿ, ಅನಂತನಾಗಿ, ಸರ್ವಶಕ್ತನಾಗಿ, ಆನಂದಮಯನಾಗಿ ಇರುವ ಪರಮೇಶ್ವರನಲ್ಲಿ ದೃಢಭಕ್ತಿಯನ್ನಿಟ್ಟರೆ “ನಾನು ನನ್ನದು” ಎಂಬ ಬಲವತ್ತರವಾದ ಅಜ್ಞಾನದ ಗಂಟನ್ನು ಕತ್ತರಿಸಿಹಾಕಲು ಶಕ್ತನಾಗುವೆ.

ಸಂಪೂರ್ಣ ಮಂಗಳಕ್ಕೆ-ಸುಖಕ್ಕೆ ವಿಘ್ನಕಾರಿಯಾದ ಈ ಕ್ರೋಧವನ್ನು ಔಷಧಿಯಿಂದ ವ್ರಣರೋಗವನ್ನು ನಾಶಪಡಿಸುವಂತೆ (ಕ್ರೋಧವನ್ನು) ಶಾಸ್ತ್ರದಿಂದ ಸಂಪಾದಿಸಿದ ಆತ್ಮಜ್ಞಾನದಿಂದ ಶಾಂತ ಗೊಳಿಸು. ಕ್ರೋಧಕ್ಕೆ ಅಧೀನನಾಗಿರುವನನ್ನು ಕಂಡರೆ ಜನಗಳು ಹೆದರುತ್ತಾರೆ. ಆದುದರಿಂದ ತನ್ನ ಕಲ್ಯಾಣವನ್ನು ಕೋರುವವನು ಜ್ಞಾನವನ್ನು ಪಡೆದು ಕ್ರೋಧಕ್ಕೆ ಅಧೀನನಾಗಬಾರದು. ಕುಬೇರನು ಶಿವನಿಗೆ ಅತ್ಯಂತ ಪ್ರಿಯನಾಗಿ ಸಹಚರನಂತೆ-ಮಿತ್ರನಂತೆ ಇದ್ದಾನೆ. ನಿನ್ನ ತಮ್ಮನನ್ನು ಒಬ್ಬ ಯಕ್ಷನು ಕೊಂದನೆಂಬ ಕಾರಣದಿಂದ ಕುಬೇರನ ಅನುಚರರಾದ ಯಕ್ಷರನ್ನೆಲ್ಲಾ ಕೊಂದಿದ್ದೀಯೆ ಆದುದರಿಂದ ಕುಬೇರನನ್ನು ಒಂದು ವಿಧದಲ್ಲಿ ನಿರಾಧಾರ ( ತಿರಸ್ಕಾರ ) ಮಾಡಿದ್ದೀಯೆ. ದೊಡ್ಡವರಿಗೆ ಸಿಟ್ಟು ಬರುವಂತೆ ಮಾಡುವುದು ಸರಿಯಲ್ಲ. ಕುಬೇರನ ಕ್ರೋಧದಿಂದ ನಮ್ಮ ವಂಶಕ್ಕೆ ಕೇಡುಕಾದೀತು ಆದುದರಿಂದ ಜಾಗ್ರತೆಯಾಗಿ ಹೋಗಿ ಆ ಮಹಾನುಭಾವನಾದ ಕುಬೇರನನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿ, ನಿನ್ನ ಅಪರಾಧಕ್ಕಾಗಿ ಕ್ಷಮೆಯನ್ನು ಯಾಚಿಸು. ”

ಸ್ವಾಯಂಭುವ ಮನುವು ಹೀಗೆ ತನ್ನ ಮೊಮ್ಮಗನಾದ ಧ್ರುವನಿಗೆ ಉಪದೇಶಮಾಡಿ ಅವನಿಂದ ನಮಸ್ಕಾರವನ್ನು ಹೊಂದಿ ಮಹರ್ಷಿ ಗಳೊಡನೆ ತನ್ನ ಲೋಕಕ್ಕೆ ಹೊರಟುಹೋದನು.

ಮನುವಿನ ಮಾತಿನಂತೆ ಧ್ರುವನು ಕೋಪವನ್ನು ತ್ಯಜಿಸಿ ಯಕ್ಷರ ವಧೆಯನ್ನು ನಿಲ್ಲಿಸಿದನೆಂಬುದನ್ನು ಕೇಳುತ್ತಲೇ ಚಾರಣ ಯಕ್ಷ ಕಿನ್ನರರಿಂದ ಸ್ತುತಿಸಲ್ಪಡುತ್ತಿರುವ ಕುಬೇರನು ಯುದ್ಧಭೂಮಿಗೆ ಬಂದನು. ಎರಡು ಕೈಗಳನ್ನು ಕಟ್ಟಿಕೊಂಡು ವಿನೀತಭಾವದಿಂದ ನಿಂತಿರುವ ಧ್ರುವನನ್ನು ನೋಡಿದನು. ಈ ರೀತಿ ಹೇಳಿದನು—

“ಎಲೈ ನಿಷ್ಪಾಪ! ಧ್ರುವಕುಮಾರ! ನೀನು ಬಿಡಲಾಗದ ವೈರವನ್ನು ನಿನ್ನ ಪಿತಾಮಹನಾದ ಸ್ವಾಯಂಭುವ ಮನುವಿನ ಉಪದೇಶ ದಿಂದ ಬಿಟ್ಟಿರುವೆ ಎಂಬುದನ್ನು ಕೇಳಿ ಬಹಳ ಸಂತೋಷವನ್ನು ಹೊಂದಿ ದ್ದೇನೆ. ಯೋಚಿಸು! ಯಕ್ಷನು ನಿನ್ನ ತಮ್ಮನನ್ನೂ ಕೊಲ್ಲಲಿಲ್ಲ.

ನೀನು ನನ್ನ ಯಕ್ಷಸಮೂಹವನ್ನೂ ಕೊಲ್ಲಲಿಲ್ಲ. ನೀವುಗಳೆಲ್ಲಾ ನಿಮಿತ್ತಮಾತ್ರ. ಕಾಲಪುರುಷನೇ ಜಗತ್ತಿನ ಜೀವರುಗಳ ಜನ್ಮ ಮರಣಗಳಿಗೆ ಕಾರಣನಾಗಿದ್ದಾನೆ. "ನಾನು, ನೀನು" ಎಂಬ ಭೇದ ಬುದ್ಧಿಯೆಲ್ಲಾ ಅಜ್ಞಾನದ ಫಲವು ಈ ಬುದ್ಧಿಯಿಂದಲೇ ದೇಹಾಭಿಮಾನವು ಹುಟ್ಟುವುದು. ಈ ಬುದ್ಧಿಯು ಸ್ವಪ್ನದಲ್ಲಿ ನೋಡಿದ ಪದಾರ್ಥದಂತೆ ಮಿಥ್ಯೆಯಾದುದು, ಸುಳ್ಳಾದುದು. ಇದರಿಂದಲೇ ಸಂಸಾರಬಂಧನವು. ವಿವಿಧವಾದ ಕ್ಲೇಶಗಳಿಗೆ ಇದೇ ಕಾರಣ. ನೀನು ಈಗ ನಿನ್ನ ಪುರಕ್ಕೆ ಹಿಂದಿರುಗು. ನಿನಗೆ ಕಲ್ಯಾಣವಾಗಲಿ! ಜನ್ಮ ಮರಣಗಳಿಂದ ಮುಕ್ತನಾಗುವುದಕ್ಕಾಗಿ ಅವುಗಳಿಂದ ಬಿಡಿಸಬಲ್ಲ ಶ್ರೀಹರಿಯನ್ನು ಭಜಿಸು. ಸಮಸ್ತ ಪ್ರಾಣಿಗಳೊಳಗೂ ಅವನನ್ನು ಅನುಸಂಧಾನಮಾಡು. ಎಲ್ಲ ಪ್ರಾಣಿಗಳೂ ಆತನ ವಿವಿಧ ರೂಪಗಳು. ಆತನು ಗುಣಮಯಿಯಾದ ಮಾಯೆಯಿಂದ ಕೂಡಿಯೂ ಇರಬಲ್ಲನು. ಮಾಯೆಯಿಂದ ದೂರವಾಗಿಯೂ ಇರಬಲ್ಲನು. ಅವನ ಚರಣಕಮಲಗಳೇ ಭಜನೆಗೆ ಯೋಗ್ಯವಾದುವು. ಧ್ರುವ! ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಕೇಳು. ನೀನು ಸತ್ಪಾತ್ರನಾಗಿರುವೆ. ನೀನು ಮಹಾ ಭಗವದ್ಭಕ್ತನೆಂದೂ ಕೇಳಿದ್ದೇವೆ."

ಕುಬೇರನು ಈರೀತಿ ಹೇಳುತ್ತಲೇ ಮಹಾ ಬುದ್ಧಿಶಾಲಿಯಾದ ಧ್ರುವನು ಶ್ರೀಹರಿಯಲ್ಲಿ ಅಚಲವಾದ ದೃಢಭಕ್ತಿಯನ್ನು ಯಾಚಿಸಿದನು. ಕುಬೇರನು ಅದನ್ನು ಸಂತೋಷದಿಂದ ಅನುಗ್ರಹಮಾಡಿ ಅಂತರ್ಧಾನನಾದನು. ಧ್ರುವನು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

ದ್ರವ್ಯ, (ಯಜ್ಞಸಾಮಗ್ರಿ) ಕ್ರಿಯಾ, (ಯಜ್ಞಕರ್ಮ) ದೇವತಾ, ಈ ಮೂರೂ ಈಶ್ವರಾನುಗ್ರಹದಿಂದಲೇ ಪ್ರಾಪ್ತವಾಗುವುವು. ಆ ಈಶ್ವರನೇ ಸಮಸ್ತ ಯಜ್ಞಗಳ ಕರ್ಮಫಲಗಳನ್ನು ಯಜಮಾನನ ಇಷ್ಟಕ್ಕೆ ತಕ್ಕಂತೆ ಕೊಡುವವನು. ಧ್ರುವನು ಬಹುದಕ್ಷಿಣೆಗಳಿಂದೊಡಗೂಡಿದ ಅನೇಕ ಯಜ್ಞಗಳನ್ನು ಮಾಡಿದನು. ಸಮಸ್ತ ಉಪಾಧಿಗಳಿಂದಲೂ ಬಿಡಲ್ಪಟ್ಟವನಾಗಿ ಸರ್ವವ್ಯಾಪಕನಾದ

ಅಚ್ಯುತನಲ್ಲಿ ದೃಢಭಕ್ತಿಯನ್ನು ಮಾಡುತ್ತಾ ಎಲ್ಲ ಪ್ರಾಣಿಗಳಲ್ಲೂ ಹಾಗೆಯೇ ತನ್ನೊಳಗೂ ಶ್ರೀಹರಿಯನ್ನ ನೋಡಲಾರಂಭಿಸಿದನು.

ಹೀಗೆ ಉತ್ತಮ ಸ್ವಭಾವವುಳ್ಳ, ಬ್ರಾಹ್ಮಣಭಕ್ತನಾದ, ದೀನರಲ್ಲಿ ದಯೆಯುಳ್ಳ, ಧರ್ಮದ ಮರ್ಯಾದೆಯನ್ನು ರಕ್ಷಿಸುತ್ತಾ ಪ್ರಜೆಗಳನ್ನು ಪ್ರತಿಪಾಲನೆಮಾಡುತ್ತಿರುವ, ಧ್ರುವನನ್ನು ತಂದೆಯಂತೆ ಪ್ರಜೆಗಳೆಲ್ಲರೂ ಭಾವಿಸುತ್ತಾ ಗೌರವಿಸುತ್ತಿದ್ದರು. ಈ ರೀತಿ ಭೋಗದಿಂದ ಪುಣ್ಯವನ್ನೂ, ಯಜ್ಞಾದಿಗಳಿಂದ ಪಾಪವನ್ನೂ ಕ್ಷಯಿಸುವಂತೆ ಮಾಡುತ್ತಾ ಆತನು ಮೃವತ್ತಾರು ಸಹಸ್ರ ವರ್ಷಗಳು ರಾಜ್ಯಭಾರ ಮಾಡಿದನು ಆ ಮಹಾತ್ಮನು ತನ್ನ ಇಂದ್ರಿಯಗಳನ್ನು ನಿಗ್ರಹಮಾಡಿ ಧರ್ಮಾರ್ಥಕಾಮರೂಪ ಪುರುಷಾರ್ಥಗಳನ್ನು ಸಂಪಾದಿಸಿ ಅನೇಕ ವರ್ಷಗಳು ಕಾಲಯಾಪನೆಮಾಡಿ ನಂತರ ತನ್ನ ಮಗನಿಗೆ ರಾಜ್ಯಾಧಿಕಾರವನ್ನು ವಹಿಸಿಕೊಟ್ಟನು. ಅವನಿಗಾಗ ಪೂರ್ಣಜ್ಞಾನವಾಗಿತ್ತು. ಸಂಸಾರದಲ್ಲಿ ವೈರಾಗ್ಯವನ್ನು ಹೊಂದಿದ್ದನು. ಈ ಜಗತ್ತನ್ನು ಸ್ವಪ್ನದಂತೆ ಮಾಯಾಮಯವನ್ನಾಗಿ ಗಂಧರ್ವನಗರದಂತೆ ಮಿಥ್ಯೆಯಾಗಿ ತಿಳಿದು ಶರೀರ, ಸ್ತ್ರೀ, ಪುತ್ರ, ಮಿತ್ರ, ಸೇನಾ, ಅತುಲೈಶ್ವರ್ಯ, ಅಂತಃಪುರ, ರಮಣೀಯ ವಿಹಾರಭೂಮಿ, ಸಾಗರಾವೃತವಾದ ಭೂಮಂಡಲ, ಇವುಗಳೆಲ್ಲಾ ಕಾಲನಿಂದ ನಾಶಹೊಂದುವುವೆಂದು ಭಾವಿಸಿ ತ್ಯಾಗಮಾಡಿ ಏಕಾಂಗಿಯಾಗಿ ಬದರಿಕಾಶ್ರಮಕ್ಕೆ ಪ್ರಯಾಣಮಾಡಿದನು. ಅಲ್ಲಿ ಅಷ್ಟಾಂಗಯೋಗವನ್ನು ಅಭ್ಯಾಸಮಾಡಿದನು ಮುಂಚೆಸ್ನಾನವನ್ನುಮಾಡಿ ಶರೀರವನ್ನು ಜಲದಿಂದ ಬಾಹ್ಯಶುದ್ಧಿಮಾಡಿದನು. ಕಾಮಕ್ರೋಧಾದಿಗಳನ್ನೂ, ವಿಷಯವಾಸನೆಯನ್ನೂ ತ್ಯಾಗಮಾಡಿ ಅಂತಃಕರಣವನ್ನು ಶುದ್ಧಿಮಾಡಿದನು. ಆಸನವನ್ನು ಹಾಕಿಕೊಂಡು ಪ್ರಾಣಾಯಾಮದಿಂದ ವಾಯುವನ್ನು ಜಯಿಸಿದನು. ಮನಸ್ಸನ್ನು ಏಕಾಗ್ರವಾಗಿ ಮಾಡಿ ಇಂದ್ರಿಯುಗಳನ್ನು ಅವುಗಳ ವಿಷಯಗಳಿಂದ ಹಿಂದಿರುಗಿಸಿದನು. ಮನಸ್ಸನ್ನು ವಿಶ್ವಮಯವಿರಾಡ್ರೂಪದಲ್ಲಿ ನಿಲ್ಲಿಸಿ ಧ್ಯಾನಮಾಡುತ್ತಾ ಇರುತ್ತಿರಲು, ಧ್ಯಾನಮಾಡುವವನು ನಾನು, ಧ್ಯಾನಕ್ಕೆ ಅಧಿದೇವನಾದವನು ಭಗನವಂತನು, ಎಂಬ ಭೇದಭಾವವು ಹೋಗ

ಲಾರಂಭಿಸಿತು.

ಭೇದಭಾವವು ನಾಶವಾಗುತ್ತಿದ್ದಂತೆ ತನ್ಮಯನಾಗಿ ಸಮಾಧಿಯಲ್ಲಿ ನಿಂತು "ನಾನೇ ಬ್ರಹ್ಮ" ಎಂಬ ಭಾವವನ್ನು ಅಳವಡಿಸಿದನು. ನಿರಂತರದಲ್ಲಿಯೂ ಭಗವಂತನ ಧ್ಯಾನವು ನಡೆಯುತ್ತಿದ್ದುದರಿಂದ ಬ್ರಹ್ಮಾನಂದವು ಪ್ರಾಪ್ತವಾಯಿತು. ಬಾರಿಬಾರಿಗೂ ಆನಂದಾಶ್ರುಗಳು ಕಣ್ಣುಗಳಿಂದ ಹೊರಸೂಸುತ್ತಿದ್ದವು. ದೇಹವೆಲ್ಲಾ ರೋಮಾಂಚವಾಗುತ್ತಿತ್ತು. ಭಕ್ತಿಭಾವದಿಂದ—ಆನಂದರಸದಿಂದ ಹೃದಯವು ತುಂಬುತ್ತಿತ್ತು. ಅವನ ದೇಹಾಭಿಮಾನವು ನಷ್ಟವಾಯಿತು. 'ನಾನು ರಾಜನಾದ ಧ್ರುವನು ಎಂಬುದು' ಮರೆತುಹೋಯಿತು.

ಈ ಸ್ಥಿತಿಯು ಬಂದನಂತರ ಆಕಾಶದಲ್ಲಿ ಚಂದ್ರಮಂಡಲವೇ ಕೆಳಕ್ಕಿಳಿದು ಬಂದಂತೆ ಪ್ರಕಾಶಮಾನವಾದ ವಿಮಾನವೊಂದು ಇಳಿದು ಬಂದಿತು. ಕತ್ತೆತ್ತಿ ನೋಡಲು ಮಹಾವಿಷ್ಣುವಿನಂತೆಯೇ ಚತುರ್ಭುಜ, ಕುಂಡಲ, ಕಿರೀಟ, ಪೀತಾಂಬರಧಾರಿಗಳಾದ ಮೇಘಶ್ಯಾಮಲ ಮೂರ್ತಿಗಳಿಬ್ಬರು ದೇವಯೋಗ್ಯಗಳಾದ ಗದೆಗಳನ್ನು ಹಿಡಿದು ನಿಂತಿದ್ದರು. ಅವರನ್ನು ವಿಷ್ಣುವಿನ ಅನುಚರರೆಂದು ತಿಳಿದು ಧ್ರುವನು ಕೈಗಳನ್ನು ಜೋಡಿಸಿ ನಮಸ್ಕಾರಮಾಡಿದನು.

ಅವರು ಸುನಂದ ನಂದರೆಂಬ ವಿಷ್ಣುವಿನ ಅನುಚರರು. ತಲೆಯನ್ನು ತಗ್ಗಿಸಿ ಪರಮಾತ್ಮನ ಧ್ಯಾನಮಾಡುತ್ತಾ ನಿಂತಿರುವ ಧ್ರುವನನ್ನು ನೋಡಿ ಮಂದಹಾಸದಿಂದ ಹೇಳಿದರು.

"ರಾಜನ್! ನಿನ್ನ ಅದೃಷ್ಟಕ್ಕೆ ಎಣೆಯಿಲ್ಲ. ನಮ್ಮ ಮಾತುಗಳನ್ನು ಸಾವಧಾನವಾಗಿ ಕೇಳು. ನೀನು ಐದನೆಯ ವರ್ಷದಲ್ಲಿಯೇ ಯಾವ ದೇವನನ್ನು ಒಲಿಸಿಕೊಂಡೆಯೋ ಆ ಶಾರ್ಙಪಾಣಿಯಾದ ದೇವದೇವನ ಅನುಚರರು ನಾವು. ನಿನ್ನ ಇದೇ ದೇಹದಿಂದಲೇ ಹರಿಧಾಮವಾದ ಧ್ರುವಲೋಕಕ್ಕೆ ಕರೆದುಕೊಂಡುಹೋಗಲು ಬಂದಿದ್ದೇವೆ. ನೀನು ಯಾವ ವಿಷ್ಣುಪದವನ್ನು ಸಂಪಾದಿಸಿರುವೆಯೋ ಅದನ್ನು ಹೊಂದುವುದು ದೊಡ್ಡ ದೊಡ್ಡವರಿಗೂ ಸಾಧ್ಯ

ವಿಲ್ಲ. ಮಹಾ ತಪಸ್ವಿಗಳಾದ ಸಪ್ತರ್ಷಿಗಳೂ ಸಹಾ ಆ ಪದವಿಯನ್ನು ಹೊಂದಲಿಲ್ಲ. ಅವರು ಅದರ ಕೆಳಗೆ ಅದನ್ನು ನಿತ್ಯವೂ ದರ್ಶನಮಾಡುತ್ತಿರುವರು. ಚಂದ್ರಸೂರ್ಯಾದಿಗ್ರಹಗಳೂ ನಕ್ಷತ್ರಗಳೂ ತಾರಾಗಣಗಳೂ ಆ ಧ್ರುವಲೋಕವನ್ನು ಪ್ರದಕ್ಷಿಣೆಮಾಡುತ್ತಿರುವರು. ಆದರೆ ನೀನು ಈಶ್ವರನ ಅನುಗ್ರಹದಿಂದ ಅದನ್ನು ಜಯಿಸಿರುವೆ. ನಿನ್ನ ಪೂರ್ವಜರಾರೂ ಹೊಂದದಿರುವ, ಎಂತೆಂತಹ ಪುಣ್ಯಾತ್ಮರಿಗೂ ಅಸಾಧ್ಯವಾಗಿರುವ, ಆ ತ್ರಿಭುವನ ವಂದಿತ ಶ್ರೀಹರಿಯ ಶಾಶ್ವತ ಸ್ಥಾನದಲ್ಲಿ–ಧ್ರುವಪದದಲ್ಲಿ ನೀನು ವಾಸಮಾಡು. ಭಗವಂತನಾದ ಶ್ರೀಹರಿಯು ಕಳುಹಿಸಿರುವ ಈ ದಿವ್ಯ ವಿಮಾನವನ್ನು ಹತ್ತಿ ಹೊರಡು."

ಈ ಮಾತುಗಳನ್ನು ಕೇಳುತ್ತಲೇ ಭಗವತ್ಪ್ರಿಯನಾದ ಧ್ರುವನು ಸ್ನಾನಮಾಡಿದನು. ನಿತ್ಯಕರ್ಮವನ್ನು ಮುಗಿಸಿದನು. ಆ ದಿವ್ಯ ವಿಮಾನಕ್ಕೆ ಪ್ರದಕ್ಷಿಣೆಮಾಡಿದನು. ಕೂಡಲೇ ಅವನ ದೇಹವು ಸುವರ್ಣದಂತೆ ಬೆಳಗಿತು. ಆ ಸುನಂದ ನಂದರಿಗೆ ಪ್ರಣಾಮಮಾಡಿ ದೇವದುಂದುಭಿಗಳು ಮೊಳಗುತ್ತಿರಲು, ದೇವಲೋಕದಿಂದ ಪುಷ್ಪವೃಷ್ಟಿಯಾಗುತ್ತಿರಲು ವಿಮಾನದಲ್ಲಿ ಹತ್ತಿದೊಡನೆಯೇ ತನ್ನ ತಾಯಿಯಾದ ಸುನೀತಿಯ ಜ್ಞಾಪಕವು ಬಂದಿತು. 'ನನ್ನ ವಿಯೋಗದಿಂದ ತಾಯಿಗೆ ದುಃಖವಾಗಿರಬಹುದು. ಅವಳನ್ನು ಇಲ್ಲಿಯೇ ಬಿಟ್ಟು ನಾನೊಬ್ಬನೇ ಹೊರಡುವುದೇ ?' ಎಂಬ ಯೋಚನೆಯು ಅವನಿಗೆ ಬರುತ್ತಿದ್ದಂತೆಯೇ ಅವನ ಇಂಗಿತವನ್ನರಿತ ಆ ವಿಷ್ಣುಭಟರು "ಧ್ರುವ ! ಯೋಚಿಸಬೇಡ. ಅಗೋ ನೋಡು ಮತ್ತೊಂದು ವಿಮಾನದಲ್ಲಿ ನಿನ್ನ ತಾಯಿಯು ಸ್ವರ್ಗಕ್ಕೆ ನಿನಗಿಂತ ಮುಂಚೆಯೇ ಹೋಗುತ್ತಿರುವಳು" ಎಂದು ತೋರಿಸಿದರು. ಆಗಲಾತನು ಸಂತೋಷಚಿತ್ತದಿಂದ ಧ್ರುವಲೋಕಕ್ಕೆ ಹೊರಟನು. ಮಾರ್ಗಮಧ್ಯದಲ್ಲಿ ವಿಮಾನವಾಸಿಗಳಾದ ದೇವತೆಗಳು ಹೊಗಳುತ್ತಿದ್ದರು. ಪುಷ್ಪವೃಷ್ಟಿಯನ್ನು ಕರೆಯುತ್ತಿದ್ದರು. ವಿಮಾನದಲ್ಲಿಕುಳಿತಿದ್ದ ಆತನು ಲೋಕತ್ರಯಗಳನ್ನು ದಾಟಿ ಸಪ್ತರ್ಷಿಮಂಡಲದ ಮೇಲಿರುವ ಧ್ರುವಲೋಕವನ್ನು ಸೇರಿದನು. ಅಲ್ಲಿಗೆ ಹೋದನಂತರ ಹಿಂತಿರುಗುವ ಭಯ

ವಿಲ್ಲ. ಅದೇ ವಿಷ್ಣುವಿನ ಪರಮಪದವು.

ಈ ವಿಷ್ಣುಪದವು ನಾಲ್ಕು ಕಡೆಗಳಲ್ಲಿಯೂ ತನ್ನದೇ ಆದ ವಿಶೇಷ ತೇಜಸ್ಸಿನಿಂದ ಪ್ರಕಾಶಿಸುತ್ತಿದೆ. ಅದರ ತೇಜಸ್ಸಿನಿಂದಲೇ ಲೋಕತ್ರಯವೂ ಬೆಳಗುತ್ತಿರುವುದು. ಅಹರ್ನಿಶೆಯೂ ದಯಾವಂತ ರಾಗಿ ಜಗದ್ಧಿತಾರ್ಥಕರ್ಮಗಳನ್ನು ಮಾಡುತ್ತಿರುವ ಶಾಂತಸ್ವಭಾವ ರಾದ ಸಮದರ್ಶಿಗಳಾದ ಪರಮಾತ್ಮನನ್ನೇ ಪ್ರಿಯಬಂಧುವೆಂದು ತಿಳಿದಿರುವ ಶುದ್ಧಸ್ವಭಾವದ ಭಕ್ತರು ಮಾತ್ರ ಆ ವಿಷ್ಣುಪದವನ್ನು ಹೊಂದಬಲ್ಲರು.

ಉತ್ತಾನಪಾದಪುತ್ರನಾದ ಧ್ರುವನು ಹೀಗೆ ವಿಷ್ಣುಪದವನ್ನು ಜಯಿಸಿ ಅಲ್ಲಿ ತ್ರಿಭುವನಗಳ ಮೇಲಿರುವ ಮಕುಟಮಣಿಯಂತೆ ವಿರಾಜಮಾನನಾಗಿದ್ದಾನೆ. ಗಾಣಕ್ಕೆ ಕಟ್ಟಿದ ಎತ್ತು ಹೇಗೆ ಒಂದು ಮರದ ಕಟ್ಟಿಗೆಯ ಸಹಾಯದಿಂದ ಅದರ ಸುತ್ತಲೂ ತಿರುಗುವುದೋ ಹಾಗೆ ಜ್ಯೋತಿಶ್ಚಕ್ರವು—ಸೂರ್ಯ, ಚಂದ್ರ, ನಕ್ಷತ್ರಾದಿಗಳ ಸಮೂಹವು ಆ ಧ್ರುವಲೋಕದ ಆಶ್ರಯದಿಂದ ಅದರ ಸುತ್ತಲೂ ತಿರುಗುತ್ತಿರುವುದು.

ನಾರದನು ಸ್ವರ್ಗ ಮರ್ತ್ಯ ಪಾತಾಳಗಳಲ್ಲಿನವರೆಲ್ಲರೂ ಸೇರುವ ದೇವಸಭೆಯಲ್ಲಿ ಶ್ರೀ ಮಹಾವಿಷ್ಣುವಿನ ಮಹಿಮೆಯನ್ನು ಪ್ರಶಂಸೆ ಮಾಡುವಾಗ "ಪತಿವ್ರತೆಯಾದ ಸುನೀತಿಯು ಹಿಂದಿನ ಜನ್ಮದಲ್ಲಿ ಮಾಡಿದ ಅನಂತ ಪುಣ್ಯದ ಫಲವಾಗಿ ಧ್ರುವನಂತಹ ತಪಸ್ವಿಯಾದ ಮಗನನ್ನು ಹಡೆದಳು. ಅವನು ಐದು ವರ್ಷದ ಬಾಲಕನಾಗಿರು ವಾಗಲೇ ಸವತಿತಾಯಿಯ ತಿರಸ್ಕಾರದ ನೆವದಿಂದ ಶ್ರೀ ಹರಿಯನ್ನು ಆರಾಧಿಸಿ ಶಾಶ್ವತ ಧ್ರುವಪದವನ್ನು ಪಡೆದನು ನಾನೇ ಅವನಿಗೆ ಮಂತ್ರೋಪದೇಶಮಾಡಿ ತಪಸ್ಸಿಗೆ ಕಳುಹಿಸಿಕೊಟ್ಟವನು. ಎಂತೆಂತಹ ತಪಸ್ವಿಗಳೂ ಹೊಂದಲಸಾಧ್ಯವಾದ ಗತಿಯನ್ನು ಹೊಂದಿದನು" ಎಂದು ಮುಂತಾಗಿ ಹೊಗಳುತ್ತಿರುವನು.

ವಿದುರ! ನೀನು ಪ್ರಶ್ನೆಮಾಡಿದುದರಿಂದ ಮಹಾತ್ಮನಾದ ಧ್ರುವನ ಚರಿತ್ರೆಯನ್ನು ತಿಳಿಸಿದ್ದೇನೆ. ಇದು ಸಾಧುಜನಗಳಿಗೆ

ಅತ್ಯಂತ ಪ್ರಿಯವಾದುದು. ಯಶಸ್ಸನ್ನೂ ಆಯುಸ್ಸನ್ನೂ ವೃದ್ಧಿಮಾಡ ಬಲ್ಲುದು. ಪುಣ್ಯಪ್ರದವಾದುದು. ಮಂಗಳಮಯವಾದುದು. ಮನಸ್ಸನ್ನು ಶಾಂತವಾಗಿರಿಸಬಲ್ಲದು. ಪಾಪನಾಶಕಾರಿಯಾದ ಇದನ್ನು ಶ್ರದ್ಧಾ ಪೂರ್ವಕವಾಗಿ ಕೇಳುವುದರಿಂದ ಭಗವದ್ಭಕ್ತಿಯು ಹೆಚ್ಚುವುದು. ಅದರಿಂದ ಸಂಸಾರ ತಾಪವು ಶಮನವಾಗುವುದು. ಮಹತ್ವವನ್ನು ಪಡೆಯ ಬೇಕೆಂಬ ಇಚ್ಛೆಯಿದ್ದರೆ, ಮನಸ್ವಿಯಾಗಿ ತೇಜಸ್ವಿಯಾಗಿ ಬದುಕ ಬೇಕೆಂಬ ಆಶೆಯಿದ್ದರೆ ಧ್ರುವಚರಿತ್ರೆಯನ್ನು ಕೇಳಲೇಬೇಕು. ಈ ಚರಿತ್ರೆಯು ತೀರ್ಥದಂತೆ ಪಾವನವಾದುದು. ಪ್ರಾತಃಕಾಲದಲ್ಲಿ ಅಥವ ಸಾಯಂಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳ ಸಭೆಯಲ್ಲಿ ಈ ಉತ್ತಮ ಚರಿತ್ರೆಯನ್ನು ಕೀರ್ತನಮಾಡಬೇಕು. ಪೂರ್ಣಿಮ, ಅಮಾವಾಸ್ಯೆ, ದ್ವಾದಶಿತಿಥಿಗಳಲ್ಲಿ, ಶ್ರವಣನಕ್ಷತ್ರ, ವ್ಯತೀಪಾತ, ಸಂಕ್ರಾಂತಿ ಈ ದಿನಗಳಲ್ಲಿ ಭಾನುವಾರ, ದಿನಕ್ಷಯ ಮುಂತಾದ ಪರ್ವದಿನ ಗಳಲ್ಲಿ ಇದನ್ನು ಶ್ರವಣಮಾಡಬೇಕು. ಮತ್ತು ನಿಷ್ಕಾಮರಾಗಿ ಶ್ರದ್ಧಾಳುಗಳಾದವರಿಗೆ ಇದನ್ನು ಶ್ರವಣಮಾಡಿಸಬೇಕು. ಇದರಿಂದ ಸಂಸಾರಕ್ಲೇಶಗಳು ದೂರವಾಗುವುವು.

ಈಶ್ವರತತ್ವವನ್ನು ತಿಳಿಯಲಾರದ ಅಜ್ಞಾನಿಗಳಿಗೆ ಅಮೃತರೂಪ ಜ್ಞಾನಪ್ರಕಾಶವನ್ನು ಕೊಡುವ ದೀನಬಂಧುವಾದ ದಯಾಳುವಾದ, ಮಹಾತ್ಮನಮೇಲೆ ದೇವತೆಗಳು ಅನುಗ್ರಹಮಾಡುವರು. ಧನ್ಯ ಧ್ರುವರಾಜ! ಜಗತ್ತಿನ ನಾಟಕವನ್ನು—ಮಾತಾಪಿತೃಗಳ ಮೇಲಿನ ಮಮತೆಯನ್ನು ಬಾಲ್ಯದಲ್ಲಿಯೇ ತ್ಯಾಗಮಾಡಿ ಹರಿಭಕ್ತನಾಗಿ ನಿಂತ ಧೀರನಲ್ಲವೇ ನೀನು ?

---

# ಪಂಚವಿಂಶ ಕಿರಣ



ಮೈತ್ರೇಯ ಮುನಿಯ ಮುಖದಿಂದ ಧ್ರುವನು ಧ್ರುವ ಲೋಕಕ್ಕೆ ಹೋದ ವೃತ್ತಾಂತವನ್ನು ಕೇಳಿ ವಿದುರನಿಗೆ ಶ್ರೀವಿಷ್ಣು ವಿನ ಮೇಲಿನ ಭಕ್ತಿಯು ದೃಢವಾಯಿತು. ಶ್ರೀಹರಿಯ ಚರಿತ್ರೆ ಯನ್ನು ಕೇಳಲಾರಂಭಿಸಿದನು.

ವಿದುರ:—ಭಗವನ್, ತಾವು ಪ್ರಚೇತರ ಯಜ್ಞದಲ್ಲಿ ನಾರದನು ಧ್ರುವನ ಮಹಿಮೆಯನ್ನು ಗಾನಮಾಡಿದನೆಂದು ಹೇಳಿದಿರಿ. ಆ ಪ್ರಚೇತರು ಎಂದರೆ ಯಾರು? ಯಾರ ವಂಶದಲ್ಲಿ ಹುಟ್ಟಿದವರು? ಯಾರ ಮಕ್ಕಳು? ಎಲ್ಲಿ ಆ ಯಜ್ಞವು ನಡೆಯುತ್ತಿತ್ತು? ನಾರದರು ಪರಮ ಭಕ್ತರೆಂದೂ ಅವರಿಗೆ ಶ್ರೀಹರಿಯ ದರ್ಶನವಾಗಿತ್ತೆಂದೂ ನಾನು ತಿಳಿದಿದ್ದೇನೆ. ಅವರೇ ಶ್ರೀಹರಿಯ ಪೂಜಾವಿಧಾನವಾದ ಪಾಂಚರಾತ್ರಾಗಮವನ್ನು ವರ್ಣನೆಮಾಡಿದ್ದಾರೆಂದು ನಾನು ತಿಳಿದಿದ್ದೇನೆ. ತಮ್ಮ ಸ್ವಧರ್ಮದಲ್ಲಿ ನಿಷ್ಠರಾದ ಪ್ರಚೇತರು ಯಜ್ಞ ಪುರುಷನನ್ನು ಪೂಜಿಸುತ್ತಿದ್ದರು. ಅಲ್ಲಿಗೆ ನಾರದರು ಹೋಗಿ ಶ್ರೀಹರಿಯ ಗುಣವನ್ನು ಗಾನಮಾಡಿದರು ಎಂದಲ್ಲವೇ ತಾವು ಹೇಳಿದುದು. ಸ್ವಾಮೀ, ತಾವು ನಾರದರು ವರ್ಣಿಸಿದ ಶ್ರೀಹರಿಯ ಕಥೆಗಳನ್ನು ದಯವಿಟ್ಟು ಚೆನ್ನಾಗಿ ವರ್ಣನೆಮಾಡಿರಿ. ಕೇಳಬೇಕೆಂಬ ಕುತೂಹಲವು ಹೆಚ್ಚಾಗುತ್ತಿದೆ.

ಮೈತ್ರೇಯ:—ಧ್ರುವನ ಹಿರಿಯಮಗನ ಹೆಸರು ಉತ್ಕಲನೆಂದು. ಧ್ರುವನು ವನಕ್ಕೆ ಹೋದನಂತರ ಚಕ್ರವರ್ತಿಯ ರಾಜ್ಯಲಕ್ಷ್ಮಿಯೂ ತಂದೆಯ ರಾಜಸಿಂಹಾಸನವು ತನಗೆ ಸಿಕ್ಕಿದರೂ ಆತನು ಅವುಗಳನ್ನು ಗ್ರಹಣಮಾಡಲಿಲ್ಲ. ಜನ್ಮದಿಂದಲೂ ಆತನ ಮನಸ್ಸು ಶಾಂತವಾಗಿದ್ದಿತು ಆತನು ಸಮದರ್ಶಿಯಾಗಿ ವಿಷಯಾಸಕ್ತರಾದ ಜನಗಳ

ಈ ಪುರುಷನು ಆದಿ ರಾಜನಾದ ಪೃಥು ಎಂಬ ಚಕ್ರವರ್ತಿ ಯಾಗಲಿ. ಈತನ ಯಶಸ್ಸು ಭೂಮಂಡಲದಲ್ಲೆಲ್ಲಾ ಪ್ರಸರಿಸಲಿ. ಈ ಸುಂದರ ವದನೆಯಾದ ಸರ್ವಾಭರಣ ಭೂಷಿತೆಯಾದ ಸ್ತ್ರೀ ರತ್ನವು ಅರ್ಚಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಲಿ. ಇವಳು ಲಕ್ಷ್ಮಿಯ ಅಂಶವಾದುದರಿಂದ ಮಹಾರಾಜನಾದ ಪೃಥುವೇ ಇವಳನ್ನು ವಿವಾಹವಾಗಲಿ. ಇವರು ಲೋಕದ ರಕ್ಷಣೆಗೋಸ್ಕರ ಹುಟ್ಟಿದವರಾದುದರಿಂದ ಇವರು ಪವಿತ್ರ ಕೀರ್ತಿವಂತರಾಗಿ ಬಾಳಿ ಇಹಪರಗಳಲ್ಲಿ ಸಕಲ ಸೌಖ್ಯಗಳನ್ನೂ ಅನುಭವಿಸಲಿ ಎಂದು ಹರಸಿದರು.

ಪೃಥುವಿನ ಉತ್ಪತ್ತಿಯ ನಂತರ ಬ್ರಾಹ್ಮಣರು ಅವನನ್ನು ಸ್ತುತಿಸಿದರು ಗಂಧರ್ವರು ಗಾನಮಾಡಿದರು. ಅಪ್ಸರೆಯರು ನೃತ್ಯ ಮಾಡಿದರು. ಸಿದ್ಧರು ಪುಷ್ಪವೃಷ್ಟಿಯನ್ನು ಸುರಿಸಿದರು. ಸ್ವರ್ಗದಲ್ಲಿ ವಿವಿಧವಾದ ವಾದ್ಯಗಳು ಮೊಳಗಿದವು. ದೇವಋಷಿ ಪಿತೃಗಳ ತಂಡವು ಸ್ವರ್ಗದಿಂದ ಭೂಮಿಗೆ ಇಳಿಯಿತು. ಜಗದ್ಗುರುವಾದ ಬ್ರಹ್ಮನು ಸಮಸ್ತ ದೇವತೆಗಳೊಡನೆಯೂ ದೇವೇಂದ್ರಾದಿ ಲೋಕಪಾಲಕ ರೊಡನೆಯೂ ಅಲ್ಲಿಗೆ ಬಂದನು. ಪೃಥುವಿನ ಬಲಗೈಯಲ್ಲಿ ಚಕ್ರ ಚಿಹ್ನೆಯೂ ಪಾದದಲ್ಲಿ ಪದ್ಮರೇಖೆಯೂ ಇದ್ದುದರಿಂದ ಈತನು ಖಂಡಿತವಾಗಿಯೂ ಶ್ರೀ ಹರಿಯ ಅಂಶಾವತಾರವೇ ಎಂದು ತಿಳಿದು ಬ್ರಹ್ಮಜ್ಞರಾದ ಬ್ರಾಹ್ಮಣರು ಪೃಥುವಿನ ರಾಜ್ಯಾಭಿಷೇಕದ ಪ್ರಯತ್ನಮಾಡಿದರು. ಎಲ್ಲರೂ (ನದಿ, ಸಾಗರ, ಪರ್ವತ, ಭೂಮಿ, ಆಕಾಶ, ಸರ್ಪ, ಗರುಡ ಪಕ್ಷಿ ಮೃಗ ಆದಿ ಸಂಪೂರ್ಣ ಶಕ್ತಿಗಳೂ) ಯಥಾಯೋಗ್ಯವಾಗಿ ತಮ್ಮ ತಮ್ಮಲ್ಲಿರುವ ಅಭಿಷೇಕದ ಸಾಮಗ್ರಿಗಳನ್ನು ಒದಗಿಸಿದರು. ಪೃಥುಮಹಾರಾಜನು ಸುಂದರ

ವಸ್ತ್ರಾಭರಣ ಭೂಷಿತನಾಗಿ ಸಿಂಹಾಸನದ ಮೇಲೆ ಕುಳಿತನು. ಪೃಥುವಿನ ಪತ್ನಿಯಾದ ಅರ್ಚಿಯು ಅರ್ಧ ಸಿಂಹಾಸನದಲ್ಲಿ ಕುಳಿತಳು. ಅಗ್ನಿಯು ತನ್ನ ತೇಜಸ್ಸಿನಿಂದ ಶೋಭಿಸುವಂತೆ ಪೃಥುರಾಜನು ರಾಣಿಯಾದ ಅರ್ಚಿಯೊಡನೆ ರಾಜಸಿಂಹಾಸನದಲ್ಲಿ ಶೋಭಿಸಿರಲು ಕುಬೇರನು ಸುವರ್ಣ ಸಿಂಹಾಸನವನ್ನು ಕೊಟ್ಟನು. ವರುಣನು ಚಂದ್ರನಿಗೆ ಸಮಾನವಾದ ತುಂತುರು ಜಲವನ್ನು ಯಾವಾಗಲೂ ಸುರಿಸುತ್ತಿರುವ ಸುಂದರವಾದ ಛತ್ರಿಯನ್ನು ಅರ್ಪಿಸಿದನು. ವಾಯುವು ಮನೋಹರವಾದ ಚಾಮರವನ್ನು ಅರ್ಪಿಸಿದನು. ಧರ್ಮನು ಕೀರ್ತಿಯನ್ನು ಸಮರ್ಪಿಸಿದನು. ಇಂದ್ರನು ಅತ್ಯುತ್ತಮವಾದ ಕಿರೀಟ—ಮುಕುಟವನ್ನು ಕೊಟ್ಟನು. ಯಮನು ಶಿಕ್ಷಾದಂಡವನ್ನು ಕೊಟ್ಟನು. ಬ್ರಹ್ಮನು ವೇದಮಯ ಕವಚವನ್ನೂ ಸರಸ್ವತಿಯು ಉತ್ತಮವಾದ ಹಾರವನ್ನೂ ವಿಷ್ಣುವು ಚಕ್ರವನ್ನೂ ವಿಷ್ಣುಪತ್ನಿಯಾದ ಲಕ್ಷ್ಮಿಯು ಸ್ಥಿರ ಸಂಪತ್ತನ್ನೂ ಕೊಟ್ಟರು. ಶಿವನು ದಶಚಂದ್ರಯುಕ್ತವಾದ ಖಡ್ಗವನ್ನೂ ಅಂಬಿಕೆಯು ಶತಚಂದ್ರಯುಕ್ತವಾದ ಗುರಾಣಿಯನ್ನೂ ಕೊಟ್ಟರು. ಚಂದ್ರನು ಅಮೃತಮಯವಾದ ಅಶ್ವವನ್ನೂ ವಿಶ್ವಕರ್ಮನು ಅತ್ಯಂತ ಸುಂದರವಾದ ರಥವನ್ನೂ ಅಗ್ನಿಯು † ಆಜಗಾವ ಎಂಬ ಧನುಸ್ಸನ್ನೂ ಸೂರ್ಯನು ತೇಜೋಮಯವಾದ ಬಾಣವನ್ನೂ ಪೃಥ್ವಿಯು * ಯೋಗಮಯವಾದ ಪಾದುಕೆಗಳನ್ನೂ ಆಕಾಶವು ಶಾಶ್ವತ ಪುಷ್ಪವೃಷ್ಟಿಯನ್ನೂ ಅರ್ಪಿಸಿದರು. ಆಕಾಶ ಸಂಚಾರಿಗಳಾದ

---

† ಆಜಗಾವ ಎಂಬುದು ಟಗರಿನ ಮತ್ತು ಗೋವಿನ ಶೃಂಗದಿಂದ ಮಾಡಲ್ಪಟ್ಟ ಬಲವಾದ ಧನಸ್ಸು.

* ಯೋಗಮಯ ಎಂದರೆ ಪಾದುಕೆಯ ಮೇಲೆ ಕಾಲಿಡುತ್ತಲೇ ಎಲ್ಲಿಗೆ ಬೇಕೆಂದರೆ ಅಲ್ಲಿಗೆ ತೆಗೆದುಕೊಂಡುಹೋಗುವ ಶಕ್ತಿಯುಳ್ಳದ್ದು.

ಸಿದ್ಧ ವಿದ್ಯಾಧರ ಗಂಧರ್ವಾದಿಗಳು ಅಂತರ್ಧಾನವಿದ್ಯೆ-ನಾಟ್ಯಗೀತಾ ವಾದ್ಯಾದಿ ವಿದ್ಯೆಗಳನ್ನು ಕೊಟ್ಟರು. ಸಮುದ್ರವು ತನ್ನಲ್ಲಿ ಹುಟ್ಟಿದ ಶಂಖವನ್ನೂ, ಋಷಿಗಳು ಸತ್ಯ ಸಫಲ ಆಶೀರ್ವಾದವನ್ನೂ ಕೊಟ್ಟರು. ಸಿಂಧು ಪರ್ವತ, ನದಿಗಳು ಮಹಾತ್ಮನಾದ ಪೃಥುವಿಗೆ ರಥದ ಮಾರ್ಗವನ್ನು ಕೊಟ್ಟರು. ವಂಧಿಮಾಗಧರು ಸ್ತೋತ್ರ ಮಾಡಲಾರಂಭಿಸಿದರು.

"ಚಕ್ರವರ್ತಿ ಮಹಾರಾಜ ಪೃಧುವಿಗೆ ಜಯವಾಗಲಿ. ಈತನ ಮ ಹಿ ಮೆ ಯ ನ್ನು ವರ್ಣಿಸಲು ನಮಗೆ ಶಕ್ತಿಯಿಲ್ಲ. ದೇವದೇವನಾದ ಈಶ್ವರನಾದ ಈತನು ಮಾಯಾಮಾನುಷ ಶರೀರ ವನ್ನು ಗ್ರಹಣಮಾಡಿ ವೇನರಾಜನ ದೇಹದಿಂದ ಪ್ರಕಟನಾಗಿದ್ದಾನೆ. ಈತನು ಉದಾರಕೀರ್ತಿಯಾದ ಹರಿಯ ಅಂಶಾವತಾರವು. ಈ ಮಹಾರಾಜನಾದ ಪೃಧುವು ಧರ್ಮಾತ್ಮರಲ್ಲಿ ಶ್ರೇಷ್ಠನಾಗಿ ಜನಗಳನ್ನು ಧರ್ಮಮಾರ್ಗದಲ್ಲಿ ನಡೆಯುವಂತೆ ಮಾಡುತ್ತಾನೆ. ಧರ್ಮಮರ್ಯಾದೆ ಯನ್ನು ರಕ್ಷಣೆಮಾಡಿ ಧರ್ಮದ್ರೋಹಿಗಳಾದ ದುಷ್ಟರನ್ನು ಸಂಹರಿಸು ತ್ತಾನೆ. ಲೋಕಪಾಲಕರು ಭಿನ್ನ ಭಿನ್ನ ಶರೀರಗಳನ್ನು ಧಾರಣೆ ಮಾಡಿ ಜಗತ್ತಿನ ಹಿತವನ್ನು ರಕ್ಷಣೆಮಾಡುವಂತೆ ಈ ಮಹಾರಾಜನು ಒಂದೇ ದೇಹದಲ್ಲಿದ್ದರೂ ಸಮಯಾನುಸಾರಸಂಪೂರ್ಣ ಲೋಕಪಾಲಕರ ಸ್ವಭಾವವನ್ನು ಧಾರಣೆಮಾಡಿ ಈ ಸಂಪೂರ್ಣ ಜಗತ್ತಿನ -ಇಹಪರ ಲೋಕಗಳ ಹಿತವನ್ನು ಮಾಡುತ್ತಾನೆ. ಈತನು ಸಂಪೂರ್ಣ ಪ್ರಾಣಿಗಳಲ್ಲಿ ಸಮಭಾವದಿಂದ ಸೂರ್ಯನಂತೆ ಸಮಾನ ಪ್ರತಾಪ ವನ್ನು ಪ್ರಸರಿಸುತ್ತಾನೆ. ಸೂರ್ಯನು ಎಂಟು ತಿಂಗಳು ಭೂಮಿಯ ರಸವನ್ನು ಹೀರಿದರೂ ವರ್ಷಋತುವಿನಲ್ಲಿ ಅದನ್ನೇ ಪುನಃ ಮಳೆಯ ಮೂಲಕ ಭೂಮಿಗೆ ಹಿಂದಿರುಗಿ ಕೊಡುವಂತೆ ಈತನೂ ಸಹ

ಪ್ರಜೆಗಳಿಂದ ಕರ (ಕಂದಾಯ) ವನ್ನು ತೆಗೆದುಕೊಂಡು ದುರ್ಭಿಕ್ಷಾದಿ ಸಮಯದಲ್ಲಿ ಮುಕ್ತಹಸ್ತನಾಗಿ ಅದನ್ನೇ ಲೋಕಕ್ಕೆ ಹಂಚುತ್ತಾನೆ. ತನ್ನ ತಲೆಯ ಮೇಲೆ ಆರ್ತನಾದ ವ್ಯಕ್ತಿಯು ಪಾದವನ್ನಿಟ್ಟರೂ ಸಹಿಸುವನು. ಪೃಥ್ವಿಯಂತೆ ಕ್ಷಮಾಶೀಲನೂ ಕರುಣಾನಿಧಿಯೂ ಆಗುವನು. ಇಂದ್ರನು ಸಕಾಲದಲ್ಲಿ ಮಳೆಯನ್ನು ಸುರಿಸದಿದ್ದರೆ ಲೋಕಕ್ಷೋಭೆಯಾಗುತ್ತಿದ್ದರೆ ಅನಾಯಾಸವಾಗಿ ಇಂದ್ರನಂತೆ ಮಳೆಯನ್ನೇ ಕರೆದು ಪ್ರಜೆಗಳನ್ನು ರಕ್ಷಿಸುವನು. ಚಂದ್ರನಂತೆ ತನ್ನ ಅಮೃತಮಯರೂಪದಿಂದ ಜನಗಳನ್ನು ಆನಂದಗೊಳಿಸುವನು. ತನ್ನ ಮುಖಚಂದ್ರನಿಂದ ಹೊರಟ ಮೃದುಹಾಸ್ಯಯುಕ್ತವಾದ ಕೃಪಾದೃಷ್ಟಿಯಿಂದ ಪ್ರಜೆಗಳನ್ನು ಸಂತೋಷಗೊಳಿಸುವನು. ಅಪಾರವಾದ ಸಮುದ್ರವು ಒಳಗೆ ಅನೇಕ ರತ್ನಗಳನ್ನು ರಕ್ಷಿಸುತ್ತಾ ಮೇಲೆ ಮಾತ್ರ ಗಂಭೀರವಾಗಿ ಕಾಣುವಂತೆ ಈ ರಾಜನೂ ನಹ ತನ್ನ ಕೌಶಲವು ಯಾರಿಗೂ ತಿಳಿಯದಂತೆ ಹೊರಗೆ ಗಂಭೀರವಾಗಿ ಕಂಡರೂ ತನ್ನ ಸ್ವಕರ್ತವ್ಯವನ್ನು ಗುಪ್ತರೀತಿಯಿಂದಲೇ ನಡೆಸಿಕೊಳ್ಳುವನು. ಗುಪ್ತಭಾವದಿಂದ ಕೋಶ ಸಂಚಯಮಾಡಿ ಅನಂತಮಹಿಮನಾಗಿ ಸದ್ಗುಣಗಳಿಗೆ ಆಧಾರನಾಗಿ ಜಗತ್ತಿನ ತುಂಬಾ ತನ್ನ ಅಧಿಕಾರವನ್ನು ಸ್ಥಾಪಿಸುವನು. ವೇನರೂಪ ಅರಣಿಯಿಂದ ಉತ್ಪನ್ನವಾದ ಈ ತೇಜಸ್ವಿಯಾದ ಪೃಥುವು ಅಗ್ನಿತುಲ್ಯನಾಗುವನು. ಶತ್ರುಗಳಿಗೆ ಈತನ ತೇಜಸ್ಸನ್ನು ಸಹಿಸಲು ಶಕ್ತಿಯಿಲ್ಲ, ಹತ್ತಿರವಿದ್ದರೂ ದೂರವಿದ್ದಂತೆಯೇ ಕಾಣುವನು ಪೌರುಷದಿಂದ ಯಾರೂ ಈತನನ್ನು ಜಯಿಸಲಾಗುವುದಿಲ್ಲ. ಗುಪ್ತಚಾರರ ದ್ವಾರಾ ಪ್ರಾಣಿಗಳ ಆಂತರಿಕ ಮತ್ತು ಬಾಹ್ಯ ಕಾರ್ಯಗಳನ್ನು ನೋಡುತ್ತಾ ದೇಹರಕ್ಷಣೆಗೆ ಆಧಾರವಾದ ವಾಯುವಿನಂತೆ ತನ್ನ ಸ್ತುತಿ ಮತ್ತು ನಿಂದೆಗಳಲ್ಲಿ ಸಮವಾಗಿರುವನು,

ನ್ಯಾಯನಿರ್ಣಯದಲ್ಲಿ ಧರ್ಮರಾಜನಿಗೆ ಸಮಾನನು. ಸದ್ಗುಣಿಯಾದ ಶತ್ರುವನ್ನಾದರೂ ಆದರಿಸುವನು. ಅಪರಾಧಿಗಳಾದ ಪುತ್ರರನ್ನು ನಿರ್ದಾಕ್ಷಿಣ್ಯವಾಗಿ ಶಿಕ್ಷಿಸುವನು. ಈತನ ಕೀರ್ತಿಯು ಜಗದ್ವಿಖ್ಯಾತವಾಗುವುದು. ಈತನು ದೃಢವ್ರತನಾಗಿ, ಸತ್ಯಸಂಧನಾಗಿ, ಬ್ರಾಹ್ಮಣಭಕ್ತನಾಗಿ, ಗುರುಹಿರಿಯರನ್ನು ಸೇವೆಮಾಡುತ್ತಾ ಸಮಸ್ತ ಪ್ರಾಣಿಗಳಿಗೂ ರಕ್ಷಕನಾಗಿ, ದೀನವತ್ಸಲನಾಗಿರುವನು. ಪರಸ್ತ್ರೀಯನ್ನು ಭಕ್ತಿಯಿಂದ ತನ್ನ ಸ್ವಂತ ತಾಯಿಯಂತೆ ನೋಡುವನು. ತನ್ನ ಪತ್ನಿಯನ್ನು ಅರ್ಧಶರೀರದಂತೆ ಪ್ರೀತಿಸುವನು ಪ್ರಜೆಗಳ ಮೇಲೆ ಪಿತೃವಾತ್ಸಲ್ಯವನ್ನಿಡುವನು. ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ಆಜ್ಞಾಧಾರಿಯಾಗುವನು. ಸಮಸ್ತ ಪ್ರಾಣಿಗಳನ್ನೂ ತನ್ನಂತೆಯೇ ಪ್ರೀತಿಸುವನು. ಬಂಧುಗಣವನ್ನು ಸದಾ ಸಂತೋಷಗೊಳಿಸುವನು. ಮುಕ್ತಸಂಗರಾದ ಸಜ್ಜನರ ಸಹವಾಸವನ್ನು ಮಾಡುವನು. ದುಷ್ಟರಿಗೆ ಯಮರಾಜನಂತೆ ದಂಡಧಾರಿಯಾಗುವನು. ಈತನು ಮೂರು ಗುಣಗಳಿಗೂ ಅಧೀಶ್ವರನಾದ ನಿರ್ವಿಕಾರನಾದ ಆತ್ಮಸ್ವರೂಪನಾದ ಸಾಕ್ಷಾತ್ ಭಗವಂತನ ಅಂಶದಿಂದಲೇ ಉತ್ಪನ್ನನಾಗಿದ್ದಾನೆ. ಈತನಲ್ಲಿ ಮಾಯೆಯಿಂದ ರಚಿತವಾದ ಅನೇಕತ್ವವು ಕಾಣಬಂದರೂ ಜ್ಞಾನಿಗಳು ಆ ಅನೇಕತ್ವವನ್ನು ಅರ್ಥಶೂನ್ಯವೆಂದೇ ತಿಳಿಯುವರು. ಅದ್ವಿತೀಯನಾದ ಈ ಪೃಥುವು ಉದಯಾಚಲ ಪರ್ಯಂತವಾದ ಅಖಂಡ ಭೂಮಂಡಲವನ್ನು ಶಾಸನಮಾಡುವನು. ಜಯಪ್ರದವಾದ ರಥವನ್ನು ಹತ್ತಿ ಧನುರ್ಬಾಣಧಾರಿಯಾಗಿ ಸೂರ್ಯನಂತೆ ಸದಾ ಎಲ್ಲೆಲ್ಲಿಯೂ ಸಂಚಾರಮಾಡುತ್ತಿರುವನು. ಎಲ್ಲೆಡೆಯಲ್ಲಿಯೂ ರಾಜರುಗಳೆಲ್ಲಾ ಈತನನ್ನು ಗೌರವಿಸುವರು. ಪ್ರಜಾಪತಿಯಂತೆ ಪ್ರಜೆಗಳ ವೃತ್ತಿವಿಧಾನವನ್ನು ನಿರ್ಣಯಮಾಡು

ವನು. ಗೋರೂಪ ಧಾರಿಣಿಯಾದ ಪೃಥ್ವಿಯಿಂದ ಅನ್ನ ಔಷಧಿ ಮುಂತಾದುವುಗಳನ್ನು ಕರೆಯುವನು. ಇಂದ್ರನಂತೆ ಲೀಲಾಪೂರ್ವಕ ವಾಗಿ ತನ್ನ ಧನುಸ್ಸಿನ ಕೊನೆಯಿಂದ ಪರ್ವತಗಳನ್ನೆಲ್ಲಾ ಒಡೆದು ಪೃಥ್ವಿಯನ್ನು ಸಮತಲವಾಗಿ ಮಾಡುವನು. ಸಿಂಹದಂತೆ ಧನುರ್ಧಾರಿ ಯಾಗಿ ಈತನು ಜಗತ್ತಿನಲ್ಲಿ ಸಂಚರಿಸುವಾಗ ದುಷ್ಟರು ಈತನ ತೇಜಸ್ಸನ್ನು ಎದುರಿಸಲಾರದೆ ಅವಿತುಕೊಳ್ಳುವರು. ಸರಸ್ವತೀ ನದಿಯ ಉತ್ಪತ್ತಿಸ್ಥಾನದಲ್ಲಿ ಈತನು ನೂರು ಅಶ್ವಮೇಧಗಳನ್ನು ಮಾಡುವನು. ತೊಂಬತ್ತೊಂಬತ್ತು ಯಜ್ಞಗಳು ಮುಗಿದು ಕೊನೆಯ ಯಜ್ಞದಲ್ಲಿ ಇಂದ್ರನು ಇವನ ಯಜ್ಞಾಶ್ವವನ್ನು ಹರಣಮಾಡಲು ಅವನನ್ನು ಜಯಿಸಿ ರಾಜಧಾನಿಗೆ ಬಂದು ಪರಮ ಭಕ್ತಿಭಾವದಿಂದ ಭಗವಾನ್ ಸನತ್ಕುಮಾರರನ್ನು ಆರಾಧಿಸಿ ಅವರ ಅನುಗ್ರಹದಿಂದ ನಿರ್ಮಲಜ್ಞಾನವನ್ನು ಪಡೆದು ಬ್ರಹ್ಮಸಿದ್ಧಿಯನ್ನು ಪಡೆಯುವನು. ಈ ಪೃಥು ಮಹಾರಾಜನ ಪರಾಕ್ರಮವು ಮಹತ್ತಾಗಿ ವಿಸ್ತರಿಸುವುದು. ಈತನು ಮನೆಗೆ ಹಿಂದಿರುಗುವ ಸಮಯದಲ್ಲಿ ವಿಶ್ವವಿದಿತವಾದ ತನ್ನ ವಿಕ್ರಮದ ಕಥೆಯು ಎಲ್ಲೆಲ್ಲಿಯೂ ಹೊಗಳಲ್ಪಡುತ್ತಿರುವುದನ್ನು ಕೇಳಿ ಆನಂದಿಸುವನು. ಈತನು ಸಮಸ್ತ ದಿಕ್ಕುಗಳನ್ನೂ ಜಯಿಸಿ ಚಕ್ರವರ್ತಿಯಾಗುವನು. ಪೃಥ್ವಿಯಲ್ಲಿ ಈತನ ಆಜ್ಞೆಯನ್ನಾರೂ ಧಿಕ್ಕರಿಸಲು ಸಾಧ್ಯವಿಲ್ಲ. ತನ್ನ ತೇಜಸ್ಸಿನಿಂದ ಲೋಕ ಕಂಟಕರಾದ ದುಷ್ಟರನ್ನು ಸಮೂಲವಾಗಿ ನಾಶಮಾಡುವನು. ಈತನ ಮಹಾ ಪ್ರಭಾವವನ್ನು ದೊಡ್ಡ ದೊಡ್ಡ ದೇವತೆಗಳೂ ದೈತ್ಯರೂ ಗಾನ ಮಾಡುವರು. ಈ ರೀತಿಯಲ್ಲಿ ಈ ಮಹಾನುಭಾವನು ಪೃಥ್ವೀ ಮಂಡಲವನ್ನು ಪಾಲನೆ ಮಾಡುವನು" ಎಂದು ಮುಂತಾಗಿ ಭವಿಷ್ಯ ವಾಣಿಯನ್ನು ನುಡಿಯುತ್ತಾ ಸ್ತೋತ್ರಮಾಡಿದರು.

ಈ ರೀತಿಯಾಗಿ ವಂದಿಮಾಗಧರು ತನ್ನ ಗುಣ ಮತ್ತು ಕರ್ಮಗಳನ್ನು ಹೊಗಳಿ ಸ್ತೋತ್ರಮಾಡಲು ವೇನ ಪುತ್ರನಾದ ಮಹಾರಾಜಾ ಪೃಥುವು ಅವರನ್ನು ಯಥಾಯೋಗ್ಯವಾಗಿ ಧನಾದಿಗಳಿಂದ ಸತ್ಕರಿಸಿದನು. ನಂತರ ಬ್ರಾಹ್ಮಣರೇ ಆದಿಯಾದ ನಾಲ್ಕು ವರ್ಣದವರೂ, ಭೃತ್ಯರೂ, ಅಮಾತ್ಯರೂ, ಪುರೋಹಿತರೂ, ಪುರವಾಸಿಗಳೂ, ದೇಶವಾಸಿಗಳೂ ಮುಂತಾದ ಎಲ್ಲ ಪ್ರಜೆಗಳನ್ನೂ, ಗೂಢಚಾರರೇ ಮುಂತಾದ ಆಪ್ತ ಸೇವಕರನ್ನೂ ಯಥಾಯೋಗ್ಯವಾಗಿ ಸತ್ಕರಿಸಿ ಸಂತೋಷಗೊಳಿಸಿದನು.

ವಿದುರನು ಕೇಳಿದನು:—

ಭಗವನ್, ಬಹುರೂಪ ಧಾರಿಣಿಯಾದ ಭೂಮಿಯು ಗೋರೂಪವನ್ನು ಧಾರಣೆಮಾಡಿದಳೆಂದೂ ಪೃಥುವು ಔಷಧಾದಿಗಳನ್ನು ಕ್ಷೀರದಂತೆ ಕರೆದನೆಂದೂ ಹೇಳಿದಿರಿ. ಅದು ಏತಕ್ಕಾಗಿ ? ಭೂಮಿಯನ್ನು ಗೋವನ್ನಾಗಿ ಮಾಡಿದಾಗ ಕರುವು ಯಾವುದಾಯಿತು ? ಹಾಲನ್ನು ಕರೆಯುವ ಪಾತ್ರೆಯಾಗಿ ಯಾವುದು ಮಾಡಲ್ಪಟ್ಟಿತು ? ಈ ಭೂಮಿಯು ಸ್ವಭಾವತಃ ಎತ್ತರವಾದ ಬೆಟ್ಟಗಳಿಂದಲೂ ತಗ್ಗಾದ ಹಳ್ಳಗಳಿಂದಲೂ ಕೂಡಿದೆ. ಇದನ್ನು ಹೇಗೆ ಸರಿಪಡಿಸಿದನು ? ಇಂದ್ರನು ಪೃಥುವಿನ ಅಶ್ವಮೇಧ ಯಜ್ಞದ ಕುದುರೆಯನ್ನು ಏತಕ್ಕೆ ಅಪಹರಿಸಿದನು ? ರಾಜರ್ಷಿಯಾದ ಪೃಥುವು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಸನತ್ಕುಮಾರನಿಂದ ಆತ್ಮ ಸಂಬಂಧವಾದ ಜ್ಞಾನವನ್ನೂ ಮಾಯಾಸಂಬಂಧವಾದ ಸಂಸಾರದ ಸ್ವರೂಪ ಜ್ಞಾನವನ್ನೂ ತಿಳಿದ ನಂತರ ಯಾವ ಗತಿಯನ್ನು ಹೊಂದಿದನು ? ಸುಂದರ ಕೀರ್ತಿಯುಳ್ಳ ಭಗವಾನ್ ಹರಿಯು ಪೃಥುವಿನ ಅವತಾರಮಾಡಿದಾಗ ಏನೇನು ಮಾಡಿದನು ಎಂಬ ಪವಿತ್ರ ಕಥೆಯನ್ನು ನನ್ನಲ್ಲಿ ಅನುಗ್ರಹಮಾಡಿ

ದಯೆಯಿಟ್ಟು ತಿಳಿಸುವ ಕೃಪೆಮಾಡಬೇಕು. ನನಗೂ ಈ ಪರಮಾತ್ಮನ ಸಂಬಂಧವಾದ ಕಥೆಯನ್ನು ಕೇಳುವುದರಲ್ಲಿ ಶ್ರದ್ಧೆಯಿದೆ. ತಾವೂ ಸಹ ಪರಮ ಭಕ್ತರು. ಆದುದರಿಂದ ಪರಮಾತ್ಮನು ವೇನ ಪುತ್ರ ನಾಗಿ ಪೃಥ್ವಿಯಿಂದ ಹಾಲನ್ನು ಕರೆದ ಕಥೆಯನ್ನೆಲ್ಲಾ ನನಗೆ ತಿಳಿಸುವ ಕೃಪೆಮಾಡಬೇಕು.

ಸೂತರು ಹೇಳುತ್ತಾರೆ:—

ಎಲೈ ಶೌನಕರೇ ! ಹೀಗೆ ವಾಸುದೇವನ ಕಥೆಯನ್ನು ಹೇಳಲು ವಿದುರನಿಂದ ಪ್ರೇರಣೆಯಾದ ನಂತರ ಮೈತ್ರೇಯರು ಬಹಳ ಪ್ರಸನ್ನ ರಾಗಿ ವಿದುರನಿಗೆ ಹೇಳಲಾರಂಭಿಸಿದರು:—

ಎಲೈ ವಿದುರನೇ, ಬ್ರಾಹ್ಮಣರು "ನೀನು ಪ್ರಜಾಪಾಲನೆ ಮಾಡುವ ರಾಜನಾಗಿದ್ದೀಯೆ" ಎಂದು ಹೇಳುತ್ತಾ ಪೃಥುವಿಗೆ ರಾಜ್ಯಾಭಿಷೇಕವನ್ನು ಮಾಡಿದರು. ಆಗ ಪೃಥ್ವಿಯಲ್ಲಿ ಯಾವ ಬೀಜ ವನ್ನು ಬಿತ್ತಿದರೂ ಅದು ಭೂಮಿಯಲ್ಲಿ ಲಯವಾಗಿ ಹೋಗುತ್ತಿತ್ತು. ಆಹಾರ ಧಾನ್ಯಗಳ ಅಭಾವದಿಂದ ಪೃಥ್ವೀ ಮಂಡಲದಲ್ಲಿ ಬಹಳ ದೊಡ್ಡ ಕ್ಷಾಮವು ಪ್ರಾರಂಭವಾಯಿತು. ಹಸಿವಿನಿಂದ ಕಂಗೆಟ್ಟು ದುಃಖಿಸುತ್ತಿದ್ದ ಪ್ರಜೆಗಳು ಪೃಥುವಿನ ಸಮೀಪಕ್ಕೆ ಹೋಗಿ "ಮಹಾರಾಜಾ, ವೃಕ್ಷವು ತನ್ನ ಹೊಟ್ಟೆಯೊಳಗೆ ಹುಟ್ಟಿದ ಬೆಂಕಿ ಯಿಂದಲೇ ಹೇಗೆ ಉರಿಯುವುದೋ ಹಾಗೆಯೇ ನಾವು ಆಹಾರಾದಿ ಗಳಿಲ್ಲದೆ ಹಸಿವಿನ ಜ್ವಾಲೆಯಿಂದ ಬೆಂದುಹೋಗುತ್ತಿದ್ದೇವೆ. ನೀನು ಶರಣಾಗತರಕ್ಷಕನಾದ, ಅನ್ನದಾತನಾದ ನಮ್ಮ ಪ್ರಭುವಾಗಿದ್ದೀಯೆ. ಆದುದರಿಂದ ನಾವು ನಿನ್ನನ್ನು ಶರಣುಹೊಕ್ಕಿದ್ದೇವೆ. ನಾವು ಆಹಾರ ವಿಲ್ಲದೆ ಮರಣ ಹೊಂದುವುದಕ್ಕೆ ಮುಂಚೆ ಆಹಾರವನ್ನು ಕೊಡುವ

ಕೃಪೆಮಾಡು. ಪ್ರಜೆಗಳ ಜೀವನ ವೃತ್ತಿಯನ್ನು ವಿಧಾನಮಾಡುವ ದೇಶರಕ್ಷಕನೇ, ಲೋಕಪಾಲಕನೇ ನೀನು. ನಮ್ಮನ್ನು ಉದ್ಧರಿಸು" ಎಂದು ಪ್ರಾರ್ಥಿಸಲು ಪ್ರಜೆಗಳ ಕರುಣಾಜನಕವಾದ ಈ ವಿಲಾಪ ವನ್ನು ಕೇಳಿ ಪೃಥುವು ಮುಂದೇನು ಮಾಡಬೇಕೆಂಬುದನ್ನು ಕುರಿತು ಬಹಳ ಹೊತ್ತು ಆಲೋಚಿಸಿದನು. ಪ್ರಜೆಗಳ ದುಃಖಕ್ಕೆ ಕಾರಣವು ಪೃಥುವಿನ ಲಕ್ಷ್ಯಕ್ಕೆ ಬಂದಿತು. "ಭೂಮಿಯು ಔಷಧಿ ಅನ್ನಾದಿ ಗಳ ಬೀಜಗಳನ್ನು ತನ್ನೊಳಗೆ ನುಂಗಿ ಹಾಕುತ್ತಿದೆ. ಆಹಾರವು ಬೆಳೆಯದೆ ಪ್ರಜೆಗಳಿಗೆ ದುಃಖವಾಗಿರುವ ಕಾರಣವೇ ಇದು' ಎಂದು ನಿಶ್ಚಯಿಸಿ ತ್ರಿಪುರಗಳನ್ನು ಸುಡುವುದಕ್ಕಾಗಿ ಕುಪಿತನಾದ ಶಿವನು ಧನುರ್ಬಾಣ ಗಳನ್ನು ಗ್ರಹಣಮಾಡಿದಂತೆ ಪೃಥುವೂ ಸಹ ಭೂಮಿಯ ಮೇಲೆ ಕೋಪಗೊಂಡವನಾಗಿ ಅದನ್ನು ಶಿಕ್ಷಿಸಲು ಧನುರ್ಬಾಣಗಳನ್ನು ಧಾರಣೆ ಮಾಡಿದನು. ಪೃಥ್ವಿಯು ತನ್ನನ್ನು ಹೊಡೆಯಲು ಧನುಸ್ಸಿನಲ್ಲಿ ಬಾಣವನ್ನು ಏರಿಸುತ್ತಿರುವ ಪೃಥುವನ್ನು ನೋಡಿ ಭಯದಿಂದ ಕಂಪಿತಳಾಗಿ ತನ್ನ ಪ್ರಾಣರಕ್ಷಣೆಗಾಗಿ ಗೋರೂಪ ಧಾರಣೆಮಾಡಿ ಬೇಟೆಗಾರನಿಂದ ಕಂಗೆಟ್ಟ ಮೃಗದಂತೆ ಓಡಲಾರಂಭಿಸಿದಳು. ಕ್ರೋಧ ದಿಂದ ಕೆಂಪಾದ ಕಣ್ಣುಗಳುಳ್ಳ ಮಹಾರಾಜ ಪೃಥುವೂ ಸಹ ಧನುಸ್ಸಿ ನಲ್ಲಿ ಸಂಧಾನಮಾಡಿದ ಬಾಣಸಹಿತ ಆ ಭೂಮಿಯ ಹಿಂದೆಯೇ ಅದು ಎಲ್ಲಿ ಹೋದರೆ ಅಲ್ಲಿಯೇ ಬೆನ್ನಟ್ಟಿದನು. ಸ್ವರ್ಗ, ಮರ್ತ್ಯ ಪಾತಾಳಗಳಲ್ಲಿ ಓಡಿ ಓಡಿ ಸಾಕಾಗಿ ಭೂಮಿಯು ತನ್ನನ್ನೇ ಬೆನ್ನಟ್ಟಿ ಬರುತ್ತಿರುವ ಪೃಥುವನ್ನು ನೋಡಿ ಮೃತ್ಯುವನ್ನು ತಪ್ಪಿಸಿಕೊಳ್ಳ ಲಾರದ ಮನುಷ್ಯನಂತೆ ಎದೆಯು ಢಡಢಡನೆ ನಡುಗುತ್ತಿರಲು ಒಂದೆಡೆ ನಿಂತು ರಾಜನನ್ನು ಪ್ರಾರ್ಥಿಸಿದಳು. "ಮಹಾರಾಜ! ರಾಜ ರಾಜೇಶ್ವರ! ಧರ್ಮಜ್ಞ! ಭಕ್ತವತ್ಸಲ! ನನ್ನನ್ನು ಉದ್ಧರಿಸ

ಕಾಪಾಡು. ನಿನ್ನ ಧರ್ಮವು ಶರಣಾಗತರನ್ನು ರಕ್ಷಿಸುವುದೇ ಅಲ್ಲವೆ ? ನಾನೇನೂ ನಿನಗೆ ಅಪರಾಧ ಮಾಡಿಲ್ಲ. ನಿನಗೆ ಕೋಪಬರುವಂತಹ ಅಪರಾಧಮಾಡಲು ಶಕ್ತಿಯೂ ಇಲ್ಲ. ನೀನು ನನ್ನನ್ನು ಹೊಡೆಯಲು ಏಕೆ ಉದ್ಯುಕ್ತನಾಗಿರುವೆ ? ಧರ್ಮಜ್ಞನಾದ ನೀನು ಸ್ತ್ರೀ ಹತ್ಯ ಮಾಡಲು ಏತಕ್ಕೆ ಯತ್ನಿಸುತ್ತಿರುವೆ ? ಅಪರಾಧ ಮಾಡಿದರೂ ಸ್ತ್ರೀಯು ಹತ್ಯಕ್ಕೆ ಯೋಗ್ಯಳಲ್ಲ. ನಿನ್ನಂತಹ ದಯಾಳುವಾದ, ದೀನ ಬಂಧುವಾದ ಮಹಾತ್ಮನು ಸ್ತ್ರೀ ಹತ್ಯದಂತಹ ನಿಂದಿತ ಕಾರ್ಯವನ್ನು ಮಾಡಲು ಏಕೆ ಸಿದ್ಧನಾಗಿರುವೆ ? ಬಲವಾದ ನಾವೆಯು ನೀರಿನ ಮೇಲೆ ನಿಲ್ಲುವಂತೆ ನಾನು ನನ್ನ ಸುತ್ತಲೂ ಇರುವ ಅಖಂಡ ಜಲರಾಶಿಯ ಮೇಲೆ ನಿಂತಿದ್ದೇನೆ. ನನ್ನ ಮೇಲೆ ಸಮಸ್ತ ಚರಾಚರ ಜಗತ್ತೂ ವಾಸಮಾಡುತ್ತದೆ. ನೀನು ನನ್ನನ್ನು ಹೊಡೆದು ಕೊಂದು ಹಾಕಿದರೆ ನಿನ್ನನ್ನೂ ನಿನ್ನ ಪ್ರಜೆಗಳನ್ನೂ ನೀರಿನ ಮೇಲೆ ಹೇಗೆ ನಿಲ್ಲಿಸುವೆ ? ಪೃಥುರಾಜನು ಭೂಮಿಯ ಕರುಣಾಜನಕ ಪ್ರಾರ್ಥನೆಯನ್ನು- ಕೇಳಿದರೂ ಸಹ ಆತನ ಕೋಪವು ಅಡಗಲಿಲ್ಲ. "ಎಲೈ ಭೂಮಿಯೇ ! ನಾನು ಖಂಡಿತವಾಗಿಯೂ ನಿನ್ನನ್ನು ನಾಶ ಮಾಡುತ್ತೇನೆ. ನನ್ನ ಆಜ್ಞೆಯನ್ನು ನೀನು ಉಲ್ಲಂಘಿಸಿದ್ದೀಯೆ. ಯಜ್ಞದಲ್ಲಿ ನಿನ್ನ ಭಾಗವನ್ನು ತೆಗೆದುಕೊಂಡರೂ ಅನ್ನವನ್ನೇಕೆ ಕೊಡುವುದಿಲ್ಲ ? ಗೋರೂಪದಿಂದ ನಿತ್ಯವೂ ಬೀಜರೂಪವಾದ ಹುಲ್ಲನ್ನು ತಿನ್ನುತ್ತೀಯೆ ? ಅನ್ನರೂಪವಾದ ಹಾಲನ್ನು ಕೊಡುತ್ತಿಲ್ಲ. ನೀನು ದುಷ್ಟಳು. ಅಪರಾಧಿಯನ್ನು ಶಿಕ್ಷಿಸಿದರೆ ನಾವು ತಪ್ಪು ಮಾಡಿದಂತಾಗುವುದಿಲ್ಲ. ದುಷ್ಟ ಶಿಕ್ಷಣವೇ ರಾಜನ ಧರ್ಮ. ನಿನ್ನ ಬುದ್ಧಿಯು ಮಂದವಾಗಿದೆ. ಬ್ರಹ್ಮನು ಯಾವ ಔಷಧಿ, ವನಸ್ಪತಿ ಅನ್ನಾದಿಗಳ ಬೀಜವನ್ನು ನಿನ್ನಲ್ಲಿಟ್ಟನೋ ಅದನ್ನು ನೀನು ಹೊಟ್ಟೆ

ಯಲ್ಲಿ ಅಡಗಿಸಿಟ್ಟುಕೊಂಡಿದ್ದೀಯೆ. ಆಹಾರ ಧಾನ್ಯಗಳು ಹುಟ್ಟಲು ಅವಕಾಶಕೊಡುವುದಿಲ್ಲ. ನನ್ನ ಪ್ರಜೆಗಳು ಹಸಿವಿನಿಂದ ಕಂಗೆಟ್ಟು ದುಃಖಿಸುತ್ತಿದ್ದಾರೆ. ನಾನು ನನ್ನ ತೀಕ್ಷ್ಣಬಾಣಗಳಿಂದ ನಿನ್ನ ಶರೀರವನ್ನು ಕತ್ತರಿಸಿ ನಿನ್ನ ಮಾಂಸದಿಂದ ಈ ಕ್ಷಾಮಪೀಡಿತ ರಾದ ಪ್ರಜೆಗಳ ಜಠರಾಗ್ನಿಯನ್ನು ಶಾಂತಗೊಳಿಸುತ್ತೇನೆ. ಪುರುಷ ನಾಗಲೀ, ಸ್ತ್ರೀಯಾಗಲೀ, ನಪುಂಸಕನಾಗಲೀ, ಯಾರೇ ಆಗಲೀ ಯಾವ ಅಧಮನು ತನ್ನ ಹೊಟ್ಟೆಯನ್ನು ಮಾತ್ರ ತುಂಬಿಸಿಕೊಂಡು ಪ್ರಾಣಿಗಳ ಮೇಲೆ ದಯೆಯನ್ನು ಮಾಡುವುದಿಲ್ಲವೋ ಆತನನ್ನು ಕೊಲ್ಲುವುದರಲ್ಲಿ ರಾಜನಿಗೆ ಹತ್ಯೆಯ ಪಾಪವಿಲ್ಲ. ದುಷ್ಟನನ್ನು ಕೊಂದ ಪುಣ್ಯವೇ ಬರುವುದು. ನಿನಗೆ ಬಲು ದೊಡ್ಡ ಗರ್ವವಿದೆ. ಅದರಿಂದ ಅಹಂಕಾರ ಹುಟ್ಟಿದೆ. ಮಾಯೆಯಿಂದ ಗೋರೂಪ ಧಾರಣೆಮಾಡಿ ರುವ ನಿನ್ನನ್ನು ಈ ಬಾಣಗಳಿಂದ ಕತ್ತರಿಸಿಹಾಕಿ ನನ್ನ ಯೋಗ ಬಲದಿಂದ ಪ್ರಜೆಗಳು ನೀರಿನ ಮೇಲೆ ನಿಲ್ಲುವಂತೆ ಮಾಡುವೆನು" ಎಂದು ಗರ್ಜಿಸಲು, ಕರಾಳ ಕಾಲನಂತೆ ಭಯಂಕರವಾದ ಆ ಕ್ರೋಧ ಮಯೀ ಮೂರ್ತಿಯನ್ನು ನೋಡುತ್ತಾ ಪೃಥ್ವಿಯು ನಮ್ರಳಾಗಿ ಪ್ರಾರ್ಥನೆಮಾಡಲಾರಂಭಿಸಿದಳು. "ಎಲೈ ದೇವ ದೇವ! ನೀನು ಸಾಮಾನ್ಯನಲ್ಲ. ಮಾಯೆಯಿಂದ ಅನೇಕ ಶರೀರಗಳನ್ನು ಧರಿಸಿ ಸಗುಣ ಸ್ವರೂಪದಿಂದ ಕಾಣಬರುತ್ತಿರುವ ಪರಮ ಪುರುಷನೇ! ನಿನ್ನನ್ನು ವಂದಿಸುವೆನು. ನೀನು ವಾಸ್ತವವಾಗಿ ನಿರ್ಗುಣ, (ಆನಂದಮಯ ಬ್ರಹ್ಮನ ಅನುಭವ ದ್ವಾರಾ) ದ್ರವ್ಯ (ಪಂಚತತ್ತ್ವ) ಕ್ರಿಯಾ (ಇಂದ್ರಿಯ) ಕಾರಕಗಳ (ಅಧಿಷ್ಠಾತೃ ದೇವತೆ) ಅಹಂಕಾರದಿಂದ ರಹಿತ ನಾಗಿರುವೆ. ನಿನ್ನಲ್ಲಿ ಅಹಂಕಾರದ ತರಂಗಗಳಾದ ಕಾಮ ಕ್ರೋಧಾದಿ ಗಳಿಲ್ಲ. ಯಾವ ಜಗದುತ್ಪತ್ತಿ ಕಾರಣನಾದ ಸೃಷ್ಟಿಕರ್ತನು ನನ್ನನ್ನು

ಸಮಸ್ತ ಪ್ರಾಣಿಗಳ ನಿವಾಸ ಸ್ಥಾನವಾಗಿ ಮಾಡಿದ್ದಾನೆಯೋ ಯಾರ ಆಜ್ಞೆಯಿಂದ ನಾನು ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ರೂಪವಾದ ಜೀವಗಳನ್ನು ನನ್ನ ದೇಹದ ಮೇಲೆ ಧಾರಣೆ ಮಾಡಿದ್ದೇನೆಯೋ ಅದೇ ಸ್ವತಂತ್ರನಾದ ಈಶ್ವರನು ನನ್ನನ್ನು ಹೊಡೆಯಲು ಶಸ್ತ್ರವನ್ನು ಮೇಲೆತ್ತಿರುವಾಗ ನಾನು ಯಾರನ್ನು ಶರಣು ಹೋಗಲಿ ? ಯಾವ ಧರ್ಮಪರಾಯಣನಾದ ಪರಮೇಶ್ವರನು ತನ್ನ ವಿಶ್ವವ್ಯಾಪೀ ಅಗಮ್ಯಮಾಯೆಯಿಂದ ಈ ಚರಾಚರ ವಿಶ್ವವನ್ನು ಉತ್ಪತ್ತಿಮಾಡಿದ್ದಾನೆಯೋ ಮತ್ತು ಅದೇ ಮಾಯೆಯಿಂದ ಇದನ್ನು ರಕ್ಷಿಸುತ್ತಿರುವನೋ ಆ ಈಶ್ವರನೇ ನನ್ನನ್ನು ಕೊಲ್ಲಲು ಏಕೆ ಉದ್ಯುಕ್ತನಾಗಿದ್ದಾನೆ ? ದುರ್ಜಯ ಮಾಯೆಯಿಂದ ಮೋಹಿತರಾದ ಜನಗಳು ಈಶ್ವರನ ಇಚ್ಛೆಯನ್ನು ತಿಳಿಯಲಾರರು. ಆತನು ಒಬ್ಬನೇ ಆದರೂ ಮಾಯೆಯ ಸಂಯೋಗದಿಂದ ಅ ನೇ ೯ ಕ ವಾ ಗಿ ಕಾಣುತ್ತಿರುವನು. ಆತನು ತಾನೇ ಸೃಷ್ಟಿ ಕರ್ತನಾದ ಬ್ರಹ್ಮನನ್ನು ಉತ್ಪನ್ನಮಾಡಿ ಆತನಿಂದ ಈ ಚರಾಚರ ಸೃಷ್ಟಿಯನ್ನು ಮಾಡಿಸಿದ್ದಾನೆ. ಪಂಚತತ್ತ್ವ, ಇಂದ್ರಿಯಾಧಿಷ್ಠಾತೃಗಳಾದ ದೇವತೆಗಳು, ಬುದ್ಧಿ ಅಹಂಕಾರ ಮುಂತಾದ ವಿವಿಧ ಶಕ್ತಿ, ಇವುಗಳಿಂದ ಈ ವಿಶ್ವದ ಉತ್ಪತ್ತಿ ಸ್ಥಿತಿ ಲಯಗಳನ್ನು ಮಾಡುತ್ತಿರುವ, ಪರಸ್ಪರ ವಿರುದ್ಧ ಶಕ್ತಿಗಳ ವಿಧಾತೃವಾದ ಪರಮ ಪುರುಷನಿಗೆ ವಂದಿಸುತ್ತೇನೆ. ಎಲೈ ಜನ್ಮರಹಿತನೇ ! ನೀ ೯ ನು ನಿನ್ನಿಂದಲೇ ಸೃಷ್ಟವಾದ ಪಂಚತತ್ತ್ವ, ಇಂದ್ರಿಯ, ಅಂತಃಕರಣ ಸ್ವರೂಪವಾದ ಈ ವಿಶ್ವವನ್ನು ಸ್ಥಿರವಾಗಿ ಸ್ಥಾಪನೆಮಾಡಲು ಆದಿ ವರಾಹಾವತಾರವನ್ನು ಧಾರಣೆಮಾಡಿ ರಸಾತಲದ ಜಲದಿಂದ ನನ್ನನ್ನು ಮೇಲಕ್ಕೆ ತಂದಿರುವೆ ಅದೇ ಗದಾ ಧಾರಿಯಾದ ನೀನು ಪೃಥು ರೂಪವಾದ ವೀರ ಮೂರ್ತಿಯಾಗಿ ಜಲದ ಮೇಲೆ ನಾವೆಯಂತೆ

ಸ್ಥಿರವಾಗಿ ನಿಂತಿರುವ ನನ್ನನ್ನು ಕೊಲ್ಲಲು ಉದ್ಯುಕ್ತನಾಗಿರುವೆ. ಈಶ್ವರನ ಮಾಯೆಯಿಂದ ಮೋಹಿತವಾಗಿರುವ ನನ್ನಂತಹ ಅಜ್ಞಾನಿಗಳು ನಿನ್ನ ಕಾರ್ಯಗಳ ಸ್ವರೂಪವನ್ನೇನು ತಿಳಿಯಬಲ್ಲರು? ಈಶ್ವರನ ಭಕ್ತರ ಮಹಿಮೆಯನ್ನು ಸಹಾ ನಮ್ಮಂತಹವರು ತಿಳಿಯಲಾರೆವು. ದೇವ! ಜಿತೇಂದ್ರಿಯರಾದ ಸಾಧುಗಳ ಯಶಸ್ಸನ್ನು ಪ್ರಸಾರಮಾಡುವ ನಿನ್ನ ಭಕ್ತರಿಗೂ ಕೂಡ ನಾನು ಶರಣು ಹೋಗುತ್ತೇನೆ" ಎಂದು ಸ್ತೋತ್ರಮಾಡಿ ಕ್ರೋಧದಿಂದ ಉಜ್ವಲ ಕಾಂತಿಯುಳ್ಳ ರಾಜನ ಮುಖವನ್ನು ಪುನಃ ಪುನಃ ನೋಡುತ್ತಾ ಮೆಲ್ಲ ಮೆಲ್ಲಗೆ ಧೈರ್ಯವನ್ನು ತೆಗೆದುಕೊಂಡು ಪುನಃ ಹೇಳಲಾರಂಭಿಸಿದಳು—

"ಪ್ರಭು! ಕ್ರೋಧವನ್ನು ಶಾಂತಿಮಾಡಿಕೊಳ್ಳಿರಿ! ನಾನು ಈಗ ತಮಗೆ ಅರಿಕೆಮಾಡಿಕೊಳ್ಳುವುದನ್ನು ಸಾವಧಾನವಾಗಿ ವಿಚಾರ ಮಾಡಿ ಕರ್ತವ್ಯ ನಿರ್ಣಯಮಾಡಿಕೊಳ್ಳಿರಿ! ಚತುರರಾದ ಪಂಡಿತರು ಭ್ರಮರದಂತೆ ಎಲ್ಲದರಲ್ಲಿಯೂ ಸಾರವನ್ನೇ ಗ್ರಹಣಮಾಡುತ್ತಾರೆ. ತತ್ತ್ವದರ್ಶಿಗಳಾದ ಮುನಿಗಳು ಪ್ರಜೆಗಳಿಗೆ ಇಹಲೋಕದಲ್ಲಿನ ಸುಖಕ್ಕಾಗಿ ವ್ಯವಸಾಯ ಮುಂತಾದ ಉಪಾಯಗಳನ್ನೂ ಪರಲೋಕದಲ್ಲಿನ ಸುಖಕ್ಕಾಗಿ ಅಗ್ನಿಹೋತ್ರಾದಿಗಳನ್ನೂ ಪ್ರಕಟಮಾಡಿ ತಾವೂ ಸ್ವತಃ ಅದನ್ನು ಆಚರಿಸಿ, ತೋರಿಸಿದ್ದಾರೆ. ಅವರಿಂದ ಈಚಿನ ಜನಗಳು ಅವುಗಳಲ್ಲಿ ಶ್ರದ್ಧೆಯಿಟ್ಟು ಚೆನ್ನಾಗಿ ಗ್ರಹಣಮಾಡಿ ಆಚರಿಸಿ ಇಹಪರ ಸುಖಗಳನ್ನು ಹೊಂದಿದ್ದಾರೆ. ಯಾರು ಆ ಉಪಾಯರೂಪಗಳಾದ ಕರ್ಮಗಳಲ್ಲಿ ಶ್ರದ್ಧೆಯನ್ನಿಡದೆ ಅವುಗಳನ್ನು ನಿರ್ಲಕ್ಷ್ಯಮಾಡಿ, ವಿಧಿರಹಿತವಾಗಿ ಕರ್ಮಮಾಡುವವರೋ ಎಂತಹ ಪಂಡಿತರೇ ಆಗಿರಲಿ ಅವರಿಗೆ ಕಾರ್ಯ ಸಿದ್ಧಿಯಾಗುವುದಿಲ್ಲ. ಸೃಷ್ಟಿಯ ಆರಂಭದಲ್ಲಿ

ಬ್ರಹ್ಮನು ಯಾವ ಔಷಧಿಗಳನ್ನು ಸೃಷ್ಟಿಮಾಡಿದನೋ ಅವುಗಳನ್ನು ಈಗ ವ್ರತ ವಿಹೀನರಾದ (ಸದಾಚಾರ ನಿಯಮಗಳನ್ನು ಬಿಟ್ಟವರು) ಅಸಾಧುಗಳು ತಿನ್ನುತ್ತಿರುವುದನ್ನು ನಾನು ನೋಡುತ್ತಿದ್ದೇನೆ. ಜನ ಗಳನ್ನು ರಕ್ಷಿಸುವುದೇ ಕರ್ತವ್ಯವಾಗಿ ಉಳ್ಳ ರಾಜರುಗಳು ನನ್ನನ್ನು ಸರಿಯಾಗಿ ರಕ್ಷಿಸುವುದಿಲ್ಲ ; ಅನಾದರಣೆ ಮಾಡುತ್ತಿದ್ದಾರೆ. ಇವನ್ನು ನೋಡಿ ನಾನು ಈ ಮುಂದೆ ಮಾಡಲ್ಪಡಬೇಕಾದ ಯಜ್ಞಗಳಿಗಾಗಿ ಕಾಪಾಡಿ ಇಡಲು ಅವುಗಳನ್ನು ನನ್ನ ಹೊಟ್ಟೆಯೊಳಗೆ ನುಂಗಿ ಇಟ್ಟು ಕೊಂಡಿದ್ದೇನೆ. ಇವರಲ್ಲಿ ನನ್ನದೇನು ತಪ್ಪು ? ಆ ಔಷಧಿಗಳು ನನ್ನ ಹೊಟ್ಟೆಯಲ್ಲಿ ಬಹುಕಾಲ ಇದ್ದುಬಿಟ್ಟಿರುವುದರಿಂದ ಅವುಗಳು ಕ್ಷೀಣ ಅಥವಾ ಜೀರ್ಣವಾಗಿ ಹೋಗಿರಬಹುದು. ಅದಕ್ಕಾಗಿ ನನ್ನ ಉದರದಿಂದ ಅವುಗಳನ್ನು ಹೊರಕ್ಕೆ ತೆಗೆಯುವ ಉಪಾಯವನ್ನು ಹುಡುಕಿ ಕೊಳ್ಳಬೇಕು. ನನ್ನನ್ನು ಕೊಂದುಹಾಕಿದರೆ ನಿನಗೆ ಬರುವ ಲಾಭವೇನು ? ಎಲೈ ವೀರನೇ ! ನಾನು ನಿನ್ನಿಂದ ಸಂತುಷ್ಟಳಾಗಿ ದ್ದೇನೆ. ಎಲೈ ಪ್ರಜಾರಕ್ಷಕ ! ಮಹಾಪ್ರಭೋ ! ನಿನಗೆ ನನ್ನ ಹೊಟ್ಟೆಯೊಳಗಿರುವ ಔಷಧಿ ವನಸ್ಪತಿಗಳು ಬೇಕೆಂದು ಇಚ್ಛೆಯಿದ್ದರೆ ಗೋರೂಪಿಯಾದ ನನಗೆ ತಕ್ಕ ಕರುವನ್ನೂ, ಹಾಲಿನ ಪಾತ್ರೆ ಯನ್ನೂ, ಅದನ್ನು ಕರೆಯುವವನನ್ನೂ ಸಿದ್ಧಮಾಡಿಕೋ ! ಪ್ರಾಣಿ ಗಳಿಗೆ ಶಕ್ತಿದಾಯಕವಾದ ಅನ್ನವನ್ನು ಕೊಡುವ ಅಮೃತವನ್ನು ನಾನು ಕೊಡಲು ಸಿದ್ಧಳಾಗಿದ್ದೇನೆ. ವರ್ಷಾಕಾಲದಲ್ಲಿ ಸುರಿದ ನೀರು ವರ್ಷದ ಕೊನೆಯವರೆಗೂ ತುಂಬಿ ನನ್ನಲ್ಲಿ ನಿಂತಿರುವಂತೆ ನನ್ನನ್ನು ಸಮತಳವನ್ನಾಗಿ ಮಾಡು. ಪ್ರಭು ನಿನಗೆ ಕಲ್ಯಾಣವಾಗಲಿ ! ” ಎಂದು ಹೇಳಿ ಸುಮ್ಮನಾದಳು.

ರಾಜಾ ಪೃಥುವಿಗೆ ಈ ಮಾತಿನಿಂದ ಬಹಳ ಸಂತೋಷವಾಯಿತು.

ಅವನು ಮನುವನ್ನು ಕರುವನ್ನಾಗಿ ಮಾಡಿ ತಾನೇ ಸ್ವತಃ ತನ್ನ ಕೈಗಳೆಂಬ ಪಾತ್ರೆಯಲ್ಲಿ ಸಂಪೂರ್ಣ ಔಷಧಿಗಳನ್ನೂ ಹಾಲನ್ನು ಕರೆಯುವಂತೆ ಕರೆದುಬಿಟ್ಟನು. ವಿವೇಕಿಗಳು ಹೀಗೆಯೇ ತಮಗೆ ಬೇಕಾದ ಪ್ರತಿಯೊಂದು ಅನುಕೂಲವನ್ನೂ ಎಲ್ಲೆಲ್ಲಿಂದ ಹೇಗೆ ಸಂಗ್ರಹಿಸಬೇಕೋ ಹಾಗೆ ಸಂಗ್ರಹಿಸಿ ಸುಖದ ಮಾರ್ಗವನ್ನು ಹುಡುಕಿ ಕೊಳ್ಳುವರು.

ಪೃಥು ಮಹಾರಾಜನು ತನಗೆ ಬೇಕಾದ ವಸ್ತುಗಳನ್ನು ಗೋ ರೂಪಿಣಿಯಾದ ಪೃಥ್ವಿಯಿಂದ ಕರೆದುಕೊಂಡನಂತರ ಎಲ್ಲರೂ ತಮ ತಮಗೆ ಬೇಕಾದುದನ್ನು ಅದರಂತೆಯೇ ಕರೆದುಕೊಳ್ಳಲಾರಂಭಿಸಿದರು. ಋಷಿಗಳು ಬೃಹಸ್ಪತಿಯನ್ನು ಕರುವನ್ನಾಗಿ ಮಾಡಿ ಇಂದ್ರಿಯ ರೂಪ ಪಾತ್ರೆಯಲ್ಲಿ ವೇದರೂಪವಾದ ದುಗ್ಧವನ್ನು (ಹಾಲನ್ನು) ಕರೆದರು. ದೇವಗಣಗಳು ಇಂದ್ರನನ್ನು ಕರುವನ್ನಾಗಿ ಮಾಡಿ ಸುವರ್ಣ ಪಾತ್ರೆ ಯಲ್ಲಿ ಅಮೃತ, ವೀರ್ಯ, (ಮಾನಸಿಕ ಶಕ್ತಿ) ಓಜಸ್ಸು, (ಇಂದ್ರಿಯ ಶಕ್ತಿ) ಬಲ, (ಶಾರೀರಿಕ ಶಕ್ತಿ) ಗಳ ರೂಪವಾದ ಹಾಲನ್ನು ಕರೆದು ಕೊಂಡರು. ದೈತ್ಯ ದಾನವರು ಪ್ರಹ್ಲಾದನನ್ನು ಕರುವನ್ನಾಗಿ ಮಾಡಿ ಕಬ್ಬಿಣದ ಪಾತ್ರೆಯಲ್ಲಿ ಸುರಾ, ಆಸವ (ಮದ್ಯ ಮುಂತಾದ ಭಟ್ಟಿ ಇಳಿಸಿದ ರಸಗಳು) ಗಳನ್ನು ಕರೆದರು. ಗಂಧರ್ವರೂ, ಅಪ್ಸರೆಯರೂ ವಿಶ್ವಾವಸುವನ್ನು ಕರುವನ್ನಾಗಿ ಮಾಡಿ ಪದ್ಮಮಯ ಪಾತ್ರೆಯಲ್ಲಿ ಗಾಂಧರ್ವ ವಿದ್ಯೆಯನ್ನೂ, ಮಾತಿನ ಮಾಧುರ್ಯವನ್ನೂ, ಸುಂದರ ರೂಪ ವನ್ನೂ ದುಗ್ಧರೂಪದಿಂದ ಕರೆದರು. ಶ್ರಾದ್ಧ ದೇವತೆಗಳಾದ ಪಿತೃ ಗಳು ಶ್ರದ್ಧಾಪೂರ್ವಕವಾಗಿ ಅರ್ಯಮಣನನ್ನು ಕರುವನ್ನಾಗಿ ಮಾಡಿ ಹಸೀ ಮಣ್ಣಿನ ಪಾತ್ರೆಯಲ್ಲಿ ಕವ್ಯ (ಶ್ರಾದ್ಧಾನ್ನ) ರೂಪ ಹಾಲನ್ನು ಕರೆದರು. ಸಿದ್ಧ ವಿದ್ಯಾಧರರು ಕಪಿಲದೇವನನ್ನು ಕರುವನ್ನಾಗಿ ಮಾಡಿ ಆಕಾಶ

ರೂಪ ಪಾತ್ರೆಯಲ್ಲಿ ಅಣಿಮಾದಿ ಯೋಗಸಿದ್ಧಿಗಳನ್ನು ಕರೆದರು. ಕಿಂಪುರುಷರಾದಿಯಾದ ಮಾಯಾವಿಗಳು ಮಯಾಸುರನನ್ನು ಕರುವನ್ನಾಗಿ ಮಾಡಿ ಆಕಾಶರೂಪೀ ಪಾತ್ರೆಯಲ್ಲಿ ವಿವಿಧ ಮಾಯಾ* ವಿದ್ಯೆಗಳನ್ನು ಕರೆದರು. ಯಕ್ಷ, ರಾಕ್ಷಸ, ಭೂತ, ಪ್ರೇತ, ಪಿಶಾಚಾದಿ ಮಾಂಸಾಹಾರಿಗಳು ರುದ್ರನನ್ನು ಕರುವನ್ನಾಗಿ ಮಾಡಿ ನರಕಪಾಲ ರೂಪ ಪಾತ್ರೆಯಲ್ಲಿ ರುಧಿರ (ರಕ್ತರೂಪ) ಆಸವವನ್ನು ಕರೆದುಕೊಂಡರು. ಅಹಿ (ಹೆಡೆಯಿಲ್ಲದ ಸರ್ಪಗಳು) ದಂದಶೂಕ (ಚೇಳು ಮುಂತಾದ ವಿಷ ಪ್ರಾಣಿಗಳು) ಸರ್ಪ (ಹೆಡೆಯುಳ್ಳ ಸರ್ಪಗಳು) ನಾಗ (ಅಜಗರ) ಮುಂತಾದುವುಗಳು ತಕ್ಷಕನನ್ನು ಕರುವನ್ನಾಗಿ ಮಾಡಿಕೊಂಡು ಬಿಲ ರೂಪ ಪಾತ್ರೆಯಲ್ಲಿ (ಬಾಯಿ) ವಿಷರೂಪ ದುಗ್ಧವನ್ನು ಕರೆದುಕೊಂಡರು. ಎಲ್ಲಾ ಪಶುಗಳೂ ಶಿವನ ವಾಹನವಾದ ನಂದಿಯನ್ನು (ಎತ್ತು) ಕರುವನ್ನಾಗಿ ಮಾಡಿಕೊಂಡು ವನರೂಪ ಪಾತ್ರೆಯಲ್ಲಿ ಹುಲ್ಲಿನ ರೂಪವಾದ (ಮೇವು) ದುಗ್ಧವನ್ನು ಕರೆದುಕೊಂಡವು. ಮಾಂಸಾಹಾರೀ ಪಶುಗಳು ಸಿಂಹವನ್ನು ಕರುವನ್ನಾಗಿ ಮಾಡಿಕೊಂಡು ತಮ್ಮ ತಮ್ಮ ದೇಹರೂಪವಾದ ಪಾತ್ರೆಯಲ್ಲಿ ಮಾಂಸರೂಪವಾದ ಹಾಲನ್ನು ಕರೆದವು. ಪಕ್ಷಿಗಳು ಗರುಡನನ್ನು ಕರುವನ್ನಾಗಿ ಮಾಡಿಕೊಂಡು ವನರೂಪ ಪಾತ್ರೆಯಲ್ಲಿ ಹುಳು ಹುಪ್ಪಟೆ ಫಲ ಮುಂತಾದ ದುಗ್ಧವನ್ನು ಕರೆದುಕೊಂಡವು. ಸಕಲ ವೃಕ್ಷಗಳೂ ವಟವನ್ನು (ಆಲ) ಕರುವನ್ನಾಗಿ ಮಾಡಿಕೊಂಡು ವನರೂಪ ಪಾತ್ರೆಯಲ್ಲಿ ಭಿನ್ನ ಭಿನ್ನ ರಸಮಯ ದುಗ್ಧವನ್ನು ಕರೆದವು.

---

* ಸಂಕಲ್ಪ ಮಾಡುತ್ತಿರುವಂತೆಯೇ ಮಾಯೆಗಳು ಪ್ರಕಟವಾಗುತ್ತವೆ. ದೃಷ್ಟಿಗೋಚರವಾಗದೆ ಸಂಚರಿಸುವ ಮತ್ತು ಅದ್ಭುತ ಶಕ್ತಿಗಳುಳ್ಳ ಪ್ರಾಣಿಗಳಿಗೆಲ್ಲಾ ಮಾಯಾ ವಿದ್ಯೆಯೇ ಸಂಪತ್ತು.

ಪರ್ವತಗಳು ಹಿಮವಂತನನ್ನು ಕರುವನ್ನಾಗಿ ಮಾಡಿಕೊಂಡು ತಮ್ಮ ತಮ್ಮ ಶಿಖರರೂಪ ಪಾತ್ರೆಯಲ್ಲಿ ಧಾತುಗಳನ್ನು ಕರೆದು ಕೊಂಡವು. ಎಲ್ಲರೂ ತಂತಮ್ಮ ಗುಂಪಿನಲ್ಲಿ ಮುಖ್ಯವಾದ ವಸ್ತು ವನ್ನು ಆರಿಸಿಕೊಂಡು ಅದರ ಮೂಲಕ ತಂತಮ್ಮ ಪಾತ್ರೆಗಳಲ್ಲಿ ಪೃಥುವಿನಿಂದ ಕರೆಯಲ್ಪಟ್ಟ ಗೋರೂಪೀ ಪೃಥ್ವಿಯಲ್ಲಿ ತಮತಮಗೆ ಬೇಕಾದ ವಸ್ತುಗಳನ್ನು ಕರೆದುಕೊಂಡರು. ಹೀಗೆ ಅನ್ನಾದಿಗಳನ್ನು ತಿಂದು ಜೀವಿಸುವ ಪೃಥುಮುಂತಾದ ಸಮಸ್ತರೂ ತಂತಮ್ಮ ಅವಶ್ಯ ಕತೆಗೆ ಅನುಸಾರವಾಗಿ ತಮತಮಗೆ ಬೇಕಾದ ಪಾತ್ರೆಗಳನ್ನೂ ಕರು ಗಳನ್ನೂ ಸಿದ್ಧಮಾಡಿಕೊಂಡು ಗೋರೂಪಿಯಾದ ಪೃಥ್ವಿಯಿಂದ ಆಹಾರರೂಪ ಇಷ್ಟಾರ್ಥಗಳನ್ನು ಪಡೆದನಂತರ ಮಹಾರಾಜಾಪೃಥುವು ಗೋರೂಪಧಾರಿಣಿಯಾದ ಪೃಥ್ವಿಯನ್ನು ಸ್ವಂತ ಮಗಳೆಂದು ಭಾವಿಸಿ ದುದರಿಂದ ಈ ಭೂಮಿಗೆ ಪೃಥ್ವಿಯೆಂದೇ ಹೆಸರಾಯಿತು. ಸಮರ್ಥ ನಾದ ಪೃಥುಚಕ್ರವರ್ತಿಯು ತನ್ನ ಧನುಸ್ಸಿನ ಕೊನೆಯಿಂದ ಬೆಟ್ಟ ಗಳ ಕೋಡುಗಳನ್ನು ಒಡೆದುಹಾಕಿ ಹಳ್ಳತಿಟ್ಟುಗಳನ್ನು ಸರಿಮಾಡಿ ಭೂಮಿಯನ್ನು ಸಮತಳವನ್ನಾಗಿ ಮಾಡಿದನು. ಪ್ರಜೆಗಳನ್ನು ದೇಶದ ಅವಶ್ಯಕತೆಗೆ ತಕ್ಕಂತೆ ಗ್ರಾಮ, ಪುರ, ಪಟ್ಟಣ, ದುರ್ಗ, (ಕೋಟೆ) ಘೋಷ, (ಗೊಲ್ಲರಹಟ್ಟಿ) ವ್ರಜ, (ಗೋವುಗಳೂ ಅವುಗಳನ್ನು ಕಾಯು ವವರೂ ವಾಸಮಾಡುವ ಸ್ಥಳ) ಶಿಬಿರ, (ಸೇನೆಗಳು ಇರುವ ಸ್ಥಳ) ಆಕರ, (ಧನಾಗಾರ) ಖೇಟ, (ವ್ಯವಸಾಯಗಾರರ ವಾಸಸ್ಥಾನ) ಖರ್ವಟ (ಬೆಟ್ಟದ ಬುಡದ ಹಳ್ಳಿ) ಮುಂತಾದ ಸ್ಥಳಗಳನ್ನು ನಿಯಮಿಸಿ ರಾಜ್ಯವನ್ನು ಕ್ರಮಪಡಿಸಿದನು. (ಈ ಮುಂಚೆ ಇಂತಹ ವ್ಯವಸ್ಥೆ ಯಿರಲಿಲ್ಲ. ಜನಗಳು ಬೇಕಾದೆಡೆಯಲ್ಲಿ ನಿರ್ಭಯವಾಗಿರುತ್ತಿದ್ದರು.)

ಎಲೈ ವಿದುರನೆ! ಯಾವ †ಬ್ರಹ್ಮಾವರ್ತವೆಂಬ ಸ್ಥಾನದಲ್ಲಿ ಪೂರ್ವವಾಹಿನಿಯಾದ ಸರಸ್ವತೀ ನದಿಯು ಹರಿಯುತ್ತಿದೆಯೋ, ಎಲ್ಲಿ ಮನುವಿನ ರಾಜ್ಯವಿದ್ದಿತೋ ಆ ಪವಿತ್ರ ಸ್ಥಾನದಲ್ಲಿ ರಾಜರ್ಷಿ ಯಾದ ಪೃಥುವು ಒಂದು ನೂರು ಯಜ್ಞಗಳನ್ನು ಮಾಡುವ ಸಂಕಲ್ಪ ಮಾಡಿದನು. 'ಶತಕ್ರತುವಾದ ಇಂದ್ರನಿಗೆ ಇದರಿಂದ ಅಸೂಯೆಯು ಹುಟ್ಟಿತು. ತನ್ನ ಕೀರ್ತಿಗಿಂತಲೂ ಪೃಥುಮಹಾರಾಜನ ಕೀರ್ತಿಯು ಹೆಚ್ಚುತ್ತಿರುವುದನ್ನು ನೋಡಿದೊಡನೆಯೇ ಅವನ ಅಂತಃಕರಣದಲ್ಲಿ ಹುಟ್ಟಿದ ಅಸೂಯೆಯಿಂದ ತೊಂಬತ್ತೊಂಬತ್ತು ಯಜ್ಞಗಳನ್ನು ಪೂರ್ತಿಮಾಡಿ ಒಂದು ನೂರನೇ ಯಜ್ಞಕ್ಕೆ ದೀಕ್ಷಿತನಾಗಿ ಕುಳಿತಿರುವ ರಾಜನ ಯಜ್ಞಶಾಲೆಯಿಂದ ದೀಕ್ಷಾಪಶುವಾದ ಕುದುರೆಯನ್ನು ಪಾಖಂಡವೇಷದಿಂದ ಉಪಾಯವಾಗಿ ಕದ್ದುಕೊಂಡು ಆಕಾಶಮಾರ್ಗ ದಲ್ಲಿ ಹೋಗುತ್ತಿರುವಾಗ ಆಚಾರ್ಯನಾದ ಅತ್ರಿಋಷಿಯು ಇಂದ್ರನನ್ನು ಕೊಂದು ಕುದುರೆಯನ್ನು ಹಿಂದಕ್ಕೆತರಬೇಕೆಂದು ಪೃಥುವಿನ ಪುತ್ರ ನಿಗೆ ಆಜ್ಞೆಮಾಡಿದನು. ಅವನನ್ನು ಅಟ್ಟಿಸಿಕೊಂಡು ಆಕಾಶಮಾರ್ಗ ದಲ್ಲಿ ಹೋಗುತ್ತಿರುವಾಗ ಇಂದ್ರನು ತನ್ನ ಸ್ವರೂಪವನ್ನು ಬಿಟ್ಟು ಜಟಾಧಾರಿಯಾದ ಪಾಖಂಡವೇಷವನ್ನು ಧಾರಣೆಮಾಡಿದನು. ರಾಜ ಕುಮಾರನಿಗೆ ಆ ವೇಷವನ್ನು ನೋಡಿ ಇವನನ್ನು ಕೊಲ್ಲಬೇಕೋ ಬೇಡವೋ ಎಂಬ ಸಂಶಯಬರಲು ಅತ್ರಿಋಷಿಯು ಅವನನ್ನು ಇಂದ್ರವಧಕ್ಕಾಗಿ ಪ್ರೇರೇಪಿಸಿದನು. ಇದರಿಂದ ಭಯಭೀತನಾದ

---

† ಸರಸ್ವತೀ ದೃಷದ್ವತ್ಯೋಃ ದೇವನದ್ಯೋಃ ಯದಂತರಂ ।
ತಂ ದೇವ ನಿರ್ಮಿತಂ ಕ್ಷೇತ್ರಂ ಬ್ರಹ್ಮಾವರ್ತಂ ಪ್ರಚಕ್ಷತೇ ॥

ಸರಸ್ವತೀ ಮತ್ತು ದೃಷದ್ವತೀ ನದಿಗಳ ಮಧ್ಯೆ ಇರುವ ಪುಣ್ಯಭೂಮಿಯೇ ಬ್ರಹ್ಮಾವರ್ತವು. ಇದು ದೇವ ನಿರ್ಮಿತವಾದುದು. ಬಹಳ ಪವಿತ್ರವಾದುದು.

ಇಂದ್ರನು ಕುದುರೆಯನ್ನೂ ಆ ರೂಪವನ್ನೂ ಅಲ್ಲಿಯೇ ಬಿಟ್ಟು ಅದೃಶ್ಯನಾದನು. ಆ ಎರಡನ್ನೂ ತೆಗೆದುಕೊಂಡು ರಾಜಕುಮಾರನು ಯಜ್ಞಮಂಟಪಕ್ಕೆ ಬರಲು ಇಂದ್ರನನ್ನು ಜಯಿಸಿದ ಅವನಿಗೆ "ವಿಜಿತಾಶ್ವ" ಎಂಬ ಬಿರುದನ್ನು ಕೊಟ್ಟರು. ಇನ್ನೇನು ಯಜ್ಞವನ್ನು ಪ್ರಾರಂಭಿಸಬೇಕೆನ್ನುವಷ್ಟರಲ್ಲಿ ಇಂದ್ರನು ಮಾಯೆಯಿಂದ ಗಾಢಾಂಧಕಾರವನ್ನು ಕವಿಯುವಂತೆ ಮಾಡಿ ಪುನಃ ಕುದುರೆಯನ್ನು ಅಪಹರಿಸಿ ಅದೃಶ್ಯನಾಗಿ ಬಿಟ್ಟನು. ಯಜ್ಞದೀಕ್ಷಿತನಾದ ಪೃಥುವಿಗೆ ಇಂದ್ರನ ಮೇಲೆ ಬಹಳ ಕೋಪ ಬಂದು ಆತನನ್ನು ವಧಿಸಲು ತಾನೂ ಸಹ ಧನುರ್ಬಾಣಗಳನ್ನು ಹಿಡಿದನು. ಋಷಿಗಳು ಇದನ್ನು ನೋಡಿ ಯಜ್ಞದಲ್ಲಿ ದೀಕ್ಷಿತನಾಗಿ ನಿಂತವನು ಯಜ್ಞಪಶುವನ್ನಲ್ಲದೆ ಮತ್ತೇನನ್ನೂ ಕೊಲ್ಲಬಾರದೆಂದೂ, ಅಸೂಯಾಪರನಾದ ಇಂದ್ರನನ್ನು ತಾವೇ ತಮ್ಮ ಮಂತ್ರಬಲದಿಂದ ಯಜ್ಞಮಂಟಪಕ್ಕೆ ಎಳೆದುತಂದು ಆಹುತಿಯಾಗಿ ಕೊಡಬಲ್ಲೆವೆಂದೂ ಹೇಳಿ ಅವನ ಕೋಪವನ್ನು ಶಮನ ಮಾಡಿದರು. ಋತ್ವಿಜರಾದ ಋಷಿಗಳು ಹೀಗೆ ಇಂದ್ರನನ್ನೇ ಆಹುತಿಯಾಗಿ ಕೊಡಲು ಕೈಗಳಲ್ಲಿ ಸ್ರುವವನ್ನು ಹಿಡಿದು ನಿಲ್ಲಲು ಪಿತಾಮಹನಾದ ಬ್ರಹ್ಮನು ಅಲ್ಲಿಗೆ ಬಂದು ಅವರನ್ನು ತಡೆದನು.

"ಎಲೈ ಋಷಿಗಳಿರಾ! ನೀವು ಮಾಡುತ್ತಿರುವುದು ಸರಿಯಲ್ಲ. ಇಂದ್ರನನ್ನೇ ಹೋಮಮಾಡುವ ಕಾರ್ಯವನ್ನು ನಿಲ್ಲಿಸಿ" ಎಂದು ಬ್ರಾಹ್ಮಣರಿಗೆ ಹೇಳಿ ಪೃಥುವಿನ ಕಡೆಗೆ ತಿರುಗಿ "ಎಲೈ ರಾಜನೇ! ನೀನು ಇಂದ್ರನೊಡನೆ ದ್ವೇಷಬುದ್ಧಿಯನ್ನು ಮಾಡಬೇಡ. ಆತನು ಮಾಡಿದುದು ತಪ್ಪು ನಿಜ. ಪರರ ಉತ್ಕರ್ಷವನ್ನು ತಡೆಯದಿರುವುದು ಇಂದ್ರನ ಸ್ವಭಾವ. ಅದು ಅವನ ಕೀಳು ಮನೋಭಾವವನ್ನು ತೋರಿಸುತ್ತದೆ. ಇದರಿಂದ ನಿನ್ನ ಕೀರ್ತಿಯು ಹೆಚ್ಚುವುದು.

ಈ ಇಂದ್ರನಾದರೋ ಋಚಿ ಪ್ರಜಾಪತಿಗೆ ಆಕೂತಿಯಲ್ಲಿ ಹುಟ್ಟಿದವನು. ಶ್ರೀಹರಿಯ ಏಳನೆಯ ಅವತಾರವು. ನೀನೂ ಸಹ ಸನಾತನ ಧರ್ಮವನ್ನು ಉದ್ಧಾರಮಾಡುವುದಕ್ಕಾಗಿ ವೇನನ ದೇಹದಿಂದ ಉತ್ಪನ್ನನಾಗಿರುವ ಶ್ರೀಹರಿಯ ಅಂಶಾವತಾರವೇ. ಆದುದರಿಂದ ನೀವಿಬ್ಬರೂ ಪರಸ್ಪರ ಕ್ರೋಧದಿಂದ ಸಿಡಿಯುವುದು ಲೋಕಕ್ಕೆ ಶ್ರೇಯಸ್ಕರವಲ್ಲ. ದೇವತೆಯಾದ ಮಾತ್ರಕ್ಕೆ ಇಂದ್ರನು ದೊಡ್ಡವನಲ್ಲ. ಇಂದ್ರಪದವಿಗಿಂತಲೂ ಹೆಚ್ಚಿನದು ಮೋಕ್ಷ. ಸ್ವರ್ಗಕಾಮನಾಯುಕ್ತವಾದ ಅಶ್ವಮೇಧವು ಮೋಕ್ಷ ಸಾಮ್ರಾಜ್ಯಕ್ಕಿಂತ ಬಲು ಕೀಳು ಮಟ್ಟದ ಸ್ಥಾನವು. ಅವಕ್ಕೆ ನೀನು ಆಶೆಪಡಬೇಡ. ಯಜ್ಞದಲ್ಲಿ ವಿಘ್ನವಾಯಿತೆಂದು ದುಃಖಪಡುವ ಕಾರಣವಿಲ್ಲ, ದೈವಯೋಗದಿಂದ ಬಂದಿರುವ ಈ ವಿಘ್ನದಲ್ಲಿ ಪರಮಾತ್ಮ ಪ್ರೇರಣೆಯು ಇದೆ. ನಿನಗೆ ಇದಕ್ಕಿಂತಲೂ ಹೆಚ್ಚಿನ ಗತಿಯನ್ನು ಕೊಡುವ ಭಗವದನುಗ್ರಹವಿದೆ. ಇಂದ್ರನು ನಿನ್ನೊಡನೆ ಅಸೂಯೆಪಟ್ಟು ನಿನ್ನ ಯಜ್ಞಕ್ಕೆ ವಿಘ್ನವನ್ನುಂಟುಮಾಡಿದ್ದಾಗ, ಅಂತಹ ಅಸೂಯಾರೂಪವಾದ ದೋಷವನ್ನು ತುಳಿದು ಹಾಕಿ, ಶಾಂತಿಯಿಂದ ನಿನ್ನ ಅಂತಃಕರಣವನ್ನು ಶುದ್ಧಮಾಡಿ ಅವನನ್ನು ಕ್ಷಮಿಸು. ಅವನಿಗಿಂತಲೂ ನಿನ್ನ ಕೀರ್ತಿಯು ಸಹಜವಾಗಿಯೇ ವೃದ್ಧಿಯಾಗುವುದು. ಇಂದ್ರನನ್ನು ಅವನ ಆಚರಣೆಗಾಗಿ ಲೋಕವು ದೂಷಿಸುವುದು. ನಿನ್ನನ್ನು ಹೊಗಳುವುದು" ಎಂದು ಮುಂತಾಗಿ ಸಮಾಧಾನಪಡಿಸಲು ರಾಜಾ ಪೃಥುವು ಕ್ರೋಧವನ್ನು ಬಿಟ್ಟು ಯಜ್ಞವನ್ನು ನಿಲ್ಲಿಸಿ ಅವಭೃಥ ಸ್ನಾನಮಾಡಿ, ಸತ್ಯವಾದಿಗಳಾದ ಬ್ರಾಹ್ಮಣರನ್ನೂ, ತನ್ನ ಯಜ್ಞಕ್ಕಾಗಿ ಬಂದಿರುವ ದೇವ, ಋಷಿ, ಪಿತೃ, ಮನುಷ್ಯ ಮುಂತಾದ ಸಮಸ್ತರನ್ನೂ ಯಥಾಯೋಗ್ಯವಾಗಿ ಸತ್ಕರಿಸಿದನು.

ಅಷ್ಟರಲ್ಲಿ ಯಜ್ಞಪತಿಯಾದ ಶ್ರೀಹರಿಯು ಇಂದ್ರಸಹಿತನಾಗಿ ಅಲ್ಲಿಗೆ ಬಂದನು. ಪೃಥುವು ಥಟ್ಟನೆ ಎದ್ದುನಿಂತು ಪೂಜಿಸಿದನು. ಶ್ರೀಹರಿಯು ರಾಜನ ಪೂಜೆಯಿಂದ ಸುಪ್ರೀತನಾಗಿ ಹೇಳಿದನು:—

"ರಾಜಾ! ಇಂದ್ರನು ನಿನ್ನ ನೂರನೇ ಯಜ್ಞವು ಪೂರ್ತಿಯಾಗಲು ವಿಘ್ನವನ್ನು ತಂದೊಡ್ಡಿದುದಕ್ಕಾಗಿ ಬೇಸರಪಡಬೇಡ. ಈಗ ಇಂದ್ರನೇ ತನ್ನ ಅವಿವೇಕಕ್ಕಾಗಿ ಪಶ್ಚಾತ್ತಾಪಪಟ್ಟು ನಿನ್ನ ಕ್ಷಮಾಯಾಚನೆಗಾಗಿ ಬಂದಿದ್ದಾನೆ. ಅವನನ್ನು ಕ್ಷಮಿಸಿ ಅವನೊಡನೆ ಸ್ನೇಹಮಾಡು. ದ್ವೇಷಬುದ್ಧಿಯು ವಿವೇಕಿಗೆ ಸರಿಯಲ್ಲ. ಸ್ವರ್ಗಕ್ಕಿಂತಲೂ ಮೋಕ್ಷವು ಹೆಚ್ಚಿನದು. ಸ್ವರ್ಗದಲ್ಲಿ ಇಚ್ಛಾದ್ವೇಷಗಳಿವೆ. ಆದುದರಿಂದಲ್ಲಿ ಮೋಕ್ಷಕ್ಕೆ ಸಾಧನವಿಲ್ಲ. ಮೋಕ್ಷಸಾಧನೆಗೆ ಮನುಷ್ಯದೇಹವೇ ಸಹಕಾರಿಯಾದುದು. ಆದುದರಿಂದ ಮೋಕ್ಷಸಾಮ್ರಾಜ್ಯಲಕ್ಷ್ಮಿಯನ್ನು ಒಲಿಸಿಕೊಂಡು ಶಾಂತಚಿತ್ತನಾಗಿ ಆತ್ಮಜ್ಞಾನಿಯಾಗು. ಎಲೈ ರಾಜನೆ! ನೀನಾರೆಂಬುದನ್ನು ತಿಳಿದರೆ ದ್ವೇಷರೂಪವಾದ ವಿಕಾರಕ್ಕೆ ನೀನು ಒಳಗಾಗುವುದಿಲ್ಲ. ಮನುಷ್ಯರಲ್ಲಿ ಶ್ರೇಷ್ಠರಾದವರು ಯಾರಲ್ಲಿಯೂ ದ್ವೇಷಮಾಡುವುದಿಲ್ಲ. ನೀನು ಈ ಶರೀರದೊಳಗಿರುವ ಶರೀರಿಯು—ಆತ್ಮನು. ನಿನಗೆ ದ್ವೇಷಿಗಳೂ ಇಲ್ಲ, ಪ್ರಿಯರೂ ಇಲ್ಲ. ನಿನ್ನಂತಹ ವಿವೇಕಿಯೂ ಸಹ ಸಾಮಾನ್ಯ ಮನುಷ್ಯರಂತೆ ದೈವಮಾಯೆಗೆ ಒಳಗಾದರೆ ಗತಿಯೇನು? ತನ್ನ ಸಹಜ ಆನಂದ ಸ್ವರೂಪವನ್ನು ತಿಳಿಯದ ಅವಿದ್ಯೆಯ—ಅಜ್ಞಾನದ ದೆಸೆಯಿಂದ ಕಾಮನೆಯವಶನಾಗಿ ಕರ್ಮಮಾಡುವುದರಿಂದಲೇ ಸಂಸಾರ ಬಂಧನವು—ಶರೀರಪ್ರಾಪ್ತಿಯು ಉಂಟಾಗುವುದು. ಆತ್ಮಜ್ಞಾನಲುಂಟಾದರೆ ದೇಹಾಭಿಮಾನವಿರುವುದಿಲ್ಲ.

ದೇಹಾಭಿಮಾನರಹಿತನಾದ ಪಂಡಿತನು ಈ ದೇಹದಿಂದಲೇ

ಉತ್ಪನ್ನವಾದ ಗೃಹ, ಪುತ್ರ, ಧನ ಆದಿಗಳಲ್ಲಿ ಮಮತ್ವವನ್ನೂ ಅಭಿಮಾನವನ್ನೂ ಹೊಂದುವುದಿಲ್ಲ. ಆತ್ಮನು ದೇಹದಿಂದ ಭಿನ್ನನು. ಸ್ವಯಂಪ್ರಕಾಶಮಾನ ಚೈತನ್ಯನು. ಶುದ್ಧ ನಿರ್ಗುಣನು. ಗುಣಗಳಿಗೆ ಆಧಾರನು. ಸರ್ವವ್ಯಾಪಿಯು. ಅನಾವೃತನು ಅಥವಾ ಸಾಕ್ಷಿಯು. ದೇಹವು ಬಾಲ್ಯ, ಯೌವನ, ವೃದ್ಧಾಪ್ಯ, ಮರಣಗಳಿಂದು ವಿಕಾರಗಳನ್ನು ಹೊಂದುತ್ತದೆ. ಮಲಿನವಾದುದು, ಜಡವಾದುದು ಗುಣಸಹಿತವಾಗಿದೆ. ತನಗೆ ಕಾರಣರೂಪವಾದ ತತ್ತ್ವದ ಆಧಾರದ ಮೇಲೆ ನಿಂತಿರುವುದು. ಗೃಹಾದಿಗಳಿಂದ ಆವೃತವಾದುದು. ದೃಶ್ಯವಾದುದು. ಯಾವಪುರುಷನಿಗೆ ದೇಹದೊಳಗಿರುವ ಆತ್ಮನು, ನಿರ್ಗುಣ ನಿರ್ವಿಕಾರಿಯೆಂದು ಜ್ಞಾನವು ಬಂದಿರುವುದೋ ಆತನು ದೇಹದೊಳಗಿದ್ದರೂ ಅದರ ಗುಣಗಳಿಗೆ ಬದ್ಧನಾಗುವುದಿಲ್ಲ. ಆತ್ಮನಾದ ನನ್ನಲ್ಲಿ ತನ್ಮಯನಾಗುತ್ತಾನೆ. ಯಾವ ವ್ಯಕ್ತಿಯು ನಿಷ್ಕಾಮನಾಗಿ, ಶ್ರದ್ಧಾಪೂರ್ವಕವಾಗಿ ನಿತ್ಯನಾದ ನನ್ನನ್ನು ಭಜಿಸುತ್ತಾನೆಯೋ ಆತನ ಮನಸ್ಸು ಕ್ರಮಕ್ರಮವಾಗಿ ಶುದ್ಧವಾಗುತ್ತದೆ. ಶಾಂತವಾಗುತ್ತದೆ. ಮಾಯೆಯ ಗುಣಗಳಿಂದ ಮುಕ್ತವಾಗಿ ಅಂತಃಕರಣವು ನಿರ್ಮಲವಾಗುತ್ತದೆ. ತತ್ತ್ವಜ್ಞಾನವಾಗುತ್ತದೆ. ಆತನಾಗ ಶಾಂತಿ ಸುಖವನ್ನು ಅನುಭವಿಸುತ್ತಾನೆ. ಈ ಶಾಂತಿಯನ್ನೇ ಕೈವಲ್ಯಧಾಮವೆಂದೂ ಬ್ರಹ್ಮಪದವೆಂದೂ ಹೇಳುತ್ತಾರೆ. ಸುಖದುಃಖಗಳಿಲ್ಲದ ಉದಾಸೀನ ಸ್ಥಿತಿಯೇ ಯಥಾರ್ಥ ಶಾಂತಿಯೆಂದೂ ಹೇಳಲ್ಪಡುತ್ತದೆ. ಈ ಆತ್ಮನು ಈ ಉದಾಸೀನಸ್ಥಿತಿಯಲ್ಲಿಯೇ ಸಾಕ್ಷಿಸ್ವರೂಪದಲ್ಲಿ ನಿಲ್ಲುವನು ಆತ್ಮನು ದೇಹಕ್ಕೂ, ಕರ್ಮಕ್ಕೂ, ಇಂದ್ರಿಯಗಳಿಗೂ, ಮನಸ್ಸಿಗೂ ನಾಯಕನಾಗಿದ್ದಾನೆಂದು ತಿಳಿಯುವವನು ಕಲ್ಯಾಣರೂಪ ಮೋಕ್ಷವನ್ನು ಹೊಂದುತ್ತಾನೆ. ಇಂತಹ ಜ್ಞಾನಿಯಾದ ಪಂಡಿತನಿಗೆ

ದೇಹವೂ, ಪಂಚತತ್ತ್ವಗಳೂ, ಅಧಿಷ್ಠಾತೃವಾದ ದೇವತೆ ಮತ್ತು ಚೈತನ್ಯ ಇವುಗಳ ಸಂಗ್ರಹವೆಂದೂ ಆದುದರಿಂದ ಆತ್ಮನಲ್ಲವೆಂದೂ ಹುಟ್ಟುವುದು ಸಾಯುವುದೂ ದೇಹವೇ ಎಂದೂ ಮನವರಿಕೆಯಾಗಿರುವುದು. ನನಗೆ ಪ್ರಿಯವಾದ ಇಂತಹ ಜ್ಞಾನಿಗಳು ಸಂಪತ್ತಿನಲ್ಲಿಯೂ ವಿಪತ್ತಿನಲ್ಲಿಯೂ ವಿಕಾರವನ್ನು ಹೊಂದುವುದಿಲ್ಲ. ಅಂದರೆ ಸಂಪತ್ತಿನಲ್ಲಿ ಸಂತೋಷವನ್ನು, ವಿಪತ್ತಿನಲ್ಲಿ ದುಃಖವನ್ನೂ ಹೊಂದುವುದಿಲ್ಲ. ಎಲೈ ವೀರನೇ! ನೀನು ಪಂಡಿತನಾಗಿರುವೆ! ಆದುದರಿಂದ ಸುಖದುಃಖಗಳನ್ನು ಸಮಾನವಾಗಿ ತಿಳಿದು "ಉತ್ತಮ, ಮಧ್ಯಮ, ಅಧಮಗಳೆಂಬ ಭೇದಬುದ್ಧಿಯನ್ನು ತ್ಯಾಗಮಾಡು. ಇಂದ್ರಿಯಗಳನ್ನೂ ಅಂತಃಕರಣವನ್ನೂ ಸ್ವಾಧೀನಕ್ಕೆ ತೆಗೆದುಕೊಂಡು ನನ್ನಿಂದ ಕೊಡಲ್ಪಟ್ಟಿರುವ ಮಂತ್ರಿಗಳಿಂದೊಡಗೂಡಿದ ಪೃಥ್ವೀಮಂಡಲವನ್ನಾಳು. ಪ್ರಜಾಪಾಲನೆಯೇ ರಾಜರ ಪ್ರಥಮ ಕರ್ತವ್ಯ. ಏಕೆಂದರೆ ಆತನು ಪರಲೋಕದಲ್ಲಿ ತನ್ನ ಪ್ರಜೆಗಳು ಗಳಿಸಿದ ಪುಣ್ಯದಲ್ಲಿ ಆರನೇ ಒಂದು ಭಾಗಕ್ಕೆ ಅಧಿಕಾರಿಯಾಗುತ್ತಾನೆ. ಇದಕ್ಕೆ ವಿಪರೀತವಾಗಿ ಯಾವ ರಾಜನು ಪ್ರಜೆಗಳಿಂದ ಕರವನ್ನು ತೆಗೆದುಕೊಂಡು ಅವರ ರಕ್ಷಣೆಮಾಡುವುದಿಲ್ಲವೋ, ಆತನ ಪುಣ್ಯದಲ್ಲಿ ಆರನೇ ಒಂದು ಭಾಗವು ಪ್ರಜೆಗಳಿಗೆ ಹಂಚಲ್ಪಡುತ್ತದೆ. ಆ ಪಾಪಿಯಾದ ರಾಜನು ಪ್ರಜೆಗಳ ಪಾಪದಲ್ಲಿ ಆರನೇ ಒಂದು ಅಂಶಕ್ಕೆ ಯೋಗ್ಯನಾಗುತ್ತಾನೆ. ನಿಮ್ಮ ಪೂರ್ವಜರಿಂದ ಈ ಧರ್ಮವು ಆಚರಿಸಲ್ಪಟ್ಟು ಬರುತ್ತಿದೆ. ಶ್ರೇಷ್ಠರಾದ ಋಷಿಗಳು ಇದನ್ನು ಅನುಮೋದಿಸಿದ್ದಾರೆ. ನೀನು ಇದೇ ಧರ್ಮವನ್ನು ಪ್ರಧಾನವಾಗಿ ಮಾಡಿಕೊಂಡು ಜೊತೆಯಲ್ಲಿಯೇ ಅರ್ಥ ಕಾಮಗಳನ್ನು ಸಂಪಾದಿಸು. ನಿನ್ನ ಮೇಲೆ ಪ್ರಜೆಗಳು ಪ್ರೇಮವನ್ನೂ ಶ್ರದ್ಧೆಯನ್ನೂ ಇಡುವರು. ಹೀಗೆ ಧರ್ಮಾರ್ಥಕಾಮಗಳನ್ನು

ಸಂಚಯಮಾಡುತ್ತಾ ಪೃಥ್ವಿಯನ್ನು ಪಾಲನೆಮಾಡುತ್ತಿರುವಾಗ ಸ್ವಲ್ಪ ದಿನಗಳಲ್ಲಿಯೇ ನಿನ್ನ ಮನೆಗೆ ಬರುವ ಸನಕಾದಿಸಿದ್ಧರ ದರ್ಶನವನ್ನೂ ಮಾಡುವೆ. ಎಲೈ! ನರೇಂದ್ರನೇ! ನಿನಗೆ ಬೇಕಾದ ವರವನ್ನು ಕೇಳು. ನಾನು ನಿನ್ನ ಗುಣ ಮತ್ತು ಸ್ವಭಾವದಿಂದ ಸಂತುಷ್ಟನಾಗಿದ್ದೇನೆ. ಯೋಗ, ಯಜ್ಞ, ತಪಸ್ಸು ಮುಂತಾದ ಯಾವ ಉಪಾಯದಿಂದಲೂ ಲಭ್ಯವಾಗದಿರುವ ನಾನು ಕೇವಲ **"ಸಮದರ್ಶಿ"** ಭಾವಕ್ಕೆ ವಶನಾಗುತ್ತೇನೆ.

ವಿಶ್ವವಿಜಯಿಯಾದ ಪೃಥುವು ಜಗದ್ಗುರುವಾದ, ಸರ್ವಜ್ಞನಾದ ಹರಿಯ ಉಪದೇಶಗಳನ್ನು ಮನಸ್ಸಿಟ್ಟು ಕೇಳಿ ಸಾದರದಿಂದ ಆ ದೇವನ ಆಜ್ಞೆಯನ್ನು ಶಿರಸಾಧಾರಣೆಮಾಡಿದನು. ಆಗ ಇಂದ್ರನು ತನ್ನ ಕರ್ಮದಿಂದ ಲಜ್ಜಿತನಾಗಿ ತಲೆತಗ್ಗಿಸಿ ಆತನ ಪಾದಗಳಿಗೆರಗಿದನು. ರಾಜನಾಗ ಇಂದ್ರನನ್ನು ಪ್ರೇಮದಿಂದ ಬಿಗಿದಪ್ಪಿ ವೈರಭಾವವನ್ನು ತ್ಯಾಗಮಾಡಿದನು. ನಂತರ ವಿಶ್ವಸ್ವರೂಪನಾದ ಶ್ರೀಹರಿಯನ್ನು ಯಥಾವಿಧಿಯಾಗಿ ಪೂಜಿಸಿ ಭಕ್ತಿಯು ಉಕ್ಕುತ್ತಿರಲು ಆತನ ಚರಣಾರವಿಂದಗಳಿಗೆ ನಮಸ್ಕರಿಸಿದನು. ಸಜ್ಜನರ ಹಿತಕಾರಿಯಾದ ಶ್ರೀಹರಿ–ಪರಮಾತ್ಮನು ಅಲ್ಲಿಂದ ಹೊರಡಲು ಸಿದ್ಧನಾಗಿ ತನ್ನ ಕಮಲನಯನಗಳಿಂದ ಪೃಥು ಮಹಾರಾಜನನ್ನು ಕೃಪಾದೃಷ್ಟಿಯಿಂದ ನೋಡುತ್ತಲೇ ನಿಂತುಬಿಟ್ಟನು. ಆಗ ಆದಿರಾಜನಾದ ಪೃಥುವು ಎರಡು ಕೈಗಳನ್ನು ಜೋಡಿಸಿ ಸ್ತೋತ್ರಮಾಡಲು ಇಷ್ಟಪಟ್ಟರೂ ಕಣ್ಣುಗಳಿಂದ ಆನಂದಾಶ್ರುಗಳು ಮಿತಿಮೀರಿ ಕಂಠವು ಗದ್ಗದವಾಗಿ ಮಾತನಾಡಲಾರದೆ ಕಣ್ಣುಗಳನ್ನು ಮುಚ್ಚಿಕೊಂಡು ತನ್ನ ಹೃದಯದಲ್ಲಿಯೇ ಪರಮಾತ್ಮನನ್ನು ಧ್ಯಾನ ಮಾಡಲಾರಂಭಿಸಿದನು.

ಕೊನೆಗೆ ಕಣ್ಣುಗಳಲ್ಲಿನ ನೀರನ್ನು ಒರೆಸಿಕೊಳ್ಳುತ್ತಾ ತನ್ನ ಎದುರಿಗೆ ಭೂಮಿಯ ಮೇಲೆ ಕಾಲುಗಳನ್ನೂರಿ ಗರುಡನ ಮೇಲೆ ಕೈಗಳನ್ನಿಟ್ಟು ನಿಂತಿರುವುದನ್ನು ಕಣ್ಣು ತುಂಬಾ ನೋಡುತ್ತಾ ಸ್ತೋತ್ರ ಮಾಡಲಾರಂಭಿಸಿದನು.

"ಹೇ! ಪ್ರಭು! ಬ್ರಹ್ಮಾದಿಗಳಿಗೂ ಪೂಜನೀಯನಾದ ನೀನು ಕೇಳಿದ ವರವನ್ನು ಕೊಡಲು ಸಿದ್ಧನಾಗಿರುವೆ. ಪಂಡಿತರು ತುಚ್ಛ ವಾದ ವಿಷಯ ಸುಖರೂಪ ವರವನ್ನೇ ಇಚ್ಛಿಸರು. ದೇಹಾಭಿ ಮಾನಿಗಳು ಮಾತ್ರ ಅಶಾಶ್ವತ ವಿಷಯಸುಖರೂಪ ವರವನ್ನು ಅಪೇಕ್ಷಿಸುವರು. ವಿಷಯಭೋಗವು ದೇಹಧಾರಿಗಳಿಗೆ ನರಕದಲ್ಲಿ ಯಾದರೂ ಸಿಕ್ಕಬಲ್ಲದು. ಅಂತಹ ತುಚ್ಛವರಗಳನ್ನು ನಿನ್ನಿಂದ ನಾನು ಅಪೇಕ್ಷಿಸಲಾರೆ. ದೇವ! ನೀನು ಮೋಕ್ಷದಾತನು. ಮೋಕ್ಷದಲ್ಲಿ ಸಾಧುಗಳ ಹೃದಯದಿಂದ ಹೊರಹೊರಟ ನಿನ್ನ ಚರಣಾರವಿಂದ ರೂಪೀ ಮಕರಂದದ ಆಸ್ವಾದನೆಯು ಸಿಕ್ಕ ಲಾರದಾದರೆ ನಾನು ಅದನ್ನೂ ಸಹ ಅಪೇಕ್ಷಿಸಲಾರೆನು. ನೀನು ನನಗೆ ವರವನ್ನು ಕೊಡುವುದಾದರೆ, ನಿನ್ನ ಗುಣಗಾನವನ್ನು ಕೇಳು ವಂತಹ ಹತ್ತು ಸಹಸ್ರ ಕಿವಿಗಳನ್ನು ದಯಪಾಲಿಸು. ಎಲೈ ಪವಿತ್ರ ಕೀರ್ತಿಶಾಲಿಯಾದ ದೇವನೇ! ತತ್ತ್ವಮಾರ್ಗವನ್ನು ಬಿಟ್ಟಿರುವ ಯೋಗಭ್ರಷ್ಟರೂ ಸಹಾ ನಿನ್ನ ಚರಣಕಮಲದಿಂದ ಹೊರಹೊರಟ ವಾಯುವಿನ ಸಣ್ಣ ಕಣವು ಸಿಕ್ಕುವ ಸೌಭಾಗ್ಯವು ಒದಗಿದರೂ ಅವರು ತತ್ತ್ವಜ್ಞಾನಿಗಳಾಗಬಲ್ಲರು.

ಎಲೈ ಮಂಗಳಮಯ ಕೀರ್ತಿಯುತನೆ! ಯಾವಾತನು ಸಾಧು ಗಳ ಸಂಗದಲ್ಲಿ ನಿನ್ನ ಮಂಗಳಮಯ ಯಶಸ್ಸನ್ನು ಒಂದಾವರ್ತಿ

ಕೇಳಿ ಆನಂದಿಸುವನೋ ಆತನು ಗುಣಗ್ರಾಹಿಯಾಗಿದ್ದರೆ ಪಶುವಲ್ಲ ದಿದ್ದರೆ ಆತನ ಮನಸ್ಸು ನಿನ್ನ ಚರಣಕಮಲಗಳಿಂದ ಹಿಂತಿರುಗ ಲಾರದು. ಆದುದರಿಂದ ಚಂಚಲೆಯಾದರೂ ಸದಾ ನಿನ್ನನ್ನು ಸೇವಿಸುತ್ತಿರುವ ಲಕ್ಷ್ಮಿಯಂತೆ ನಾನು ನಿನ್ನನ್ನು ಭಜಿಸುವೆನು. ನೀನು ಸಂಪೂರ್ಣ ಗುಣಗಳಿಗೆ ಆಧಾರನಾಗಿರುವ ಪುರುಷೋತ್ತಮನು. ನಾಥ! ಲಕ್ಷ್ಮಿಯಂತೆ ನಾನೂ ಸಹಾ ಒಬ್ಬನೇ ಪ್ರಭುವನ್ನು ಭಜಿಸುವುದರಿಂದ ನಮ್ಮಿಬ್ಬರಲ್ಲೂ ಪರಸ್ಪರ ಅಸೂಯೆಯು ಹುಟ್ಟ ಬಹುದು. ಜಗಜ್ಜನನಿಯಾದ ಲಕ್ಷ್ಮಿಯು ನನ್ನ ಮೇಲೆ ಸಿಟ್ಟು ಮಾಡಬಹುದು. ಆದರೆ ನಾನು ಅದಕ್ಕೆ ಹೆದರುವನಲ್ಲ ಏಕೆನ್ನು ವೆಯೋ? ನೀನು ದೀನವತ್ಸಲನು. ಸ್ವಲ್ಪ ಸೇವೆಯನ್ನಾದರೂ ಮಹತ್ತಾಗಿ ಭಾವಿಸಿ ಅನುಗ್ರಹಿಸುವವನು ನೀನು. ಪೂರ್ಣಕಾಮ ನಾದ ನಿನಗೆ ಯಾರ ಸೇವೆಯ ಹಂಗೂ ಇಲ್ಲ. ಆದುದರಿಂದ ಲಕ್ಷ್ಮಿಯ ದಾಕ್ಷಿಣ್ಯವೂ ನಿನಗೆ ಇರಲಾರದು. ನಿನ್ನನ್ನು ದೀನವತ್ಸಲ ನೆಂದು ತಿಳಿದು ಸಾಧುಗಳು ಜ್ಞಾನಪ್ರಾಪ್ತಿಯಾದ ನಂತರವೂ ನಿನ್ನ ಭಜನೆಯನ್ನು ಬಿಡುವುದಿಲ್ಲ. ನೀನು ಮಾಯೆಯ ಗುಣಗಳ ಕಾರ್ಯಕ್ಕೆ ದೂರನಾಗಿರುವೆ. ನಿಷ್ಕಾಮರಾದ ಸಾಧುಗಳು ನಿನ್ನನ್ನು ಭಜಿಸುವುದು ಕೇವಲ ನಿನ್ನ ಚರಣಕಮಲಗಳ ಸ್ಮರಣೆಗೆ ಮಾತ್ರ ಎಂದು ನಾನು ತಿಳಿಯುತ್ತೇನೆ. ದೇವ! ನಿನ್ನ ಸೇವಕರನ್ನು ಕುರಿತು ನೀನು ಹೇಳುವ 'ವರವನ್ನು ಕೇಳು' ಎಂಬ ಮಾತ್ರು ಜಗತ್ತನ್ನು ಮೋಹಗೊಳಿಸುವುದಕ್ಕಾಗಿ ಅಲ್ಲವೆ? ನಿನ್ನ ಮೋಹಕ ರೂಪ ಪಾಶದಿಂದ ಬಂಧಿತನಾಗಿ ಸ್ವರ್ಗಾದಿಗಳನ್ನಪೇಕ್ಷಿಸಿದರೆ ಕ್ಷಣಿಕ ವಿಷಯಸುಖಗಳನ್ನನುಭವಿಸಿದ ನಂತರ ಪುನಃ ಭೂಮಿಗೇ–ಮನುಷ್ಯ ನಾಗಿಯೇ ಜನ್ಮವೆತ್ತಬೇಕಲ್ಲವೇ? ಅಜ್ಞಾನಿಯು ನಿನ್ನ ಮಾಯೆ

ಯಿಂದ ಮೋಹಿತನಾಗಿ, ತನ್ನನ್ನು ಸರ್ವಸ್ವರೂಪನಾದ ಆತ್ಮನಿಂದ ಭಿನ್ನನು ಎಂದು ತಿಳಿಯುತ್ತಾನೆ. ಆಗ ಪುತ್ರಾದಿ ಸುಖಸಾಧನೆಗಳನ್ನಪೇಕ್ಷಿಸುತ್ತಾನೆ ತಂದೆಯು ಅಜ್ಞಾನಿಯಾದ ಬಾಲಕನ ಹಿತವನ್ನು ತಾನೇ ಯೋಚಿಸಿ, ಅದನ್ನು ಸಿದ್ಧಮಾಡುವಂತೆ ಹೇ ದೇವ! ನೀನು ನಮಗೆ ಏನುಮಾಡಿದರೆ ಕಲ್ಯಾಣವಾಗುವುದೆಂದು ಭಾವಿಸುವೆಯೋ ಅದನ್ನೇ ಮಾಡು."

ವಿಶ್ವೋತ್ಪತ್ತಿ ಕಾರಣನಾದ ದೇವನು ಸ್ತುತಿಸಿದ ಮಾತನ್ನು ಕೇಳುತ್ತಾ ಬಲು ಸಂತೋಷಪಟ್ಟು ಹೇಳಿದನು—

"ಹೇ ರಾಜ! ನಿನ್ನ ಇಚ್ಛೆಯಂತೆ ನಿನಗೆ ನನ್ನಲ್ಲಿ ಭಕ್ತಿಯು ಅಚಲವಾಗಿ ನಿಲ್ಲಲಿ. ಇಂತಹ ಶ್ರದ್ಧೆಯು ನಿನಗೆ ಉತ್ಪತ್ತಿಯಾಗಿರುವುದರಿಂದ ನೀನು ನಿಜವಾಗಿಯೂ ಭಾಗ್ಯಶಾಲಿಯು. ಪಂಡಿತನು. ಇಂತಹ ಬುದ್ಧಿಯ ಆಧಾರದಿಂದಲೇ ದುಸ್ತರವಾದ ಮಾಯಾಮೋಹವನ್ನು ದಾಟುತ್ತಾರೆ. ನಾನು ನಿನಗೆ ಉಪದೇಶಮಾಡಿದಂತೆ ಸಾವಧಾನನಾಗಿ ರಾಜ್ಯಭಾರವನ್ನು ನಡೆಸು. ನನ್ನ ಆಜ್ಞೆಯನ್ನು ಪಾಲನೆಮಾಡುವವನು ಸದಾ ಸರ್ವದಾ ಸುಖಿಯಾಗುವನು."

ವೇ ನ ಪು ತ್ರ ನಾ ದ ಪೃಥುವಿಗೆ ಹೀಗೆ ಹೇಳಿ ಶ್ರೀವಿಷ್ಣು ಪರಮಾತ್ಮನು ಹೊರಡಲುದ್ಯುಕ್ತನಾದನು. ಆಗ ಪೃಥು ಮಹಾರಾಜನು ಅಲ್ಲಿಗೆ ಬಂದಿದ್ದ ದೇವ, ಋಷಿ, ಪಿತೃ, ಗಂಧರ್ವ, ಚಾರಣ, ಸಿದ್ಧ, ನಾಗ, ಸರ್ಪ, ಕಿನ್ನರ, ಅಪ್ಸರ, ಮನುಷ್ಯ, ಪಶು, ಪಕ್ಷಿ ಮುಂತಾದ ಎಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿದ ನಂತರ, ದೇವನು ಪೃಥುಮಹಾರಾಜನ ಮತ್ತು ಅವನ ಯಜ್ಞಮಂಟಪದಲ್ಲಿದ್ದ ಋತ್ವಿಜರ ಮನಸ್ಸನ್ನು ಹರಣಮಾಡುತ್ತಾ ತನ್ನ ವೈಕುಂಠ

ಧಾಮಕ್ಕೆ ತೆರಳಿದನು.

ಪೃಥು ಮಹಾರಾಜನೂ ಸಹಾ ಸಾಕಾರ ರೂಪದಿಂದ ಬಂದು ತನ್ನನ್ನು ಅನುಗ್ರಹಿಸಿದ ವಾಙ್ಮನೋತೀತನಾದ, ಅವ್ಯಕ್ತಮೂರ್ತಿಯಾದ ಪರಮಾತ್ಮನನ್ನು ಧ್ಯಾನಮಾಡುತ್ತಾ ತನ್ನ ಪಟ್ಟಣವನ್ನು ಸೇರಿದನು.

ಇಲ್ಲಿ ಪ್ರಜೆಗಳು ತಮ್ಮ ಮಹಾರಾಜನು ಜಗತ್ತನ್ನೇ ಜಯಿಸಿ ಶ್ರೀಮಹಾವಿಷ್ಣುವಿನ ಅನುಗ್ರಹಕ್ಕೆ ಪಾತ್ರನಾಗಿ ಪಟ್ಟಣಕ್ಕೆ ಹಿಂದಿರುಗುವುದನ್ನು ಕೇಳಿ ಬಹು ಸಂಭ್ರಮದಿಂದ ರಾಜಪುರಿಯನ್ನು ಅಲಂಕರಿಸಿದರು. ಪಟ್ಟಣದ ಮಹಾದ್ವಾರದಿಂದ ಹಿಡಿದು ಅವರ ಮನೆಯವರೆಗಿನ ಎಲ್ಲಾ ಬೀದಿಗಳನ್ನೂ ಅಲಂಕಾರವಾಗಿ ಶೃಂಗರಿಸಿ ತಳಿರು ತೋರಣಗಳಿಂದಲೂ, ಬಾಳೆಮರಗಳಿಂದಲೂ, ಅಡಿಕೆಯ ಸೊಸಿಗಳಿಂದಲೂ ಚಪ್ಪರಗಳನ್ನು ಅಲಂಕರಿಸಿದರು. ಹೂ, ಹಣ್ಣು ಅಕ್ಷತೆ ಲಾಜ (ಅರಳು) ಗೋಧಿಯ ಗೊಂಚಲು ದೀಪ ಇವುಗಳನ್ನು ಅಲ್ಲಲ್ಲಿ ಅಲಂಕರಿಸಿದರು. ರಸ್ತೆಗಳಿಗೆ ಅಗರು, ಚಂದನ, ಪನ್ನೀರುಗಳ ನೀರಿನಿಂದ ಚುಮುಕಿಸಿ ಸುಗಂಧಯುಕ್ತಗಳಾಗುವಂತೆ ಮಾಡಿದರು. ಕುಂಡಲಮಂಡಿತ ಮುಖಮಂಡಲೆಯರಾದ ಸುಂದರ ಕನ್ಯೆಯರಿಂದಲೂ ವೇದಪಾರಕರಾದ ಬ್ರಾಹ್ಮಣರಿಂದಲೂ, ಶಂಖ, ನಗಾರಿ, ಓಲಗ ಮುಂತಾದ ವಿವಿಧ ವಾದ್ಯಗಳಿಂದಲೂ ಯುಕ್ತರಾಗಿ ಮಂತ್ರೀಪುರಜನರು ಮಹಾರಾಜನನ್ನು ಎದುರ್ಗೊಂಡರು.

ಮಂತ್ರಿಗಳಿಂದಲೂ ಪುರಜನರಿಂದಲೂ ಆದರಿಸಲ್ಪಟ್ಟ ಪೃಥು ಮಹಾರಾಜನು ಬಹುಕಾಲ ರಾಜ್ಯಭಾರಮಾಡಿ ಯಥಾಸಮಯದಲ್ಲಿ ತನ್ನ ಸಮುಜ್ವಲ ಯಶಸ್ಸನ್ನು ಈ ಜಗತ್ತಿನಲ್ಲಿ ಬಿಟ್ಟು ತಾನು ಪರಂಧಾಮವನ್ನೈದಿದನು.

ವಿದುರ.—ಬ್ರಹ್ಮರ್ಷೇ! ಬ್ರಾಹ್ಮಣರು ಪೃಥುವಿಗೆ ರಾಜ್ಯಾಭಿಷೇಕಮಾಡಿದನಂತರ ದೇವತೆಗಳೆಲ್ಲಾ ತಂತಮ್ಮಲ್ಲಿನ ಉತ್ತಮೋತ್ತಮ ವಸ್ತುಗಳನ್ನು ಕಾಣಿಕೆಯಾಗಿ ಕೊಟ್ಟನಂತರ ಮಹಾರಾಜಾ ಪೃಥುವು ವಿಷ್ಣುವಿನ ತೇಜಸ್ಸನ್ನು ಧಾರಣೆಮಾಡಿ ಗೋರೂಪಳಾದ ಪೃಥ್ವಿಯನ್ನು ಕರೆದನಂತರ ಎಂತೆಂತಹ ಶುದ್ಧಕರ್ಮಗಳನ್ನು ಮಾಡಿದನು? ಯಾವ ಪೃಥುಮಹಾರಾಜನು ಕರೆದು ಬಿಟ್ಟ ಉಚ್ಛಿಷ್ಟವನ್ನು ಅಂದರೆ ಅವನು ಗೋರೂಪಿಣಿಯಾದ ಪೃಥ್ವಿಯಿಂದ ಕರೆದನಂತರ ಶೇಷವಾಗಿ ಉಳಿದಿರುವ ವಸ್ತುಗಳನ್ನು ಇಲ್ಲಿಯವರೆಗೆ ಎಲ್ಲ ರಾಜರೂ ಲೋಕಪಾಲಕರೂ ದೇವತೆಗಳೂ ಸೇವನೆಮಾಡುತ್ತಿರುವರೋ ಅಂತಹ ಮಹಾನುಭಾವನ ದಿವ್ಯಚರಿತ್ರೆಯನ್ನು ಎಷ್ಟು ಕೇಳಿದರೂ ತೃಪ್ತಿಯಿಲ್ಲದಂತಾಗಿದೆ. ಆದುದರಿಂದ ತಾವು ಅದನ್ನು ಸವಿಸ್ತಾರವಾಗಿ ತಿಳಿಸುವ ಕೃಪೆಮಾಡಬೇಕು.

ಮೈತ್ರೇಯ:—ವಿದುರ! ಗಂಗಾಯಮುನೆಗಳ ಮಧ್ಯ ಪ್ರದೇಶದಲ್ಲಿ ಪೃಥುಮಹಾರಾಜನ ರಾಜಧಾನಿಯಿದ್ದಿತು. ಆತನು ಅಲ್ಲಿ ನಿಂತು ತನ್ನ ಪೂರ್ವಜನ್ಮದ ಪುಣ್ಯವನ್ನು ಅನುಭವಿಸಿ ಕಡಿಮೆ ಮಾಡುವುದಕ್ಕಾಗಿ ಮಾತ್ರ ವಿಷಯಭೋಗಗಳನ್ನು ಅನುಭವಿಸುತ್ತಿದ್ದನು. ಆತನ ಆಜ್ಞೆಯು ಭೂಮಂಡಲದೊಂದರಲ್ಲಿಯೇ ಅಲ್ಲ ಸಪ್ತದ್ವೀಪಗಳಲ್ಲಿಯೂ, ದಂಡಧಾರಿಯಾಗಿದ್ದವನು ಅವನೊಬ್ಬನೇ. ಬ್ರಾಹ್ಮಣರು ಮತ್ತು ಹರಿಭಕ್ತರು ಅವನ ದಂಡಶಿಕ್ಷೆಗೆ ಒಳಪಡುತ್ತಿರಲಿಲ್ಲ. ಅಂದರೆ ಅವರು ಶಿಕ್ಷೆಗೆ ಯೋಗ್ಯವಾದ ಕೆಲಸಗಳನ್ನು ಮಾಡಲಾರದವರಾಗಿದ್ದರು. ಎಲೈ ಸಜ್ಜನಶ್ರೇಷ್ಠ ವಿದುರ! ಪೃಥುಮಹಾರಾಜನು ಒಂದಾವರ್ತಿ ಒಂದು ಮಹಾಯಜ್ಞದ ಅನುಷ್ಠಾನಕ್ಕೆ ಪ್ರಾರಂಭಮಾಡಿದನು. ದೇಶ ದೇಶಗಳಿಂದ ರಾಜರೂ, ಪ್ರಜೆಗಳೂ,

ಸಾಧುಗಳೂ ಎಲ್ಲರೂ ಕರೆಸಲ್ಪಟ್ಟರು ನಕ್ಷತ್ರಗಳ ಮಧ್ಯದಲ್ಲಿ ಶೋಭಿಸುವ ಚಂದ್ರನಂತೆ ಪೃಥುಮಹಾರಾಜನು ಆ ಸಭೆಯ ಮಧ್ಯದಲ್ಲಿ ಶೋಭಿಸಿದನು. ಆತನ ದೇಹದಲ್ಲಿ ಚಕ್ರವರ್ತಿಯ ಚಿಹ್ನೆಗಳು ಇದ್ದವು. ಭುಜದಂಡಗಳು ದೊಡ್ಡದಾಗಿ ವಿಶಾಲವಾಗಿದ್ದವು. ವರ್ಣವು ಶುಭ್ರವಾಗಿತ್ತು. ನೇತ್ರಗಳು ಕಮಲಗಳಂತೆ ಶೋಭಿಸುತ್ತಿದ್ದವು. ನಾಸಿಕವೂ ಮುಖವೂ ಸುಂದರವಾಗಿದ್ದವು. ಮುಖಭಾವವು ಪ್ರಸನ್ನವಾಗಿದ್ದಿತು. ಸುಂದರ ದಂತಪಂಕ್ತಿಗಳಿಂದೊಡಗೂಡಿದ ಮಂದಹಾಸವು ಮನಮೋಹಕವಾಗಿದ್ದಿತು. ವಕ್ಷಸ್ಥಲವು ವಿಶಾಲವಾಗಿದ್ದಿತು. ಶ್ರೋಣಿಯು ಅಗಲವಾಗಿದ್ದಿತು. ಉದರವು ತ್ರಿವಳಿಯುಕ್ತವಾಗಿ, ಅಧಿಕ ಶೋಭಾಯಮಾನವಾಗಿ ಕಂಗೊಳಿಸುತ್ತಿತ್ತು. ನಾಭಿಯು ಸುಳಿಯಂತೆ ಸುತ್ತಿಕೊಂಡು ಗಂಭೀರವಾಗಿತ್ತು ಊರುಗಳು ಸುವರ್ಣದಂತೆ ಶೋಭಾಯಮಾನವಾಗಿ ಚರಣಗಳು ಸ್ವಲ್ಪ ಮುಂಭಾಗದಲ್ಲಿ ಎತ್ತರವಾಗಿದ್ದವು. ಕೇಶಗಳು ಮೃದುವಾಗಿದ್ದವು. ಅಮೂಲ್ಯವಾದ ಸುಂದರ ರೇಷ್ಮೆಯ ವಸ್ತ್ರಗಳು ಆತನ ದೇಹವನ್ನು ಅಲಂಕರಿಸಿದ್ದವು ಯಜ್ಞದೀಕ್ಷೆಯ ಕಾರಣದಿಂದ ಆಭರಣಗಳೆಲ್ಲವನ್ನೂ ತೆಗೆದುಹಾಕಿದ್ದರೂ, ಕೃಷ್ಣಾಜಿನವನ್ನು ಧಾರಣೆಮಾಡಿದ್ದರೂ, ಆತನ ದೇಹ ಸೌಂದರ್ಯವೇನೂ ಕಡಿಮೆಯಾಗಿರಲಿಲ್ಲ.

ರಾಜಾ ಪೃಥುವು ಯಜ್ಞಮಂಟಪದಲ್ಲಿ ಸಭಾಸದರನ್ನುದ್ದೇಶಿಸಿ ಮೃದು ಮಧುರಭಾವಯುಕ್ತ ಗಂಭೀರವಾಣಿಯಿಂದ ಹೇಳಲಾರಂಭಿಸಿದನು—

ಸಭಿಕರೆ! ಪ್ರಜೆಗಳೆ! ಈ ಯಜ್ಞಮಂಟಪಕ್ಕೆ ಬಂದಿರುವ ಮಹಾತ್ಮರೇ! ನಿಮ್ಮಗಳಿಗೆ ಕಲ್ಯಾಣವಾಗಲಿ. ನಾನು ಹೇಳುವುದನ್ನು ಸಾವಧಾನವಾಗಿ ಕೇಳಿರಿ. ನಿಮ್ಮಗಳೆದುರಿಗೆ ಜ್ಞಾನಾದಿ

ಗಳಲ್ಲಿ ನಾನು ಸರಿಸಮಾನನಲ್ಲದಿದ್ದಾಗ್ಯೂ ನಿಮ್ಮಗಳಿಗೆ ಹೇಳು ತ್ತಿದ್ದೇನೆ. ಪ್ರಜೆಗಳನ್ನು ಸೃಷ್ಟಿಮಾಡಿದ ವಿಧಾತನು ನನ್ನನ್ನು ಪ್ರಜೆಗಳ ರಕ್ಷಕನನ್ನಾಗಿ ಮಾಡಿದ್ದಾನೆ. ನನ್ನ ಧರ್ಮವು ಸಮಸ್ತ ಜನಗಳನ್ನು ರಕ್ಷಣೆಮಾಡುವುದು. ಅವರಿಗೆ ಜೀವನವನ್ನು ಕಲ್ಪಿಸಿ ಕೊಡುವುದು. ನಾಲ್ಕು ವರ್ಣಗಳವರೂ, ನಾಲ್ಕು ಆಶ್ರಮಗಳವರೂ ತಂತಮ್ಮ ಧರ್ಮಗಳನ್ನು ವೇದೋಕ್ತವಿಧಿಯಂತೆ ಅನುಸರಿಸಿ ಆಚರಿಸು ವಂತೆ ಮಾಡುವುದು. ಹೀಗೆ ಮಾಡುವುದರಿಂದಲೇ ಧರ್ಮರಕ್ಷಕ ನಾದ ಶ್ರೀಹರಿಯು ಪ್ರಸನ್ನನಾಗುವನು. ಆಗ ಬ್ರಹ್ಮವಾದಿಗಳು ಗುರ್ತಿಸುವ, ಪುಣ್ಯಾತ್ಮರು ಹೋಗಿ ಸೇರುವ ಲೋಕಗಳು ನನಗೆ ಸಿಕ್ಕುವುವು. ಯಾವ ರಾಜನು ಪ್ರಜೆಗಳಿಂದ ಕರವನ್ನು (ಕಂದಾಯ) ತೆಗೆದುಕೊಂಡು ಅವರಿಗೆ ಧರ್ಮದ ಶಿಕ್ಷಣವನ್ನು ಕೊಡುವುದಿಲ್ಲವೋ ಆತನು ಪ್ರಜೆಗಳ ಪಾಪದಲ್ಲಿ ಭಾಗಿಯಾಗುತ್ತಾನೆ. ಆತನ ಐಶ್ವರ್ಯವು ನಷ್ಟವಾಗುತ್ತದೆ. ಆದುದರಿಂದ ಎಲೈ ಪ್ರಜೆಗಳಿರಾ! ನೀವು ನಿಮ್ಮ ನಿಮ್ಮ ಧರ್ಮಗಳಲ್ಲಿ ನಿರತರಾಗಿ, ಅವುಗಳ ಪಾಲನೆಯಲ್ಲಿ ಶ್ರದ್ಧಾ ಯುಕ್ತರಾಗಿ ನಡೆದರೆ ಶ್ರೀಹರಿಯು ಪ್ರೀತನಾಗುತ್ತಾನಾದುದರಿಂದ ನೀವು ನನಗೆ ಉಪಕಾರಮಾಡಿದಂತಾಗುತ್ತದೆ. ಹೇ! ಪಿತೃಗಳೇ! ದೇವತೆಗಳೆ! ಋಷಿಗಳೆ! ಕರ್ಮಮಾಡುವವರಿಗೆ 'ಇಂತಿಂತಹ ಕರ್ಮ ಗಳನ್ನು ಮಾಡಬೇಕು' ಎಂದು ಉಪದೇಶಮಾಡುವವರೂ, 'ಸರಿ, ಇದು ಯೋಗ್ಯವಾಗಿದೆ' ಎಂದು ಅನುಮೋದಿಸುವವರೂ ಯಾವ ಲೋಕವನ್ನು ಪಡೆಯುವರೋ ಆ ಲೋಕವು ನನಗೆ ದೊರಕುವಂತೆ ಅನುಗ್ರಹಮಾಡಿರಿ. ಆದುದರಿಂದ ಎಲೈ ಪ್ರಿಯ ಪ್ರಜೆಗಳಿರಾ! ನೀವು ಅಧೋಕ್ಷಜನಾದ ಶ್ರೀಹರಿಯಲ್ಲಿ ಚಿತ್ತವಿಟ್ಟು ಈರ್ಷ್ಯಾ ದ್ವೇಷ ಗಳಿಲ್ಲದೆ ನಿಮ್ಮ ನಿಮ್ಮ ಧರ್ಮಗಳನ್ನು ಪಾಲನೆಮಾಡಿರಿ. ಸಮಸ್ತ

ಯಜ್ಞಗಳಿಗೂ ಅಧಿಷ್ಠಾತೃವಾದವನು ವಾಸುದೇವನೇ. ಮನು, ಉತ್ತಾನಪಾದ, ರಾಜರ್ಷಿ ಪ್ರಿಯವ್ರತ, ಮಹಾರಾಜ ಧ್ರುವ, ನಮ್ಮಜ್ಜ ಅಂಗ ಮುಂತಾದ ಅನೇಕ ರಾಜರೂ ಬ್ರಹ್ಮ ಶಿವ ಪ್ರಹ್ಲಾದ ಬಲಿ ಮುಂತಾದವರೆಲ್ಲರ ಮತದಂತೆ ಜಗತ್ತಿಗೆ ಕಾರಣೀಭೂತನಾದ, ಪ್ರತಿಯೊಂದು ಪ್ರಾಣಿಗೂ ಅವರವರ ಕರ್ಮಭೋಗವನ್ನು ವಿಧಾಯಕ ಮಾಡುವ ಈಶ್ವರನಿದ್ದಾನೆ ಎಂದು ನಂಬಿ ಆ ಭಾವನೆಯಲ್ಲಿ ಶ್ರದ್ಧೆ ಇಡಬೇಕು. ಮೃತ್ಯುವಿನ ನೆಂಟನಾದ ವೇನ ಮುಂತಾದ ಕೆಲವರು ಈಶ್ವರನ ಇರುವಿಕೆಯನ್ನು ಒಪ್ಪದೇ ಇದ್ದಾಗ್ಯೂ ಜಗತ್ತಿಗೆ ಯಜಮಾನನಾದ ಈಶ್ವರನೇ ಇಲ್ಲವೆನ್ನುವುದಾಗುವುದಿಲ್ಲ. ಪ್ರತಿಯೊಬ್ಬರಿಗೂ ಅವರವರ ಕರ್ಮಕ್ಕೆ ತಕ್ಕಂತೆ ಫಲವಾಗಬೇಕಾದರೆ ಈಶ್ವರನ ಅವಶ್ಯಕತೆಯೇ ಇಲ್ಲವೆಂದು ಭಾವಿಸುವುದು ಸರಿಯಲ್ಲ. ಏಕೆಂದರೆ ತ್ರಿವರ್ಗ ಅಂದರೆ ಧರ್ಮ ಅರ್ಥ ಕಾಮ ಸ್ವರ್ಗ ಮೋಕ್ಷಗಳು ಕರ್ಮವನ್ನು ಅನುಸರಿಸಿದಾಗ್ಯೂ ಎಲ್ಲ ಕರ್ಮಗಳಿಗೂ ಈ ತ್ರಿವರ್ಗ ಫಲವಿಲ್ಲ. ಮತ್ತು ಒಂದೇ ಕರ್ಮವೇ ಎರಡು ಜನರಿಂದ ಮಾಡಲ್ಪಟ್ಟಾಗ್ಯೆ ಇಬ್ಬರಿಗೂ ಬೇರೆ ಬೇರೆ ಫಲಗಳಾಗುತ್ತವೆ. ಆದುದರಿಂದ ಜಗತ್ತಿನ ನಿಯಂತ್ರಣ ಕರ್ತೃವಾದ ಸರ್ವ ಶಕ್ತಿವಂತನಾದ ಈಶ್ವರನೊಬ್ಬನು ಇರಲೇಬೇಕೆಂದು ನಂಬಬೇಕು.

ಆ ಈಶ್ವರನ ಚರಣ ಕಮಲಗಳನ್ನು ಸೇವಿಸುವ ತೀವ್ರತರ ಇಚ್ಛೆಯು ನಿತ್ಯಪ್ರತಿಯೂ ವೃದ್ಧಿಯಾಗಿ ಶ್ರೀಹರಿಯ ಚರಣ ಕಮಲಗಳಿಂದುದ್ಭವಿಸಿದ ಗಂಗೆಯು ಲೋಕಪಾವನೆಯಾಗಿ ಮೆರೆಯುವಂತೆ ತಪಸ್ವಿಗಳ ಹೃದಯದಲ್ಲಿ ಬಹುಕಾಲದಿಂದಲೂ ಮನೆಮಾಡಿಕೊಂಡಿದ್ದ ಹೃದಯದ ವಿಚಾರಗಳನ್ನು ಚೆನ್ನಾಗಿ ತೊಳೆದು ಶುದ್ಧ ಮಾಡುವುದು.

ಆ ಹರಿಭಕ್ತನ ಮನಸ್ಸಿನ ಕಲ್ಮಷವು ಚೆನ್ನಾಗಿ ತೊಳೆಯು ಲ್ಪಟ್ಟನಂತರ ಆತನು ವೈರಾಗ್ಯದ್ವಾರಾ ವಿಜ್ಞಾನ ಸಾಕ್ಷಾತ್ಕಾರ ರೂಪ ವೀರ್ಯವನ್ನು ಪಡೆದು ಆ ಜಗತ್ಪಿತನಾದ ಪರಮೇಶ್ವರನ ಪಾದಕಮಲಗಳಲ್ಲಿ ಸ್ಥಾನವನ್ನು ಪಡೆಯುತ್ತಾನೆ. ನಂತರ ಅವನು ಪುನಃ ಸಂಸಾರದ ಕಷ್ಟಗಳನ್ನು ಅನುಭವಿಸಬೇಕಾಗಿಲ್ಲ. ಅಂದರೆ ಮುಕ್ತಿಯನ್ನು ಪಡೆಯುತ್ತಾನೆ.

ಪ್ರಿಯರಾದ ಪ್ರಜೆಗಳೆ! ಈಶ್ವರನಿಲ್ಲದೆ ಬರೀ ಕರ್ಮದಿಂದ ಅಥವಾ ಕರ್ಮಾಭಿಮಾನೀ ದೇವತೆಗಳಿಂದ ಮೋಕ್ಷವು ಸಿಕ್ಕಲಾರದು. ನೀವು ಚಿತ್ತದಿಂದ ಕಪಟವನ್ನು ದೂರಮಾಡಿ ಅಧ್ಯಾಪನ ಮುಂತಾದ ನಿಮ್ಮ ನಿಮ್ಮ ವೃತ್ತಿಗಳನ್ನು ಗ್ರಹಣಮಾಡಿರಿ. ಧ್ಯಾನ, ಸ್ತುತಿ, ಸೇವೆ ಮುಂತಾದುವುಗಳಿಂದ ಆ ಈಶ್ವರನನ್ನು ಭಜಿಸಿರಿ. ಹೀಗೆ ಮಾಡುವುದರಿಂದ ನಿಮ್ಮ ಇಷ್ಟಾರ್ಥಗಳು ನೆರವೇರುವುವು. ಆ ನಿರ್ಗುಣನಾದ ಭಗವಂತನು ವಿಜ್ಞಾನ ರಾಶಿ ಸ್ವರೂಪನಾಗಿ ಒಬ್ಬನೇ ಆದರೂ ಭಿನ್ನ ಭಿನ್ನ ದ್ರವ್ಯ (ಧಾನ್ಯಾದಿ) ಗುಣ (ಸತ್ವಾದಿ) ಕ್ರಿಯಾ (ಅವಘಾತಾದಿ) ಉಕ್ತಿ (ಮಂತ್ರ) ಅರ್ಥ (ಯಜ್ಞ ಸಾಮಗ್ರಿ) ಆಶಯ (ಭಾವ ಸಂಕಲ್ಪ) ಲಿಂಗ (ಪದಾರ್ಥಗಳ ಶಕ್ತಿ) ನಾಮ (ಜ್ಯೋತಿಷ್ಟೋಮಾದಿ) ಗಳ ಭೇದದಿಂದ ಅನೇಕ ವಿಶೇಷಣ ವಿಶಿಷ್ಟನಾಗಿ ಕರ್ಮಮಾರ್ಗದಲ್ಲಿ ಯಜ್ಞರೂಪದಿಂದ ಪ್ರಕಾಶಿತನಾಗು ತ್ತಾನೆ. ಯಜ್ಞಗಳಂತೆ ಯಜ್ಞಗಳ ಫಲವೂ ಭಗವತ್ ಸ್ವರೂಪ ವಾಗಿಯೇ ಇದೆ.

ಏಕೆಂದರೆ ಆ ಈಶ್ವರನು ಪರಮಾನಂದರೂಪನಾದರೂ ಶರೀರದೊಳಗೆ ವಿಷಯಾಕಾರ ಬುದ್ಧಿಯನ್ನು ಹೊಂದುತ್ತಾನೆ.

ಅಗ್ನಿಯು ಕಟ್ಟಿಗೆಯೊಳಹೊಕ್ಕಾಗ ಕಟ್ಟಿಗೆಯ ಧರ್ಮವಾದ ಚಿಕ್ಕ, ದೊಡ್ಡ, ಉದ್ದ, ಅಗಲ ಮುಂತಾದುವುಗಳಿಂದ ಯುಕ್ತನಾದಂತೆ ತೋರುವಂತೆ ಭಗವಂತನು ಉಪಾಧಿರಹಿತನಾದರೂ, ದೇಹದ ಸಂಯೋಗ ದಿಂದ ಆದರ ಧರ್ಮಗಳಿಂದೊಡಗೂಡಿದಂತೆ ತೋರುತ್ತಾನೆ. ಈ ದೇಹವು ಪ್ರಧಾನ (ಪ್ರಕೃತಿ) ಕಾಲ, ಆಶಯ (ವಾಸನಾ) ಮತ್ತು ಧರ್ಮ (ಶೋಕ ಮೋಹಾದಿಗಳು) ಗಳ ಸಂಗ್ರಹವಾಗಿದೆ. ಇವರಲ್ಲಿ ವಿಷಯಾಕಾರ ಬುದ್ಧಿಯು ಹುಟ್ಟುವುದೇನೂ ವಿಚಿತ್ರವಲ್ಲ. ಯಾರು ಭೂಮಿಯಲ್ಲಿ ದೃಢನಿಯಮದಿಂದ ನಿರಂತರವಾಗಿ ಯಜ್ಞಗಳ ಸ್ವಾಮಿಯಾದ, ಸಮಸ್ತ ಜಗತ್ತಿಗೂ ಗುರುವಾದ ಶ್ರೀ ಹರಿಯನ್ನು ತಂತಮ್ಮ ಧರ್ಮದಿಂದ ಭಜಿಸುವರೋ ಅಂತಹವರು ರಾಜನಾದ ನನ್ನ ಮೇಲೆ ಬಹಳ ಅನುಗ್ರಹವನ್ನೇ ಮಾಡುತ್ತಾರೆ. ಬ್ರಾಹ್ಮಣರೂ ಮತ್ತು ವೈಷ್ಣವರೂ ರಾಜಸೀಸಂಪತ್ತಿನಿಂದೊಡಗೂಡಿರದಿದ್ದರೂ ತಿತಿಕ್ಷೆ ತಪಸ್ಸು ಮತ್ತು ವಿದ್ಯಾರೂಪ ಸಂಪತ್ತುಗಳಿಂದ ಕೂಡಿರುತ್ತಾರೆ. ಆದುದರಿಂದ ರಾಜಕುಲದ ಶಾಸನವು ಬ್ರಾಹ್ಮಣರ ಮತ್ತು ವೈಷ್ಣವರ ಕುಲದ ಮೇಲೆ ಎಂದೆಂದೂ ಅಧಿಕಾರ ಮಾಡಬಾರದೆಂಬುದೇ ನನ್ನ ಆಜ್ಞೆಯಾಗಿದೆ. ಎಲ್ಲಕ್ಕೂ ಎಲ್ಲರಿಗೂ ಹಿರಿಯನಾದ ಪುರಾಣಪುರುಷ ನಾದ ಶ್ರೀಹರಿಯೂ ಬ್ರಾಹ್ಮಣ ಚರಣಗಳನ್ನು ವಂದಿಸಿಯೇ ಸ್ಥಿರ ಲಕ್ಷ್ಮಿಯನ್ನೂ ಜಗತ್ತನ್ನು ಪವಿತ್ರೀಕರಿಸುವ ಯಶಸ್ಸನ್ನೂ ಪಡೆದನು. ಸರ್ವಾಂತರ್ಯಾಮಿಯಾದ, ಬ್ರಾಹ್ಮಣ ಪ್ರಿಯನಾದ, ಸ್ವಯಂ ಪ್ರಕಾಶ ಮಾನನಾದ, ಈಶ್ವರನಾದ ಶ್ರೀಹರಿಯು ಬ್ರಾಹ್ಮಣಸೇವೆಯಿಂದಲೇ ಯಥೇಷ್ಟ ಸಂತೋಷವನ್ನು ಪಡೆದನಾದುದರಿಂದ ನೀವೆಲ್ಲರೂ ಆ ಹರಿಯ ಧರ್ಮವನ್ನೇ ಅನುಸರಣೆಮಾಡುತ್ತಾ ವಿನೀತಭಾವದಿಂದ ಆ ಬ್ರಾಹ್ಮಣ ಕುಲವನ್ನೇ ಸೇವೆಮಾಡಿರಿ. ಬ್ರಾಹ್ಮಣ ಕುಲದೊಡನೆ

ನಿತ್ಯಸೇವಾರೂಪ ಸಂಬಂಧವನ್ನು ಹೊಂದುವುದರಿಂದ ಮನುಷ್ಯನ ಚಿತ್ತವು ಶುದ್ಧಿಯಾಗುತ್ತದೆ. ಆಗ ಜ್ಞಾನಾದಿಗಳ ಅಭ್ಯಾಸವಿಲ್ಲದೆಯೇ ಪರಮ ಶಾಂತಿ ರೂಪ ಮೋಕ್ಷವು ಸಿಕ್ಕುವುದು. ಹವಿಸ್ಸನ್ನು ಭೋಜನ ಮಾಡುವ ದೇವತೆಗಳೂ, ಅಗ್ನಿ ಆದಿಗಳೂ, ಬ್ರಾಹ್ಮಣಮುಖಕ್ಕಿಂತಲೂ ಹೆಚ್ಚಿನವುಗಳಲ್ಲ. ಜ್ಞಾನರೂಪನಾದ ಸರ್ವಾಂತರ್ಯಾಮಿಯಾದ ಶ್ರೀ ಹರಿಯ ತೃಪ್ತಿಯೂ ಬ್ರಾಹ್ಮಣಮುಖದಿಂದಲೇ ಆಗುತ್ತದೆ. ತತ್ವ ಜ್ಞಾನಿಗಳಾದ ಪಂಡಿತರು ಪೂಜ್ಯರಾದ ಇಂದ್ರಾದಿ ದೇವತೆಗಳ ಹೆಸರನ್ನು ಹಿಡಿದು ಅಚೇತನವಾದ ಅಗ್ನಿಯ ಮೂಲಕ ಕೊಡುವ ಆಹುತಿಯಿಂದ ತೃಪ್ತನಾಗುವುದಕ್ಕಿಂತಲೂ ಹೆಚ್ಚಿನ ತೃಪ್ತಿಯನ್ನು ಶ್ರದ್ಧಾಪೂರ್ವಕ ಬ್ರಾಹ್ಮಣಮುಖದಲ್ಲಿ ಮಾಡಲ್ಪಡುವ ಹವನದಿಂದ ಶ್ರೀ ಹರಿಯು ಹೊಂದುತ್ತಾನೆ. ಯಾವುದರಲ್ಲಿ ಈ ಸಂಪೂರ್ಣ ವಿಶ್ವವು ಕನ್ನಡಿಯಲ್ಲಿನಂತೆ ಪ್ರತಿಬಿಂಬಿಸುವುದೋ ಅಂತಹ ನಿತ್ಯ, ಶುದ್ಧ, ಸನಾತನ ವೇದವನ್ನು ಈ ಬ್ರಾಹ್ಮಣರು ಶ್ರದ್ಧಾ, ತಪಸ್ಸು, ಮಂಗಳ (ಸತ್ಕರ್ಮವನ್ನು ಮಾಡುವುದು, ದುಷ್ಕರ್ಮಗಳನ್ನು ತ್ಯಜಿಸುವುದು) ಮೌನ, (ಅಧ್ಯಯನ ವಿರೋಧಿ ಮಾತುಗಳನ್ನು ತ್ಯಾಗ ಮಾಡುವುದು) ಸಂಯಮ (ಇಂದ್ರಿಯ ನಿಗ್ರಹ) ಸಮಾಧಿ (ಚಿತ್ತದ ಸ್ಥಿರತೆ) ಇವುಗಳಿಂದ ಧಾರಣೆಮಾಡುತ್ತಿರುತ್ತಾರೆ. ಹೇ ಆರ್ಯರೇ! ಅಂತಹ ಬ್ರಾಹ್ಮಣರ ಪವಿತ್ರ ಚರಣಧೂಳಿಯನ್ನು ನಾನು ಸದಾ ನನ್ನ ಕಿರೀಟದಲ್ಲಿ ಧಾರಣೆಮಾಡಲು ಆ ಶೆ ಪ ಡು ತ್ತೇ ನೆ. ಯಾರು ಬ್ರಾಹ್ಮಣರ ಪಾದಧೂಳಿಯನ್ನು ಶಿರಸ್ಸಿನಲ್ಲಿ ಧಾರಣೆಮಾಡುತ್ತಾರೋ ಅವರ ಸಂಪೂರ್ಣ ಪಾಪಗಳೂ ನಾಶವಾಗಿ ಸಮಸ್ತ ಸದ್ಗುಣಗಳೂ ತಮಗೆ ತಾವೇ ಅಂತಹ ಸಜ್ಜನರನ್ನು ಭಜಿಸುತ್ತವೆ. ಅಂತಹ ಸುಶೀಲ, ಸಜ್ಜನ, ಸಚ್ಚರಿತ್ರ, ಕೃತಜ್ಞ ಮತ್ತು ವೃದ್ಧಸಮ್ಮತರಾದ

ಮನುಷ್ಯರನ್ನು ಸಕಲ ಸಂಪತ್ತುಗಳೂ ಅನಾಯಾಸವಾಗಿ ಸೇವೆ ಮಾಡುತ್ತವೆ. ಅಂತಹ ಸರ್ವೋತ್ತಮ ಬ್ರಾಹ್ಮಣವಂಶವೂ ಧೇನು ಗಳಿಂದ ಮತ್ತು ಅನುಚರರಿಂದ ಒಡಗೂಡಿದ ಭಗವಾನ್ ವಿಷ್ಣುವೂ ನನ್ನ ಮೇಲೆ ಪ್ರಸನ್ನರಾಗಲಿ !" ಎಂಬುದೇ ನನ್ನ ಕೋರಿಕೆ.

ಹೀಗೆ ಮಹಾರಾಜಾ ಪೃಥುವು ಹೇಳುತ್ತಿರಲು ದೇವತೆಗಳೂ, ಬ್ರಾಹ್ಮಣರೂ "ಸರಿ. ಸರಿ" ಎನ್ನುತ್ತಾ ರಾಜನನ್ನು ಪ್ರಶಂಸೆಮಾಡ ಲಾರಂಭಿಸಿದರು. 'ಸತ್ಪುತ್ರನಿಂದ ಸದ್ಗತಿಯಾಗುವುದು." ಎಂಬ ಮಾತು ಸತ್ಯ. ಏಕೆಂದರೆ ಬ್ರಾಹ್ಮಣಶಾಪದಿಂದ ಮರಣಹೊಂದಿದ ವೇನನ ಸತ್ಪುತ್ರನಾದ ಈ ಪೃಥುಮಹಾಜನಿಂದ ತಂದೆಗೆ ಸದ್ಗತಿ ಯಾಯಿತು. ನರಕವಾಸವೂ ತಪ್ಪಿತು. ಹೀಗೆಯೇ ಹಿರಣ್ಯಕಶಿಪುವು ಸತ್ಪುತ್ರನಾದ ಪ್ರಹ್ಲಾದನಿಂದ ನರಕವಾಸವನ್ನು ತಪ್ಪಿಸಿಕೊಂಡನು.

"ಹೇ ವೀರಶ್ರೇಷ್ಠ ಪೃಥುಮಹಾರಾಜ ! ನೀನು ಸಹಸ್ರಾರು ವರ್ಷಗಳು ಬದುಕಿ ಚಿರಜೀವಿಯಾಗು ! ಸಂಪೂರ್ಣ ವಿಶ್ವಕ್ಕೆ ಅಧಿ ಪತಿಯಾದ ಶ್ರೀಹರಿಯಲ್ಲಿ ನಿನ್ನ ಭಕ್ತಿಯು ಅಚಲವಾಗಿ ನಿಂತಿದೆ. ಪವಿತ್ರ ಕೀರ್ತಿಶಾಲಿಯಾದ ಮಹಾರಾಜ! ನಿನ್ನಂತಹ ಹರಿಭಕ್ತ ನನ್ನು ರಾಜನನ್ನಾಗಿ ಪಡೆದ ನಾವೇ ಧನ್ಯರು. ನಿನ್ನನ್ನೇ ಶ್ರೀ ಹರಿಯೆಂದು ತಿಳಿಯುತ್ತೇವೆ. ಪ ವಿ ತ್ರ ಕೀ ರ್ತಿ ಶಾ ಲಿ ಗ ಳಾ ದ ಮಹಾತ್ಮರು ಯಾರನ್ನು ವಂದಿಸುವರೋ ಅಂತಹ ಪರಮಾತ್ಮ ನಂತೆಯೇ ನೀನು ಪ್ರಜೆಗಳಿಗೆ ಧರ್ಮೋಪದೇಶಮಾಡುತ್ತಿರುವೆ ! ದಯಾಶಾಲಿಯಾದ ನೀನು ಹೀಗೆ ಉಪದೇಶಮಾಡುವುದು ಯುಕ್ತವೇ ಸರಿ ! ನೀನು ಪ್ರಜಾಪರಿಪಾಲಕನು ! ಪ್ರಜೆಗಳ ಮೇಲೆ ನಿನಗೆ ತುಂಬಾ ಸ್ನೇಹವಿದೆ. ಅಜ್ಞಾನದಿಂದ ಅಂಧರಾಗಿದ್ದ ನಮ್ಮನ್ನು ಈ

ದಿನ ನೀನು ನಿನ್ನ ಉಪದೇಶದಿಂದ ಕೃತಾರ್ಥರನ್ನಾಗಿಮಾಡಿ ಜ್ಞಾನ ದೃಷ್ಟಿಯನ್ನು ಕೊಟ್ಟು ಉಧ್ಧರಿಸಿರುವೆ!"

ಸಭಾಸದರು ಈ ರೀತಿಯಾಗಿ ಪೃಥು ಮಹಾರಾಜನನ್ನು ಹೊಗಳುತ್ತಿರುವಾಗ ಆಕಾಶಮಾರ್ಗದಿಂದ ಸೂರ್ಯನಂತೆ ತೇಜಃ ಪುಂಜರಾದ ಬ್ರಹ್ಮಮಾನಸಪುತ್ರರಾದ ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರರೆಂಬ ನಾಲ್ವರು ಮುನಿಗಳು ಒಟ್ಟಿಗೇ ಆ ಸಭೆಯಲ್ಲಿ ಬಂದಿಳಿದರು. ಪೃಥುಮಹಾರಾಜನು ಅವರ ಘನತೆಗೆ ತಕ್ಕಂತೆ ಸಭಾ ಮಧ್ಯದಲ್ಲಿ ಸ್ವರ್ಣ ಸಿಂಹಾಸನಗಳನ್ನು ಹಾಕಿಸಿ ಸತ್ಕರಿಸಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ವಿಜ್ಞಾಪಿಸಿಕೊಂಡನು.

"ಹೇ, ಮುನಿವರ್ಯರೆ! ನಿಮ್ಮ ದರ್ಶನದಿಂದ ನಾನು ಧನ್ಯನಾದೆನು. ತಮ್ಮಂತಹವರ ದರ್ಶನವು ಯೋಗಿಗಳಿಗೂ ದುರ್ಲಭವು. ಎಲ್ಲ ವಿಷಯಗಳನ್ನೂ—ಪದಾರ್ಥಗಳನ್ನೂ ಸಾಕ್ಷಿಯಾಗಿ ನೋಡುತ್ತಿರುವ ಆತ್ಮನನ್ನು ದೃಶ್ಯ ಪದಾರ್ಥಗಳು ಹೇಗೆ ನೋಡ ಲಾರವೋ ಹಾಗೆಯೇ ತಾವುಗಳು ಜಗತ್ತಿನಲ್ಲಿ ಸಂಚರಿಸುತ್ತಿದ್ದರೂ ಜಗತ್ತಿನ ಜನಗಳು ನಿಮ್ಮನ್ನು ನೋಡಲಾರರು. ತಮ್ಮಂತಹ ಮಹಾತ್ಮರ, ಸಾಧುಗಳ ದರ್ಶನವೇ ದೊಡ್ಡಪುಣ್ಯ. ಗೃಹಸ್ಥಾಶ್ರಮ ದಲ್ಲಿರುವ ಸಾಧುಗಳು ಧನಹೀನರಾದಾಗ್ಯೂ ಧನ್ಯರು. ಅವರು ಎಲ್ಲಿ ಯಾವ ಸ್ಥಿತಿಯಲ್ಲಿದ್ದರೂ ಪೂಜ್ಯರೇ ಸರಿ. ಅಂತಹುದರಲ್ಲಿ ತಮ್ಮಂತಹ ಮಹಾತಪಸ್ವಿಗಳಾದ ವೈರಾಗ್ಯ ಚಕ್ರವರ್ತಿಗಳ ದರ್ಶನವು ಭಾಗ್ಯವಲ್ಲವೇ? ಎಂತಹ ಧನ ಕನಕಾದಿ ಐಶ್ವರ್ಯಗಳಿದ್ದರೂ ವೈಷ್ಣವ ಜನರ ಪಾದಧೂಳಿಯು ಯಾರ ಮನೆಯಲ್ಲಿ ಬೀಳುವುದಿಲ್ಲವೋ ಅಂತಹವರು ದರಿದ್ರರೇ ಸರಿ. ತಾವು ಬಾಲ್ಯದಿಂದಲೂ ಧೈರ್ಯ

ಧಾರಣೆ ಮಾಡಿ ಅನೇಕ ಕಠಿಣ ವ್ರತಗಳನ್ನು (ನಿಯಮಗಳನ್ನು) ಅನುಷ್ಠಾನ ಮಾಡಿರುವಿರಿ. ಆದುದರಿಂದ ತಾವು ಈ ಸಭೆಗೆ ಬರುವಾಗ ಮಾರ್ಗಮಧ್ಯದಲ್ಲಿ ಪ್ರಯಾಣವು ಸುಖವಾಗಿ ನಡೆಯಿತೆ ಎಂದು ಕುಶಲ ಪ್ರಶ್ನೆಯನ್ನು ಕೇಳುವುದು ವ್ಯರ್ಥವೇ. ನಮ್ಮ ನಮ್ಮ ದೋಷದಿಂದ ಸಂಪೂರ್ಣ ದುಃಖಗಳಿಗೆ ಕ್ಷೇತ್ರವಾದ ಸಂಸಾರ ದಲ್ಲಿ ಬಿದ್ದ ನಾವುಗಳು ಇಂದ್ರಿಯಭೋಗಗಳನ್ನು ಪರಮ ಪುರುಷಾರ್ಥವೆಂದು ತಿಳಿಯುತ್ತೇವೆ. ತಾವು ಸದಾ ಆತ್ಮಾನಂದದಲ್ಲಿ ರಮಣಮಾಡುತ್ತಾ 'ಇದು ಬೇಕು, ಇದು ಬೇಡ' ಎಂಬ ಇಷ್ಟಾ ನಿಷ್ಟರೂಪ ದ್ವಂದ್ವಭೇದ ಬುದ್ಧಿಯನ್ನೇ ಮರೆತಿರುವಿರಿ. ಸಂಸಾರ ತಾಪದಿಂದ ತಪ್ತರಾದವರಿಗೆ ತಾವು ಪರಮಮಿತ್ರರು. ಇದರಲ್ಲಿ ಸಂದೇಹವಿಲ್ಲ. ಈ ಸಂಸಾರದಲ್ಲಿ–ಜಗತ್ತಿನಲ್ಲಿ ಮನುಷ್ಯನಿಗೆ ಮಂಗಳ ಕಾರಿಯಾದ ಮುಕ್ತಿಯನ್ನು ಪಡೆಯಬಲ್ಲ ಉಪಾಯವು ಯಾವುದು? ಎಂಬುದನ್ನು ತಿಳಿಸುವ ಕೃಪೆಮಾಡಬೇಕು. ಧೀರ ಪುರುಷರ ಸರ್ವಸ್ವ ವಾದ ಪರಮಾತ್ಮನೇ ನಿಮ್ಮಂತಹ ಸಿದ್ಧ ಪುರುಷರ ರೂಪವನ್ನು ಧಾರಣೆಮಾಡಿಕೊಂಡು ಲೋಕಾನುಗ್ರಹಕ್ಕಾಗಿ ಸಂಚರಿಸುತ್ತಿರುವ ನೆಂದು ನಾನು ತಿಳಿಯುತ್ತೇನೆ." ಎಂದು ಗಂಭೀರ ಅರ್ಥಯುಕ್ತ ವಾದ, ಅಲ್ಪಾಕ್ಷರವುಳ್ಳ, ಆದರೂ ಸಾರವತ್ತಾದ ರಾಜನ ಮಾತುಗಳನ್ನು ಕೇಳಿ ಸಂತೋಷಪಟ್ಟವರಾಗಿ ಆ ಮುನಿಗಳಲ್ಲೊಬ್ಬರಾದ ಸನತ್ಕುಮಾರರು ಮಂದಹಾಸದಿಂದ ಹೇಳಲಾರಂಭಿಸಿದರು—

"ಹೇ ಮಹಾರಾಜ! ನೀನು ಸಮಸ್ತರಿಗೂ ಹಿತಚಿಂತಕ ನಾದ ಪಂಡಿತನು. ನೀನು ಬಲು ಒಳ್ಳೆಯ ಪ್ರಶ್ನೆಯನ್ನೇ ಮಾಡಿರುವೆ. ಸಾಧುಗಳಿಗೆ ಇಂತಹ ಬುದ್ಧಿಯಿರುವುದು ವಿಚಿತ್ರವೇನಲ್ಲ. ಸಾಧು ಗಳ ಸಮಾಗಮವು ಇಬ್ಬರಿಗೂ (ಕೇಳುವವರಿಗೂ, ಹೇಳುವವರಿಗೂ)

ಶ್ರೇಯಸ್ಕರವಾದುದು. ಪ್ರಶ್ನೆಯಿಂದ, ಉತ್ತರದಿಂದ ಹೇಳುವ ಕೇಳುವವರಿಬ್ಬರಿಗೂ ಮಂಗಳವಾಗುವುದು. ರಾಜ! ಮಧುಸೂದನ ನಾದ ಶ್ರೀಹರಿಯ ಚರಣಗಳಲ್ಲಿ ನನಗೆ ಅಪಾರವಾದ ಭಕ್ತಿಯು ಇದೆ. ಈ ಭಕ್ತಿಯು ಮನಸ್ಸಿನ ಮಲಿನವನ್ನೂ, ವಾಸನಾರೂಪೀ ಕೊಳೆಯನ್ನೂ, ಕಾಮವನ್ನೂ (ವಿಷಯೇಚ್ಛೆ) ದೂರಮಾಡಿ ಅಂತಃ ಕರಣವನ್ನು ಶುದ್ಧಮಾಡುವುದು. ಆದರೆ ಇಂತಹ ಭಕ್ತಿಯು ದುರ್ಲಭವು. ಸಮಸ್ತ ಶಾಸ್ತ್ರಗಳನ್ನೂ ವಿಚಾರಮಾಡಿ ನೋಡಿದರೆ ಮನುಷ್ಯನ ಕಲ್ಯಾಣಕ್ಕೆ ಎರಡೇ ಎರಡು ಪ್ರಧಾನವಾದ ಕಾರಣ ವನ್ನು ಗುರ್ತಿಸಬಹುದು. ಒಂದು ಆತ್ಮನಿಗಿಂತ ಭಿನ್ನವಾದ ಮಿಥ್ಯಾ ಶರೀರಾದಿಗಳಲ್ಲಿ ವೈರಾಗ್ಯವು. ಮತ್ತೊಂದು ನಿರ್ಗುಣ ಪರಬ್ರಹ್ಮ ನಾದ ಪರಮಾತ್ಮನಲ್ಲಿ ಧೃಡಭಕ್ತಿಯೂ, ಶ್ರದ್ಧೆಯೂ, ಭಾಗವತ ಧರ್ಮದಲ್ಲಿ ಆಸಕ್ತಿಯೂ, ತತ್ತ್ವವನ್ನು ತಿಳಿಯುವ ಇಚ್ಛೆಯೂ, ಆಧ್ಯಾತ್ಮಿಕ ಯೋಗದಲ್ಲಿ ನಿಷ್ಠೆಯೂ, ಯೋಗಿಗಳ ಸೇವೆಯೂ, ಪವಿತ್ರ ಯಶಸ್ಸುಳ್ಳ ಶ್ರೀಹರಿಯ ಕಥೆಯನ್ನು ನಿತ್ಯವೂ ಹೇಳುವು ದರಲ್ಲಿ ಕೇಳುವುದರಲ್ಲಿ ಆಸಕ್ತಿಯೂ, ತಮೋಗುಣಿಗಳು ಮತ್ತು ರಜೋಗುಣಿಗಳಾದವರ ಸಂಗದಲ್ಲಿ (ಕ್ರೋಧೀ ಕಾಮಿಗಳಲ್ಲಿ) ಬೇಸರವೂ ಅರ್ಥಕಾಮಗಳ ತ್ಯಾಗವೂ, ಆತ್ಮನಲ್ಲಿ ಸಂತೋಷವೂ ಹರಿಕಥೆ ಯನ್ನು ಕೇಳುವುದರಿಂದುಂಟಾದ ಶಾಂತಿಲಾಭದ ನಂತರ ಏಕಾಂತ– ನಿರ್ಜನ ಪ್ರದೇಶದಲ್ಲಿರಲು ಅಭಿರುಚಿಯೂ ಮೇಲೆ ಹೇಳಿದ ವೈರಾಗ್ಯವೂ (ಆತ್ಮನಲ್ಲದೆ ಉಳಿದ ದೇಹಾದಿ ಮಿಥ್ಯವಸ್ತುಗಳಲ್ಲಿ ಆಸಕ್ತಿಯು ಇಲ್ಲದಿರುವಿಕೆ) ಮತ್ತು ಆತ್ಮನಲ್ಲಿ ಧೃಡಭಕ್ತಿಯೂ ಹುಟ್ಟುತ್ತವೆ. ಅಹಿಂಸೆಯೂ (ಮನಸ್ಸಿನಿಂದ, ವಾಣಿಯಿಂದ, ಕಾಯದಿಂದ ಯಾರಿಗೂ ದುಃಖಕೊಡದಿರುವಿಕೆ) ಪರಮಹಂಸವೃತ್ತಿಯೂ (ಶಾಂತಿ ಪ್ರಧಾನ

ಸ್ವಭಾವವೂ) ಸ್ಮೃತಿಯೂ (ಆತ್ಮಹಿತವನ್ನು ಮರೆಯದಿರುವುದು) ಭಗವದ್ಗುಣಾನುವಾದ ರೂಪವಾದ ಅಮೃತವನ್ನು ಪಾನಮಾಡು ವುದೂ, (ಅಮೃತವಂತಹ ಹರಿಯ ಮಧುರ ಚರಿತ್ರೆಯನ್ನು ಸ್ಮರಿಸು ವುದು) ಇಂದ್ರಿಯಗಳನ್ನೂ ಸ್ವಾಧೀನದಲ್ಲಿಟ್ಟುಕೊಳ್ಳುವುದೂ, ಕಾಮನೆ ಗಳ ತ್ಯಾಗ, ವ್ರತಾದಿ ನಿಯಮಗಳೂ, ಯಾವ ಧರ್ಮ ಅಥವಾ ಮತವನ್ನು ನಿಂದೆಮಾಡದಿರುವುದೂ, ತನಗೆ ಒಳ್ಳೆಯದಾಗಬೇಕೆಂಬ ಕರ್ಮಗಳನ್ನೇ ಮಾಡದಿರುವುದೂ, (ಮಂಗಳ ಅಮಂಗಳಗಳನ್ನು ಒಂದೇ ರೀತಿಯಾಗಿ ನೋಡುವುದು) ಶೀತೋಷ್ಣರೂಪ ದ್ವಂದ್ವದ ಧರ್ಮ ಗಳನ್ನು ಸಹಿಸುವುದೂ, ಹರಿಭಕ್ತರ ಶ್ರೋತ್ರಗಳಿಗೆ ಭೂಷಣವಾದ ಹರಿಗುಣಗಳನ್ನು ಬಾರಿಬಾರಿಗೂ ಹೇಳಿ ಕೇಳುವುದರಿಂದ ಹುಟ್ಟುವ ಭಕ್ತಿಯೂ, ಕಾರ್ಯ (ಕೇಳುವುದು, ಮಾತನಾಡುವುದು, ನೋಡುವುದು ಮುಂತಾದುವು) ಕಾರಣ (ಚಕ್ಷುರಾದಿ ಇಂದ್ರಿಯ) ಗಳ ಸಂಗ (ಅಹಂಭಾವ) ವನ್ನು ತ್ಯಾಗಮಾಡುವುದು, ಮುಂತಾದುವುಗಳಿಂದ ನಿರ್ಗುಣ ಬ್ರಹ್ಮನಲ್ಲಿ ಅನಾಯಾಸವಾಗಿ ರುಚಿಯು ಉಂಟಾಗುತ್ತದೆ. ಮೇಲೆ ಹೇಳಲ್ಪಟ್ಟ ಉಪಾಯಗಳಿಂದ ನಿರ್ಗುಣ ಬ್ರಹ್ಮನಲ್ಲಿ ನಿಷ್ಠೆಯು ನಿಂತ ನಂತರ ಗುರುವಿನ ಸೇವೆಯನ್ನು ಮಾಡುವುದು ಉಚಿತವು. ಹೀಗೆ ಮಾಡುವುದರಿಂದ ಉರಿಯುತ್ತಿರುವ ಬೆಂಕಿಯು ತನ್ನ ಉತ್ಪತ್ತಿ ಸ್ಥಾನವಾದ ಕಟ್ಟಿಗೆಯನ್ನು ಹೇಗೆ ಸುಟ್ಟು ಹಾಕುವುದೋ ಹಾಗೆ ಆತನ ವಾಸನಾಸಹಿತವಾದ ಅಭಿಮಾನಮಯ ಲಿಂಗಶರೀರ (ನಾನು ಮಾಡುತ್ತೇನೆ, ನೋಡುತ್ತೇನೆ, ಕೇಳುತ್ತೇನೆ ಇತ್ಯಾದಿ ಭಾವ) ವೂ ಜ್ಞಾನ ವೈರಾಗ್ಯದ್ವಾರಾ ನಷ್ಟವಾಗುತ್ತದೆ. ಅಹಂಕಾರರೂಪ ವಾದ ಲಿಂಗಶರೀರವೇ ಜೀವನಿಗೆ ಆವರಣರೂಪಬಂಧನವು.

ಪಂಚಭೂತಗಳ ಸೂಕ್ಷ್ಮಾಂಶಗಳಾದ ಇಂದ್ರಿಯಗಳೇ ಲಿಂಗಶರೀರದ ಪ್ರಧಾನಅಂಶವು. ಹೀಗೆ ಹೃದಯ* ಅಥವಾ ಲಿಂಗ ಶರೀರ ರೂಪೀ ಉಪಾಧಿಯು ದೂರವಾದ ನಂತರ "ನಾನು ಮಾಡುತ್ತೇನೆ' ಎಂಬ ಮುಂತಾದ ಭಾವವು ಇರುವುದಿಲ್ಲ. ಒಳಗೆಯೂ ಹೊರಗೆಯೂ "ಬ್ರಹ್ಮರೂಪನಾದ ನಾನು ಇದ್ದೇನೆ" ಎಂಬ ಭಾವವು ಹುಟ್ಟುತ್ತದೆ. ಅಂದರೆ ಆ ಪುರುಷನು ಹೊರಗೆ ಘಟಪಟ ಮುಂತಾದ ಪದಾರ್ಥಗಳನ್ನು ಮತ್ತು ಒಳಗೆ ಸುಖ ದುಃಖ ಮುಂತಾದುವುಗಳನ್ನು ಕಾಣಲಾರನು. ಅಥವಾ ಅನುಭವಮಾಡಲಾರನು. ಏಕೆಂದರೆ ದೃಶ್ಯ (ಜಗತ್ತು) ದ್ರಷ್ಟಾ [ಆತ್ಮ]ಗಳ ಮಧ್ಯದಲ್ಲಿನ ವ್ಯವಧಾನ ಅಥವಾ ಭೇದಬುದ್ಧಿಯು ಹೋಗಲಾರಂಭಿಸುತ್ತದೆ. ನಿದ್ರೆಯಿಂದ ಎಚ್ಚೆತ್ತ ನಂತರ ಸ್ವಪ್ನದಲ್ಲಿನ ದೃಶ್ಯ ಮತ್ತು ದ್ರಷ್ಟಾ ಈ ಎರಡೂ ಹೇಗೆ ಕಾಣಲಾರವೋ ಹಾಗೆಯೇ ಸಮಾಧಿಯ ನಿದ್ರೆಯಿಂದ ಎಚ್ಚೆತ್ತ ನಂತರ ಈಜಗತ್ತು ಸ್ವಪ್ನದಂತೆ ಸುಳ್ಳಾಗಿ ಕಾಣಬರುವುವು. ಮಹಾರಾಜ! ಉಪಾಧಿಸ್ವರೂಪವಾದ ಅಂತಃಕರಣ ಅಥವಾ ಲಿಂಗ ಶರೀರವು ಇರುವವರೆಗೂ ಪುರುಷನು ದ್ರಷ್ಟಾ [ಆತ್ಮ] ದೃಶ್ಯ [ಇಂದ್ರಿಯ ವಿಷಯ] ಮತ್ತು ಅಹಂಕಾರ ಈ ಮೂರನ್ನೂ ಭೇದಬುದ್ಧಿಯಿಂದ ನೋಡುತ್ತಾನೆ. ಲಿಂಗಶರೀರವು ನಷ್ಟವಾದ ನಂತರ ಜೀವನಿಗೆ ಆ ಭ್ರಮೆಯು ಇರುವುದಿಲ್ಲ. ವ್ಯವಹಾರದಲ್ಲಿಯೂ ಇದಕ್ಕೆ ಪ್ರಮಾಣವನ್ನು ಕೊಡಬಹುದು. ಭೇದಬುದ್ಧಿಯನ್ನು ಹುಟ್ಟಿಸುವ ಜಲ ಅಥವಾ ದರ್ಪಣಗಳು ಸಮೀಪದಲ್ಲಿರುವವರೆಗೂ ತನ್ನದೇ ಆದ ಮುಖದಲ್ಲಿ ಮತ್ತು ಅದರ ಪ್ರತಿಬಿಂಬದಲ್ಲಿ ಭೇದಬುದ್ಧಿಯು

---

* ಚಿತ್ತ, ಬುದ್ಧಿ, ಮನಸ್ಸು ಅಹಂಕಾರಗಳು.

ಇರುತ್ತದೆ. ಜಲ ಅಥವಾ ದರ್ಪಣದ ಉಪಾಧಿಯು ಇಲ್ಲದಿರುವಾಗ ಆ ಭ್ರಮೆಯೇ ಇರುವುದಿಲ್ಲ. ಯಾವ ವ್ಯಕ್ತಿಯು ವಿಷಯಗಳ ಚಿಂತನೆಯನ್ನು ಮಾಡುತ್ತಿರುತ್ತಾನೆಯೋ ಅಂತಹವನ ಇಂದ್ರಿಯಗಳು ವಿಷಯಗಳ ಕಡೆಗೇ ಎಳೆಯಲ್ಪಡುತ್ತಿರುತ್ತವೆ. ಹಿಂದಿನಿಂದ ಆ ಇಂದ್ರಿಯಗಳು ಮನಸ್ಸನ್ನು ತಮ್ಮೆಡೆಗೆ ಎಳೆದು ಕೊಳ್ಳುತ್ತವೆ. ದಡದಲ್ಲಿರುವ ನೀರುವಂಜಿಮರವು ಕೆರೆಯ ನೀರನ್ನು ಹೇಗೆ ಎಳೆದು ಕೊಳ್ಳುವುದೋ ಹಾಗೆಯೆ ಮನಸ್ಸು ಚೇತನವನ್ನು (ಬುದ್ಧಿಯ ವಿಚಾರಶಕ್ತಿ) ತನ್ನೆಡೆಗೆ ..ಯುಕೊಳ್ಳುವುದು. ಚೇತನವು ನಷ್ಟ ವಾದ ನಂತರ ಸ್ಮೃತಿಯು [ ಪೂರ್ವಾಪರ ವಿಚಾರಜ್ಞಾನ ] ಭ್ರಷ್ಟ ವಾಗುವುದು. ನಂತರ ಆತ್ಮನಿಗೆ ಯುಕ್ತಾಯುಕ್ತ ವಿವೇಚನ ಜ್ಞಾನವೇ ಇರುವುದಿಲ್ಲ. ಇದನ್ನೇ ವಿದ್ವಾಂಸರು "ಆತ್ಮನಿಂದ ಆತ್ಮನ ನಾಶ" ಎನ್ನುತ್ತಾರೆ. ಆತ್ಮೋನ್ನತಿಯೇ ಮನುಷ್ಯನ ಸ್ವಾರ್ಥವು. ಆತ್ಮನಿಂದ ಆತ್ಮನ ನಾಶಮಾಡಿಕೊಳ್ಳುವುದಕ್ಕಿಂತಲೂ ಹೆಚ್ಚಿನ ಹಾನಿಯೇ ಇಲ್ಲ. ವಿಷಯ ಮತ್ತು ಕಾಮನೆಗಳ ಧ್ಯಾನವೇ ಮನುಷ್ಯನ ಸ್ವಾರ್ಥನಾಶಕ್ಕೆ ಕಾರಣಗಳು ಇವುಗಳ ದೆಸೆಯಿಂದಲೇ ಜ್ಞಾನವಿಜ್ಞಾನಗಳೆರಡನ್ನೂ ಕಳೆದುಕೊಂಡು ಜಡತ್ವವನ್ನು ಹೊಂದು ತ್ತಾನೆ. ಸಂಸಾರಸಮುದ್ರದಿಂದ ಪಾರಾಗಲು ಇಚ್ಛಿಸುವ ಮನುಷ್ಯನು ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾಧನೆಯಲ್ಲಿ ವಿಘ್ನವನ್ನು ತಂದೊಡ್ಡುವ ವಸ್ತುಗಳ ಸಂಗವನ್ನು ಎಂದೆಂದಿಗೂ ಮಾಡಬಾರದು. ಮೇಲೆ ಹೇಳಿದ ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷವೇ ಸರ್ವ ಶ್ರೇಷ್ಠವು. ಏಕೆಂದರೆ ಧರ್ಮಾರ್ಥಕಾಮಗಳಿಗೆ ಕಾಲನ ಭಯವಿದೆ. ಆದುದರಿಂದ ಮೋಕ್ಷಪ್ರಾಪ್ತಿಗೇ ಪ್ರಯತ್ನ ಮಾಡಬೇಕು. ಬ್ರಹ್ಮನಿಂದ ಹಿಡಿದು "ನಾವು" ಎನ್ನುವವರೆಗೆ ಇರುವ ಎಲ್ಲ ವಸ್ತುಗಳೂ ಕಾಲ

ನಿಂದ ಗುಣಗಳು ಕ್ಷೋಭೆಯನ್ನು ಹೊಂದಿದ ಮೇಲೆಯೇ ಉತ್ಪನ್ನ ವಾದುವು. ಆದುದರಿಂದ ಎಲ್ಲ ಶರೀರಧಾರಿಗಳೂ ಕಾಲನಿಗೇ ಅಧೀನರೇ. ಕಾಲರೂಪೀ ಈಶ್ವರನ ಭಯವು ಎಲ್ಲರಿಗೂ ಇದೆ. ಆದುದರಿಂದ ಮೋಕ್ಷವಿಲ್ಲದೇ ಅವುಗಳ ಕಲ್ಯಾಣವೇ ಇಲ್ಲ. ಇಂದ್ರಿಯ ಪ್ರಾಣ ಬುದ್ಧಿ ಅಹಂಕಾರಗಳಿಂದ ಆವರಿಸಲ್ಪಟ್ಟ ಚರಾಚರ ಪ್ರಾಣಿಗಳ ಹೃದಯದಲ್ಲಿ ಜೀವನ-ನಿಯಂತೃವಿನ ರೂಪದಲ್ಲಿ ಪ್ರಕಾಶಮಾನನಾಗಿರುವ ಭಗವಂತನಾವನೋ ಅದೇ ಪರಮಾತ್ಮನೇ ಪರಬ್ರಹ್ಮನೇ ನಾನು ಎಂದು ಮುಂಚೆ ತಿಳಿದುಕೋ. ಅವನೊಬ್ಬನೇ ನಿತ್ಯನು. ಉಳಿದುದೆಲ್ಲವೂ ಅನಿತ್ಯವು. ಆ ಭಗವಂತನು ಪ್ರತ್ಯಕ್ಷನು ಅವನಿಲ್ಲದ ಸ್ಥಳವೇ ಇಲ್ಲ. ಆತನು ಸರ್ವವ್ಯಾಪಿಯು ಅಂತರ್ಯಾಮಿಯು ಆ ಈಶ್ವರನು ಚರಾಚರ ಜಗತ್ತಿನೊಳಗೆ ತುಂಬಿಕೊಂಡಿದ್ದರೂ ಮಾಯೆಯಿಂದ ಮುಕ್ತನಾಗಿದ್ದಾನೆ. ಕತ್ತಲಿನಲ್ಲಿ ಉಂಟಾಗುವ ಹಗ್ಗದೊಳಗಿನ ಹಾವಿನ ಭ್ರಾಂತಿಯು ಬೆಳಕಿನಲ್ಲಿ ಹೇಗೆ ಇರುವುದಿಲ್ಲವೋ ಹಾಗೆ ಕಾರ್ಯ ಕಾರಣಮಯಿಯಾದ ಮಾಯೆಯ ಭ್ರಾಂತಿಯು ಅಜ್ಞಾನದಿಂದ ತೋರಿದರೂ ವಾಸ್ತವವಾಗಿ ಆತ್ಮನು ಲಿಪ್ತನಲ್ಲ ಆತನು ನಿತ್ಯನು ಶುದ್ಧನು. ಬೋಧಸ್ವರೂಪನು. ಆದುದರಿಂದ ತ್ರಿಗುಣಮಯ ಕರ್ಮಗಳಿಂದ ಮಲಿನವಾದ ಮಾಯೆಯಿಂದ ಹೊರಗಾಗಿದ್ದಾನೆ. ನಾವು ಅದೇ ನಿರ್ಗುಣ ನಿರಾಕಾರನಾದ ಈಶ್ವರನನ್ನು ಶರಣು ಹೋಗಿದ್ದೇವೆ. ಸಾಧುಜನಗಳು ಆ ಪುರುಷನ ಚರಣಕಮಲಗಳ ಕಾಂತಿಯನ್ನು ಧ್ಯಾನಿಸುತ್ತಾ ಕರ್ಮಗ್ರಥಿತ ಅಹಂಕಾರರೂಪ ಗ್ರಂಥಿಯನ್ನು ಹೇಗೆ ಕತ್ತರಿಸಿ ಹಾಕಲು ಶಕ್ತರಾಗುವರೋ ವಿಷಯಗಳಿಂದ ಇಂದ್ರಿಯ

ಗಳನ್ನು ಹೊರನೆಳೆದು ಅವುಗಳ ವೇಗವನ್ನು ನಿಲ್ಲಿಸಿ ಸಾಧನೆ ಮಾಡುವ ಯೋಗಿಗಳು ಹಾಗೆ ಅಷ್ಟು ಸುಲಭವಾಗಿ ಅಹಂಕಾರ* ಗ್ರಂಥಿಯನ್ನು ಕತ್ತರಿಸಲು ಶಕ್ತರಾಗಲಾರರು. ಆದುದರಿಂದ ನೀನು ಶರಣಾಗತರಕ್ಷಕನಾದ ಆ ವಾಸುದೇವನನ್ನು ಭಜಿಸು.

ಈ ಘೋರ ಸಂಸಾರಸಾಗರದಲ್ಲಿ ಕಾಮ, ಕ್ರೋಧ, ಲೋಭ ಮೋಹ, ಮದ, ಮತ್ಸರಗಳೆಂಬ ಆರು ಮೊಸಳೆಗಳಿರುವುವು. ಯಾರು ಈಶ್ವರನನ್ನು ಆಶ್ರಯಿಸದೇ ಈ ಸಂಸಾರಸಾಗರದಿಂದ ಪಾರಾಗಲು ಇಚ್ಛಿಸುವರೋ ಬರೀ ಜ್ಞಾನಮಾರ್ಗವನ್ನೇ ಆಶ್ರಯಿಸಿರುವ ಅಂತಹ ಸಾಧಕನು ಇವರಲ್ಲಿ ಬಿದ್ದು ಅನೇಕ ಕಷ್ಟಗಳನ್ನು ಅನುಭವಿಸುತ್ತಾನೆ ಇದರಿಂದ ಪಾರಾಗಲೂ ಸಹ ಆತನು ಬಹು ಕಷ್ಟಪಡಬೇಕಾಗುವುದು. ಆದುದರಿಂದ ಎಲೈ! ರಾಜನೇ! ನೀನು ಭಜನೆಗೆ ಯೋಗ್ಯ ಗಳಾದ ಶ್ರೀ ಹರಿಯ ಪಾದಕಮಲಗಳನ್ನು ನಾವೆಯನ್ನಾಗಿ ಮಾಡಿ ಕೊಂಡು ಅದರ ಸಹಾಯದಿಂದ ಕ್ಲೇಶಮಯವಾದ ದುಸ್ತರಸಂಸಾರ ಸಾಗರದಿಂದ ಪಾರಾಗಬೇಕು. ”

ಬ್ರಹ್ಮಜ್ಞಾನಿಯಾದ ಬ್ರಹ್ಮಪುತ್ರನಾದ ಸನತ್ಕುಮಾರನು ಪೃಥುರಾಜನಿಗೆ ಈ ರೀತಿ ಉಪದೇಶಮಾಡಲು ಆತನು “ ತನಗೆ ಶ್ರೀ ಹರಿಯು ನನ್ನ ಯಜ್ಞದ ಕೊನೆಯಲ್ಲಿ ಸನತ್ಕುಮಾರರು ಬಂದು ಉಪದೇಶಮಾಡುವರೆಂದು ಅಪ್ಪಣೆ ಕೊಡಿಸಿದ್ದನು. ಅದನ್ನು ಈಗ ತಾವು ಪೂರ್ಣಮಾಡಿದಿರಿ. ನಾನೀಗ ತಮಗೆ ಗುರುದಕ್ಷಿಣೆಯನ್ನೇನು

* ಜ್ಞಾನಮಾರ್ಗಕ್ಕಿಂತ ಭಕ್ತಿಮಾರ್ಗವು ಹೆಚ್ಚು ಸುಲಭವೆಂದು ತೋರಿ ಸುವುದು ಈ ವಾಕ್ಯದ ಉದ್ದೇಶ.

ಕೊಡಲಿ? ನನ್ನ ಶರೀರ ಮೊದಲುಗೊಂಡು ನನ್ನಲ್ಲಿರುವ ಸಮಸ್ತ ವನ್ನು ಸಾಧುಜನಗಳಿಗೆ ಅರ್ಪಿಸಿದ್ದೇನೆ. ಅವರು ಅದನ್ನು ಗ್ರಹಣ ಮಾಡಿ ಪ್ರಸಾದರೂಪವಾಗಿ ನನಗೆ ಹಿಂದಕ್ಕೆ ಕೊಟ್ಟಿದ್ದಾರೆ ನಾನು ಈಗ ಭೋಗಿಸುತ್ತಿರುವುದು ಅವರ ಪ್ರಸಾದ ಮಾತ್ರ. ಸೇವಕನು ತನ್ನ ಒಡೆಯನಿಗೆ ಅವನ ಪದಾರ್ಥಗಳನ್ನೇ ಭೋಗಕ್ಕಾಗಿ ಕೊಡು ವಂತೆ ನಾನು ತಮ್ಮದೇ ಆದ ಸ್ತ್ರೀ, ಪುತ್ರ, ಧನ, ಜನ, ರಾಜ್ಯ, ಕೋಶಗಳನ್ನು ತಮಗೆ ಅರ್ಪಿಸುತ್ತಿದ್ದೇನೆ. ತಾವು ಸ್ವೀಕರಿಸಬೇಕು.

"ನಾವು ಬ್ರಾಹ್ಮಣರು ನಮಗೆ ರಾಜ್ಯಾದಿಗಳಿಂದೇನು ಪ್ರಯೋ ಜನ?" ಎಂದು ಹೇಳುವುದಾದರೆ ವೇದ ಶಾಸ್ತ್ರಗಳನ್ನು ತಿಳಿದ ಬ್ರಾಹ್ಮಣ ಜ್ಞಾನಿಯು ಸೇನಾಪತಿ ರಾಜ ನ್ಯಾಯಾಧಿಪತಿ ಮುಂತಾದ ಎಲ್ಲ ವಿಧವಾದ ಅಧಿಕಾರಗಳನ್ನು ನಿರ್ವಹಿಸಬಲ್ಲನು. ಜಗತ್ತಿನಲ್ಲಿರುವ ವಸ್ತುಗಳೆಲ್ಲಾ ಬ್ರಾಹ್ಮಣರು*ಗಳದ್ದೇ, ಎಂದು ಶಾಸ್ತ್ರವು ಹೇಳುತ್ತದೆ. ವೇದತತ್ತ್ವಾರ್ಥಜ್ಞಾನಿಗಳೆಂದ ಯಾವ ವೇದ ತತ್ತ್ವಾರ್ಥವನ್ನು ತಿಳಿದ ಬ್ರಹ್ಮ ಜ್ಞಾನಿಗಳಾದ ಬ್ರಾಹ್ಮಣರು ನನಗೆ ಆತ್ಮತತ್ತ್ವವನ್ನು ಉಪದೇಶ ಮಾಡಿದರೋ ಅವರು ಆಪ್ತ ಕಾಮರಾದುದರಿಂದ ಎರಡು ಕೈಗಳನ್ನೂ ಜೋಡಿಸಿ ವಂದಿಸುವುದಲ್ಲದೆ ಮತ್ತೇನನ್ನೂ ನಾನು ಅವರಿಗೆ ಮಾಡಲಾರೆ. ಅವರಿಗೆ ಸಂತೋಷ ವನ್ನುಂಟುಮಾಡುವ ಯಾವಪ್ರತ್ಯುಪಕಾರವನ್ನೂ ಮಾಡಲಾರೆ."

ಹೀಗೆ ಹೇಳುತ್ತಾ ಆದಿರಾಜನಾದ ಪೃಥುವು ಅವರನ್ನು

---

* ಬ್ರಹ್ಮನನ್ನು ತಿಳಿದ ಬ್ರಹ್ಮಜ್ಞಾನಿಗಳು.

ಪೂಜಿಸಿ ಸತ್ಕರಿಸಿದನು. ಅನಂತರ ಅವರು ರಾಜನ ಸ್ವಭಾವವನ್ನು ಪ್ರಶಂಸೆ ಮಾಡುತ್ತಾ ಆಕಾಶ ಮಾರ್ಗದಲ್ಲಿ ಪ್ರಯಾಣ ಮಾಡಿದರು. ಅಧ್ಯಾತ್ಮ ಜ್ಞಾನದ ಉಪದೇಶದಿಂದ ಮಹಾತ್ಮನಾದ ಪೃಥುವಿನ ಹೃದಯದಲ್ಲಿ ಯಾವ ಏಕಾಗ್ರತೆಯು ಹುಟ್ಟಿತೋ ಅದರಿಂದಾತನು ಕೃತಾರ್ಥನೆಂದು ಭಾವಿಸಿ ಆತ್ಮಾನಂದದ ಭೋಗದಲ್ಲಿ ತೃಪ್ತನಾದನು ಮಹಾರಾಜನಾದ ಪೃಥುವು ದೇಶ, ಕಾಲ, ಸಾಮರ್ಥ್ಯ, ಯೋಗ್ಯತೆ, ಮತ್ತು ಧನಕ್ಕೆ ತಕ್ಕಂತೆ ಶುಭಕರ್ಮಗಳನ್ನು ಮಾಡುತ್ತಾ ಅವುಗಳ ಫಲವನ್ನು ಕೃಷ್ಣಾರ್ಪಣ ಮಾಡುತ್ತಿದ್ದನು ಅಂದರೆ ಕಾಮನಾರಹಿತನಾಗಿ ಈಶ್ವರಸೇವಾರೂಪವಾಗಿ ಮಾಡುತ್ತಿದ್ದನು. ಕರ್ಮಗಳ ಫಲವನ್ನು ಬ್ರಹ್ಮಾರ್ಪಣ ಮಾಡಿ ಕರ್ಮಗಳಲ್ಲಿ ಅನಾಸಕ್ತನಾಗಿ ಈಶ್ವರನಲ್ಲಿ ಏಕಾಗ್ರಮನಸ್ಸಿನಿಂದ ಮಾಯೆಯಿಂದ ಭಿನ್ನನಾದ ಆತ್ಮನನ್ನು ಕರ್ಮಸಾಕ್ಷಿಯೆಂದು ತಿಳಿದಿದ್ದನು ಅಹಂಕಾರರಹಿತನಾದ ಸೂರ್ಯನು ಜಗತ್ತಿನ ಸಮಸ್ತಪದಾರ್ಥಗಳೊಳಗೆ ಹೊಕ್ಕು ಬಳಸಿ ಬಂದರೂ ತಾನು ಮಾತ್ರ ಶುದ್ಧನಾಗಿಯೇ ಇರುವಂತೆ ಪೃಥು ಮಹಾರಾಜನು ಗೃಹಸ್ಥಾಶ್ರಮದಲ್ಲಿದ್ದರೂ ಅಖಂಡ ಸಾಮ್ರಾಜ್ಯ ಲಕ್ಷ್ಮಿಯನ್ನು ಉಪಭೋಗಿಸುತ್ತಿದ್ದರೂ ಇಂದ್ರಿಯವಿಷಯಗಳಲ್ಲಿ ಆಸಕ್ತನಾಗಲಿಲ್ಲ. ಅಹಂಕಾರವನ್ನು ತೊರೆದಿದ್ದನು.

ಹೀಗೆ ಅಧ್ಯಾತ್ಮ ಯೋಗವನ್ನು ಅಭ್ಯಾಸಮಾಡುತ್ತಾ ನಿಷ್ಕಾಮನಾಗಿ ನಿರಭಿಮಾನದಿಂದಲೇ ಸಮಸ್ತ ಜಗತ್ತಿನ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಆವನಿಗೆ ಅರ್ಚಿ ಎಂಬ ಪತ್ನಿಯಿಂದ ವಿಜಿತಾಶ್ವ, ಧೂಮ್ರಕೇಶ, ಹರ್ಯಕ್ಷ, ದ್ರವಿಣ, ವೃಕ ಎಂಬ ಐದುಜನ ಮಕ್ಕಳಾದರು.

ಭಗವದ್ಭಕ್ತನಾದ ಪೃಥುವು ಒಂದೇ ಶರೀರದಿಂದಲೇ ಎಲ್ಲಾ ಲೋಕ ಪಾಲಕರ ಕಾರ್ಯಗಳನ್ನೂ ಮಾಡುತ್ತಿದ್ದನು. ತನ್ನ ಸೌಮ್ಯ ಮೂರ್ತಿ, ಮನ, ವಾಣಿಗಳಿಂದ, ಸುಂದರಗುಣಗಳಿಂದ ಚಂದ್ರನಂತೆ ಜಗತ್ಪ್ರಿಯನಾದನು. ಸೂರ್ಯನು ತನ್ನ ಪ್ರಚಂಡಕಿರಣಗಳಿಂದ ಸಮುದ್ರದ ಜಲವನ್ನು ಹೀರಿ ಪುನಃ ವರ್ಷಾಕಾಲದಲ್ಲಿ ಮಳೆಯ ರೂಪದಲ್ಲಿ ಹಿಂದಿರುಗಿಸುವಂತೆ ಪ್ರಜೆಗಳಿಂದ ಕರವನ್ನು (ಕಂದಾಯ) ತೆಗೆದುಕೊಂಡು ಸಮಯ ಒದಗಿದಾಗ ಆ ಧನವನ್ನೇ ಅವರ ಉಪ ಯೋಗಕ್ಕಾಗಿಯೇ ಖರ್ಚು ಮಾಡುತ್ತಿದ್ದನು. ಜಗತ್ತನ್ನೆಲ್ಲ ತನ್ನ ತೇಜಸ್ಸಿನಿಂದ ಆಳುತ್ತಿದ್ದನು. ಅಗ್ನಿಯನ್ನಾರೂ ಮುಟ್ಟಲಾಗದಿರು ವಂತೆ ಇವನ ಪ್ರಚಂಡತೇಜಸ್ಸಿನೆದುರಿಗೆ ಯಾರೂ ನಿಲ್ಲಲಾಗುತ್ತಿರ ಲಿಲ್ಲ. ಮಹೇಂದ್ರನಂತೆ ದುರ್ಜಯನಾಗಿದ್ದನು. ಪೃಥ್ವಿಯಂತೆ ಕ್ಷಮಾಶೀಲನಾಗಿದ್ದನು. ಸ್ವರ್ಗದಲ್ಲಿದ್ದಂತೆ ಪ್ರಜೆಗಳೆಲ್ಲರೂ ಬೇಕು ಬೇಕಾದ ಸುಖಗಳನ್ನು ಅನುಭವಿಸುತ್ತಿದ್ದರು. ಮೇಘದಂತೆ ಪ್ರಜೆ ಗಳಿಗೆ ಅವರವರ ಇಚ್ಛೆಯಂತೆ ಧನವನ್ನೂ ಸುಖವನ್ನೂ ಕೊಡುತ್ತಿದ್ದನು. ಸಮುದ್ರದಂತೆ ಗಂಭೀರನಾಗಿದ್ದನು. ಇವನ ಹೃದಯದ ಆಳವು ಯಾರಿಗೂ ಗೊತ್ತಿರಲಿಲ್ಲ. ದೃಢತ್ವದಲ್ಲಿ ಮೇರುವಿನಂತೆಯೂ ಧರ್ಮ ರಕ್ಷಣೆಯಲ್ಲಿ ಧರ್ಮರಾಜನಂತೆಯೂ ಆಶ್ಚರ್ಯವನ್ನುಂಟುಮಾಡುವ ವಸ್ತುಗಳನ್ನು ಕೊಡುವುದರಲ್ಲಿ ಹಿಮವಂತನಂತೆಯೂ, ಕುಬೇರನಂತೆ ಧನಿಕನಾಗಿಯೂ, ವರುಣನಂತೆ ಗುಪ್ತಧನಪ್ರಳ್ಳವನಾಗಿಯೂ ಬಲ ಪರಾಕ್ರಮ, ಸಾಹಸ, ವೇಗಗಳಿಂದ ವಾಯುವಿನಂತೆ ಇರುತ್ತಾ ಜಗತ್ತಿನಲ್ಲೆಲ್ಲ ಕರಡಿಸುವ ಯಶಸ್ಸುಳ್ಳವನಾಗಿದ್ದನು. ರುದ್ರನಂತೆ ಅಮಿತತೇಜೋಯುಕ್ತನಾಗಿದ್ದನು ಸೌಂದರ್ಯದಲ್ಲಿ ಮನ್ಮಥನಂತೆಯೂ

ಸಿಂಹವಂತೆ ಸಾಹಸಿಯಾಗಿಯೂ ಮನುವಿನಂತೆ ಪ್ರಜಾವತ್ಸಲನಾಗಿಯೂ ಬ್ರಹ್ಮನಂತೆ ಪ್ರಭುವಾಗಿಯೂ ಬ್ರಹ್ಮಜ್ಞಾನದಲ್ಲಿ ಬೃಹಸ್ಪತಿಯಂತೆಯೂ ವಿಷ್ಣುವಿನಂತೆ ಜಿತೇಂದ್ರಿಯನಾಗಿಯೂ ಗೋ ಬ್ರಾಹ್ಮಣ, ಗುರುಗಳ ಸೇವೆಯಲ್ಲಿ ಭಗವದ್ಭಕ್ತರ ಸತ್ಕಾರದಲ್ಲಿ ಪರೋಪಕಾರಾದಿ ಸದ್ಗುಣಗಳಲ್ಲಿ ತನ್ನಂತೆಯೇ ಅಸಮಾನನಾಗಿ ಅದ್ವಿತೀಯನಾಗಿ ವಿರಾಜಿಸುತ್ತಿದ್ದನು. ಅವನ ಕೀರ್ತಿಯು ಜಗದ್ವಿಖ್ಯಾತವಾಗಿತ್ತು.

## ಮಹಾರಾಜ ಪೃಥುವಿನ ವೈಕುಂಠವಾಸ

ಮೈತ್ರೇಯರು ಹೇಳುತ್ತಾರೆ .—

ಆತ್ಮಜ್ಞಾನಿಯಾದ ಮತ್ತು ಪ್ರಜಾಪಾಲನೆಯಲ್ಲಿ ದಕ್ಷನಾದ ಪೃಥುಮಹಾರಾಜನು ಅನ್ನಾದಿಗಳನ್ನು ಸೃಷ್ಟಿಮಾಡಿ ಪುರ ಗ್ರಾಮ ನಗರ ಮುಂತಾದವುಗಳ ರಚನೆಯಲ್ಲಿ ತನ್ನ ಯೌವನವನ್ನು ಕಳೆದು ವೃದ್ಧಾಪ್ಯವು ಬಂದ ನಂತರ ತನ್ನೊಳಗೇ ಆಲೋಚನೆ ಮಾಡಿದನು. "ನಾನು ಈಗ ವೃದ್ಧನಾಗಿದ್ದೇನೆ. ಭೂಮಿಯಲ್ಲಿರುವ ಚರಾಚರ ಪ್ರಾಣಿಗಳ ವೃತ್ತಿಯನ್ನು (ಜೀವನವಿಧಾನವನ್ನು) ಕಲ್ಪನೆಮಾಡಿದ್ದೇನೆ. ಸಾಧುಜನಗಳ ಧರ್ಮವನ್ನು ಪಾಲನೆಮಾಡಿದ್ದೇನೆ. ಮತ್ತು ಯಾವ ಉದ್ದೇಶದಿಂದ ನಾನು ಹುಟ್ಟಿ ಬರಬೇಕಾಯಿತೋ ಅದನ್ನು ಚೆನ್ನಾಗಿ ಮಾಡಿ ಈಶ್ವರನ ಆಜ್ಞಾ

ರೂಪವಾದ ಕರ್ತವ್ಯಕರ್ಮವನ್ನು ಪಾಲನೆಮಾಡಿದ್ದೇನೆ." ಹೀಗೆ ಯೋಚನೆಮಾಡಿ ಪೃಥುಮಹಾರಾಜನು ತನ್ನ ಮಗಳಂತಿರುವ ಭೂಮಿಯನ್ನು ತನ್ನ ಮಗನ ಕೈಯಲ್ಲಿಟ್ಟು ರಾಣಿಯೊಬ್ಬಳನ್ನೇ ತನ್ನ ಜೊತೆಯಲ್ಲಿ ಕರೆದುಕೊಂಡು ತಪಸ್ಸಿಗಾಗಿ ವನಕ್ಕೆ ತೆರಳಿದನು. ರಾಜನ ವಿರಹದಿಂದ ಭೂಮಿಯು ಬಹಳ ದುಃಖಿಸಿದಳು. ಪ್ರಜೆಗಳೂ ಸಹ ಬಹಳ ವ್ಯಸನಪಟ್ಟರು. ಪೃಥುಮಹಾರಾಜನು ಪ್ರಾರಂಭದಲ್ಲಿ ಭೂಮಿಯನ್ನು ಜಯಿಸುವುದರಲ್ಲಿ ಎಂತಹ ಪ್ರಯತ್ನ ಮಾಡಿದನೋ ಅಂತಹ ಪ್ರಯತ್ನವನ್ನೇ ವನದಲ್ಲೂ ಮಾಡಿ ತಪೋನಿಷ್ಠನಾದನು. ವಾನಪ್ರಸ್ಥರಾದ ಮುನಿಗಳಂತೆ ಉಗ್ರವಾದ ತಪಸ್ಸಿಗೆ ಪ್ರಾರಂಭಿಸಿದಾಗ ಅವನ ದೃಢವಾದ ಸಂಕಲ್ಪವನ್ನು ಯಾವ ವಿಘ್ನವೂ ಅಲುಗಿಸದಂತಾಯಿತು. ಕೆಲವು ದಿನ ಕಂದಮೂಲಫಲಗಳನ್ನು ಆಹಾರಮಾಡಿಕೊಂಡು ಕೆಲವುದಿನ ಒಣಗಿದ ಎಲೆಗಳನ್ನು ಆಹಾರಮಾಡಿಕೊಂಡು ಮತ್ತೆ ಕೆಲವುದಿನ ನೀರನ್ನು ಮಾತ್ರ ಕುಡಿದು ಇನ್ನು ಕೆಲವು ದಿನ ವಾಯುವನ್ನು ಮಾತ್ರ ಭಕ್ಷಣೆ ಮಾಡಿ ಘೋರತಪಸ್ಸನ್ನಾರಂಭಿಸಿದನು. ವೀರನಾದ ಪೃಥುವು ಬೇಸಿಗೆಯಲ್ಲಿ *ಪಂಚಾಗ್ನಿಮಧ್ಯದಲ್ಲಿ ದೇಹವನ್ನು ಇಟ್ಟನು. ವರ್ಷ ಋತುವಿನಲ್ಲಿ ನಿರಾಧಾರವಾದ ಸ್ಥಳದಲ್ಲಿ ವಾಸಮಾಡುತ್ತ ಶಿಶಿರ ಋತುವಿನಲ್ಲಿ ಕುತ್ತಿಗೆವರೆಗಿನ ನೀರಿನಲ್ಲಿದೇಹವನ್ನು ಮುಳುಗಿಸಿ ತಪಶ್ಚರ್ಯವನ್ನು ಆರಂಭಿಸಿದನು. ಮುಸಿಯ ಅವಸ್ಥೆಯನ್ನು ಹೊಂದಿದ ಪೃಥುವು ಸದಾ ನೆಲದ ಮೇಲೆ ಮಲಗಲು ಆರಂಭಿಸಿದನು.

---

* ನಾಲ್ಕು ದಿಕ್ಕಿನಲ್ಲಿಯೂ ಉರಿಯುತ್ತಿರುವ ಬೆಂಕಿಯನ್ನಿಟ್ಟು ಮಧ್ಯದಲ್ಲಿ ಪ್ರಚಂಡವಾದ ಸೂರ್ಯನ ತಾಪವು ದೇಹಕ್ಕೆ ತಗಲುವಂತೆ ಮಾಡುವುದು ಪಂಚಾಗ್ನಿ ಮಧ್ಯತ ತಪಸ್ಸು

ಕ್ಷಮಾವೃತ್ತಿಯನ್ನು ಧಾರಣೆಮಾಡಿ ಶಾಂತಸ್ವಭಾವದ ಗುಣವನ್ನು ಧಾರಣೆಮಾಡಿದನು. ಮಾತನ್ನು, ಇಂದ್ರಿಯಸಹಿತವಾದ ಮನಸ್ಸನ್ನು ದಮನಮಾಡಿದನು. *ವೀರ್ಯವನ್ನು ಬ್ರಹ್ಮಾಂಡದಲ್ಲಿ ಏರಿಸಿದನು. ಮತ್ತು ಪ್ರಾಣವಾಯುವನ್ನು ಪ್ರಾಣಾಯಾಮದಿಂದ ವಶಪಡಿಸಿಕೊಂಡನು. ಹೀಗೆ ಪರಮಾತ್ಮನ ಆರಾಧನೆಗೆ ಮುಂಚೆ ಉತ್ತಮವಾದ ತಪಸ್ಸಿನಿಂದ ಅಂತಃಕರಣವನ್ನು ಸಿದ್ಧಮಾಡಿದನು. ಹೀಗೆ ಕ್ರಮಶಃ ಸಿದ್ಧವಾದ ತಪಸ್ಸಿನಿಂದ ರಾಜನ ಕರ್ಮಗಳೆಲ್ಲ ನಷ್ಟವಾದವು. ಅಂತಃಕರಣವು ಶುದ್ಧವಾಯಿತು. ಪ್ರಾಣಾಯಾಮ ಮಾಡುವುದರಿಂದ ಕಾಮ ಕ್ರೋಧಾದಿ ಶತ್ರುಗಳ ದಾರಿಯು ಅಡ್ಡಗಟ್ಟಲ್ಪಟ್ಟಿತು. ವಾಸನಾರೂಪವಾದ ಬಂಧನವು ಹರಿದುಹೋಯಿತು. ಅಂದರೆ ಅವನು ನಿರಾಕಾರಬ್ರಹ್ಮನ ಆರಾಧನೆ ಮಾಡುವ ಯೋಗ್ಯತೆಯನ್ನು ಹೊಂದಿದನು. ಆಗ ಪುರುಷಶ್ರೇಷ್ಠನಾದ ರಾಜಾಪೃಥುವು ಸನತ್ಕುಮಾರರು ಹೇಳಿಕೊಟ್ಟ ಬ್ರಹ್ಮಜ್ಞಾನದಿಂದ ಪರಮಪುರುಷನಾದ ಪರಮಾತ್ಮನನ್ನು ಭಜನೆಮಾಡಲಾರಂಭಿಸಿದನು. ಹೀಗೆ ಪರಮಭಾಗವತನಾದ ಮತ್ತು ಸಾಧುವಾದ ರಾಜಾಪೃಥುವು ಶ್ರದ್ಧಾಪೂರ್ವಕವಾಗಿ ಸಾಧನೆಮಾಡುತ್ತಿರಲು ಪರಬ್ರಹ್ಮನಲ್ಲಿ ಶೀಘ್ರವಾಗಿ ಏಕಾಂತ ಭಕ್ತಿಯು ಹುಟ್ಟಿತು. ಪರಮಾತ್ಮಸೇವೆಯಿಂದ ಚಿತ್ತವು ಶುದ್ಧವಾಯಿತು. ಆ ಶುದ್ಧವಾದ ಚಿತ್ತದಲ್ಲಿ ವೈರಾಗ್ಯಯುಕ್ತವಾದ ಜ್ಞಾನವು ಉತ್ಪನ್ನವಾಯಿತು. ಆ ಜ್ಞಾನರೂಪವಾದ ಅಸ್ತ್ರದಲ್ಲಿ ಹರಿಧ್ಯಾನದಿಂದ ಪುಷ್ಟವಾದ ಭಕ್ತಿಯನ್ನಿಟ್ಟು ಹರಿತ

* ವೀರ್ಯವನ್ನು ಕೆಳಕ್ಕೆ ಚಲಿಸಗೊಡದೆ ಮನಸ್ಸು ಆ ಸಂಬಂಧವಾದ ಭಾವನೆಯನ್ನು ಹೊಂದದಂತೆ ದೃಢಮಾಡುವುದು.

ಮಾಡಿ ಅದರಿಂದ ಜನ್ಮಮರಣರೂಪವಾದ ಸಂಸಾರ ಮೂಲವಾದ ಅಹಂಕಾರವನ್ನು ನಾಶಮಾಡಿದನು. ಆತ್ಮತತ್ತ್ವವನ್ನು ಚೆನ್ನಾಗಿ ತಿಳಿದವನಾದ್ದರಿಂದ ದೇಹದಲ್ಲಿ ಇದುವರೆಗೂ ಇಟ್ಟಿದ್ದ ಆತ್ಮ ಬುದ್ಧಿಯೂ ನಾಶವಾಯಿತು. ಚೇಷ್ಟಾರಹಿತನಾದನು. ಯೋಗ ದ್ವಾರಾ ಪ್ರಾಪ್ತವಾದ ಅಣಿಮಾದಿ ಸಿದ್ಧಿಗಳನ್ನು ದೂರಮಾಡಿದನು ಆ ಸಿದ್ಧಿಗಳಲ್ಲಿ ಅವನ ಮನಸ್ಸು ಚಂಚಲವಾಗಲಿಲ್ಲ. ಅವನಿಗೆ ಹರಿಯಲ್ಲಿ ದೃಢಭಕ್ತಿಯು ಅಚಲವಾಗಿದ್ದುದರಿಂದ ಇದೇನು ಹೆಚ್ಚಿನದಲ್ಲ ಯೋಗಿಗಳಿಗೆ ಹರಿಯ ಕಥೆಗಳಲ್ಲಿ ಎಲ್ಲಿಯವರೆಗೂ ಪ್ರೇಮ ಹುಟ್ಟುವುದಿಲ್ಲವೋ ಅಲ್ಲಿಯವರೆಗೆ ಅವರು ಯೋಗಮಾರ್ಗದಲ್ಲಿ ಕೊನೆಯನ್ನು ಮುಟ್ಟಿದರೂ ಅಜ್ಞಾನದಿಂದ ಮುಕ್ತರಾಗಿಲ್ಲವೆಂದು ತಿಳಿಯತಕ್ಕದ್ದು. ಅಂತಹವರ ಮನಸ್ಸು ಸಿದ್ಧಿಗಳಂಥ ತುಚ್ಛವದಾರ್ಥಗಳಲ್ಲಿ ಚಲಿಸುತ್ತಾ ಚಂಚಲವಾಗಿರುವುದರಿಂದ ಅವರು ಮೋಕ್ಷವನ್ನು ಹೊಂದಲಾರರು.

ವೀರಶ್ರೇಷ್ಠನಾದ ರಾಜಾಪೃಥುವು ಹೀಗೆ ಆತ್ಮನನ್ನು ಪರಮಾತ್ಮನಲ್ಲಿ ನಿಲ್ಲಿಸಿ ಬ್ರಹ್ಮರೂಪನಾಗಿ ಕಾಲವು ಪ್ರಾಪ್ತವಾದ ಒಡನೆ ತನ್ನ ಸ್ಥೂಲಶರೀರವನ್ನು ತ್ಯಾಗಮಾಡಿದನು ಶರೀರತ್ಯಾಗ ಮಾಡುವ ಸಮಯದಲ್ಲಿ ತನ್ನ ಎರಡು ಹಿಮ್ಮಡಿಗಳಿಂದ ಗುದ ದ್ವಾರವನ್ನು ಬಂಧಿಸಿ ಅಪಾನವಾಯುವನ್ನು ಕ್ರಮಶಃ ಮೂಲಾಧಾರದಿಂದ ಮೇಲಕ್ಕೆ ಏರಿಸಿ ನಂತರ ನಾಭಿಯ ಸ್ಥಾನದವರಿಗೆ ಎಬ್ಬಿಸಿ ಸಮಾನವಾಯುವಿನಲ್ಲಿ ನಿಲ್ಲಿಸಿ ಕ್ರಮವಾಗಿ ಹೃದಯದಲ್ಲಿ, ವಕ್ಷಸ್ಥಲದಲ್ಲಿ, ಕಂಠದಲ್ಲಿ, ಭ್ರೂಮಧ್ಯದಲ್ಲಿ ನಿಲ್ಲಿಸಿದನು. ನಂತರ ಆ ಪ್ರಾಣವಾಯುವನ್ನು ಬ್ರಹ್ಮಾಂಡದಲ್ಲಿ ತೆಗೆದುಕೊಂಡು

ಹೋಗಿ ಸಿಕ್ಕಿಸಿದನು. ನಂತರ ಶರೀರಸ್ಥಿತವಾದ ವಾ ಯು ವ ನ್ನು ವಾಯುವಿನಲ್ಲಿಯೂ ದೇಹದ ಕಠಿಣಭಾಗವನ್ನು ಪೃಥ್ವಿಯಲ್ಲಿ ಯೂ ತೇಜಸ್ಸನ್ನು ಅಗ್ನಿಯಲ್ಲಿಯೂ ಇಂದ್ರಿಯಗಳ ರ ಂ ಧ್ರ ವನ್ನು ಆಕಾಶದಲ್ಲಿಯೂ ದೇಹದ ರಸ ಅಥವಾ ರಕ್ತವನ್ನು ಜಲದಲ್ಲಿಯೂ ಲೀನಮಾಡಿದನು. ಹೀಗೆ ಶರೀರದಲ್ಲಿನ ಪಂಚತತ್ತ್ವಗಳನ್ನು ಪಂಚಮಹಾಭೂತಗಳಲ್ಲಿ ಸೇರಿಸಿ ಆ ಅದ್ವಿತೀಯ ಆತ್ಮಾನುಭವಕ್ಕಾಗಿ ಪಂಚಭೂತಗಳನ್ನು ಆತ್ಮನಲ್ಲಿ ಲೀನಮಾಡಿದನು. ಅಂದರೆ ಪೃಥ್ವಿಯನ್ನು ಜಲದಲ್ಲೂ ಜಲವನ್ನು ತೇಜಸ್ಸಿನಲ್ಲೂ ತೇಜಸ್ಸನ್ನು ವಾಯುವಿನಲ್ಲೂ ವಾಯುವನ್ನು ಆಕಾಶದಲ್ಲಿಯೂ ಸೇ ರಿ ಸಿ ದ ನು. ನಂತರ ಮನಸ್ಸನ್ನು ಇಂದ್ರಿಯಗಳಲ್ಲಿಯೂ, ಇಂದ್ರಿಯಗಳನ್ನು ಪಂಚ ತನ್ಮಾತ್ರೆಗಳಲ್ಲಿಯೂ ಲಯಮಾಡಿದನು. ಕೊನೆಗೆ ಉಳಿದಿದ್ದ ಆಕಾಶ ಮತ್ತು ಪಂಚತನ್ಮಾತ್ರಗಳಲ್ಲಿ ಇಂದ್ರಿಯಾಧಿಷ್ಠಾನ ದೇವತೆಗಳೊಡನೆ ಮಹಾತತ್ತ್ವದಲ್ಲಿ ಲೀನಮಾಡಿ ಸಂಪೂರ್ಣ ಗುಣಗಳಿಗೆ ಸ್ಥಾನವಾದ ಮಹತ್ತತ್ತ್ವವನ್ನು ಮಾಯಾಮಯ ಉಪಾಧಿಯಾದ ಜೀವನಲ್ಲಿ ಲೀನಮಾಡಿದನು. ಇದಕ್ಕೆ ಹಿ ಂ ದೆ ಮಾಯೆಯ ಗುಣಗಳಿಂದ ಯುಕ್ತವಾದ ಜೀವನ ಅವಸ್ಥೆಯನ್ನು ಹೊಂದಿದನು. ಈಗ ಜ್ಞಾನವೈರಾಗ್ಯಗಳ ಬ ಲ ದಿ ಂದ ಆ ಜೀವನ ಅವಸ್ಥೆಯನ್ನು ತ್ಯಾಗಮಾಡಿ ತನ್ನ ಬ್ರಹ್ಮ ರೂ ಪ ದ ಲ್ಲಿ ನಿಂತು ಜೀವನ್ಮುಕ್ತನಾದನು. ಪೃಥುವಿನ ಪತ್ನಿಯಾದ ಮ ಹಾ ರಾಣಿ ಅರ್ಚಿಯು ಆತನೊಡನೆ ವನಕ್ಕೆ ಹೋಗಿದ್ದಳು. ಅವಳ ದೇಹವು ಬಹಳ ಕೋಮಲವಾಗಿದ್ದುದರಿಂದ ಕಾಡಿನಲ್ಲಿ ಆ ಒರಟು ಭೂಮಿಯ ಮೇಲೆ ನಡೆಯಲು ಆಗಲಿಲ್ಲ. ತನ್ನ ಪತಿಯಂತೆ ನಿತ್ಯವೂ ಭೂಮಿಯ ಮೇಲೆ ಮಲಗುವುದು ಮುಂತಾದ ನಿ ಯ ಮ ಗ ಳಿಂದ

ಆಕೆಯ ದೇಹವು ಬಹಳ ದುರ್ಬಲವಾಗಿತ್ತು. ಆದರೂ ಅವಳಿಗೆ ಇದೊಂದೂ ಕಷ್ಟಕರವಾಗಿ ಕಾಣಲಿಲ್ಲ. ಪ್ರಿಯಪತಿಯ ಕರಸ್ಪರ್ಶದಿಂದ-ಆದರದಿಂದ ಅವಳ ಕಷ್ಟವೆಲ್ಲಾ ದೂರವಾಗಿ ಹೋಗಿತ್ತು. ತನ್ನ ಪತಿಯ ಶರೀರವು ಭೂಮಿಯ ಮೇಲೆ ಚೇತನ ವಿಹೀನವಾಗಿ ಬಿದ್ದುದನ್ನು ನೋಡಿ ಸ್ವಲ್ಪ ಹೊತ್ತು ದುಃಖಿಸಿ ನಂತರ ಸಹ ಗಮನ ಮಾಡಬೇಕೆಂಬ ಉದ್ದೇಶ್ಯದಿಂದ ಆ ಪರ್ವತಶಿಖರದ ಮೇಲೆ ಸ್ವಂತಕೈಯ್ಯಿಂದಲೇ ಚಿತಿ ಸಿದ್ಧಮಾಡಿದಳು. ಸಮಯೋಚಿತವಾದ ಕರ್ತವ್ಯಕರ್ಮಗಳನ್ನು ಮಾಡಿ ನದಿಯ ದಡದಲ್ಲಿ ಸ್ನಾನಮಾಡಿ ಉದಾರ ಚರಿತನಾದ ಪೃಥುವಿಗೆ ತಿಲಾಂಜಲಿ ಕೊಟ್ಟಳು. ಆಗ ಸ್ವರ್ಗದಲ್ಲಿ ವಿಮಾನಗಳಲ್ಲಿ ನಿಂತಿದ್ದ ದೇವತೆಗಳನ್ನು ವಂದಿಸಿದಳು. ಚಿತೆಯ ಮೇಲೆ ಪತಿಯ ದೇಹವನ್ನಿಟ್ಟು ಬೆಂಕಿಯನ್ನು ಹೊತ್ತಿಸಿ ಮೂರಾವೃತ್ತಿ ಪ್ರದಕ್ಷಿಣೆಮಾಡಿ ಹೃದಯದಲ್ಲಿ ಪತಿಯ ಚರಣಗಳನ್ನು ಧ್ಯಾನಿಸುತ್ತಾ ತಾನು ಚಿತೆಯಲ್ಲಿ ಕುಳಿತು ಬಿಟ್ಟಳು. ವೀರಶ್ರೇಷ್ಠನಾದ ಪತಿಯೊಡನೆ ಸಹಗಮನ ಮಾಡುತ್ತಿರುವ ಮಹಾರಾಣಿ ಅರ್ಚಿಯನ್ನು ನೋಡಿ ಆಕಾಶದಲ್ಲಿ ನೆರೆದಿದ್ದ ದೇವತೆಗಳೂ, ದೇವವಧುಗಳೂ, ದೇವತಾಸ್ತ್ರೀಯರೂ ಅವಳನ್ನು ಹೊಗಳುತ್ತಾ ಆಶೀರ್ವದಿಸಿದರು. ಈ ರಾಣಿಯು ಸಹಗಮನಮಾಡಿದ ಮಂದರಪರ್ವತದ ಶಿಖರದಮೇಲೆ ಆಕಾಶದಿಂದ ಪುಷ್ಪವೃಷ್ಟಿಯು ಸುರಿಸಲ್ಪಟ್ಟಿತು. ದೇವದುಂದುಭಿಗಳು ಮೊಳಗಿದವು. "ಯಜ್ಞಪುರುಷನಾದ ನಾರಾಯಣನನ್ನು ಅನುಗಮನ ಮಾಡುತ್ತಿರುವ ಲಕ್ಷ್ಮೀದೇವಿಯಂತೆ ಈ ಮಹಾರಾಣಿಯು ತನ್ನ ತನು ಮನಗಳಿಂದ ರಾಜರಾಜೇಶ್ವರನಾದ ಪೃಥುವನ್ನು ಅನುಸರಿಸಿದ್ದಾಳೆ! ತನ್ನ ಪಾತಿವ್ರತ್ಯದ ಪ್ರಭಾವದಿಂದ ತನ್ನ ಪತಿಯೊಡನೆ ನಮ್ಮ ಲೋಕವನ್ನು ಮೀರಿ ಮೇಲಕ್ಕೆ ಹೋಗುತ್ತಿದ್ದಾಳೆ. ಮನುಷ್ಯ

ಜೀವನವು ಕ್ಷಣಭಂಗುರ, ಚಂಚಲವು. ಆದರೆ ಮನುಷ್ಯ ಜೀವನದಲ್ಲಿ ಪರಮಾತ್ಮನನ್ನು ನಿರೂಪಿಸುವ ಕರ್ಮರಹಿತವಾದ ಜ್ಞಾನವನ್ನು ಯಾವನು ಪಡೆದಿದ್ದಾನೆಯೋ ಅಂತಹವನಿಗೆ ದುರ್ಲಭವಾದ ಪದಾರ್ಥವು ಜಗತ್ತಿನಲ್ಲಿಲ್ಲವೇ ಇಲ್ಲ. ಅನೇಕ ಕಷ್ಟಗಳನ್ನು ಅನುಭವಿಸಿದ ನಂತರ ಮುಕ್ತಿಸಾಧಕವಾದ ಮನುಷ್ಯಜನ್ಮವು ಬರುವುದು. ಆದರೆ ವಿಷಯ ಭೋಗಗಳಲ್ಲಿ ಸಿಕ್ಕಿ ಇಂದ್ರಿಯದ್ವಾರಾ ಮೋಸಮಾಡಲ್ಪಟ್ಟು ಜೀವನು ತನ್ನ ಜನ್ಮದ ಉದ್ದೇಶವನ್ನು ಮರೆಯುತ್ತಾನೆ. ತನ್ನ ಕೈಯಿಂದಲೇ ತನ್ನ ಅನಿಷ್ಟವನ್ನು ಸಾಧಿಸುತ್ತಾನೆ. ದೇವಿ ಅರ್ಚಿ ಧನ್ಯಳು." ಎಂದು ಮುಂತಾಗಿ ದೇವತಾಸ್ತ್ರೀಯರು ಅರ್ಚಿಯನ್ನು ಹೊಗಳುತ್ತಿರಲು ಅರ್ಚಿದೇವಿಯು ಪತಿಲೋಕವನ್ನು ಹೊಂದಿದಳು ಅಂದರೆ ಆತ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಪೃಥುಮಹಾರಾಜನು ಯಾವ ಲೋಕವನ್ನು ಹೊಂದಿದನೋ ಅಲ್ಲಿಗೆ ಹೋಗಿ ಸೇರಿದಳು.

ಭಗವದ್ಭಕ್ತನಾದ ರಾಜಾ ಪೃಥುವಿನ ಈ ಉದಾರಸುಂದರವಾದ ಚರಿತೆಯನ್ನು ನಿನಗೆ ಹೇಳಿದ್ದೇನೆ. ಈ ಚರಿತ್ರೆಯನ್ನು ಏಕಾಗ್ರಮನಸ್ಸಿನಿಂದ ಯಾರು ಶ್ರದ್ಧಾಸಹಿತವಾಗಿ ಪಠಣಮಾಡುತ್ತಾರೋ ಮತ್ತು ಶ್ರದ್ಧೆಯಿಂದ ಕೇಳುತ್ತಾರೋ ಮತ್ತು ಶ್ರದ್ಧೆಯಿಂದ ಹೇಳುತ್ತಾರೋ ಅಂತಹವನು ಪೃಥುಮಹಾರಾಜನಿಗೆ ಆದ ಗತಿಯನ್ನು ಹೊಂದುವನು. ಈ ಚರಿತ್ರೆಯನ್ನು ಓದುವುದರಿಂದ ಮತ್ತು ಕೇಳುವುದರಿಂದ ಬ್ರಾಹ್ಮಣನ ಬ್ರಹ್ಮತೇಜಸ್ಸು ವೃದ್ಧಿಯಾಗುವುದು. ರಾಜರುಗಳಿಗೆ ಚಕ್ರವರ್ತಿತ್ವವು ಪ್ರಾಪ್ತವಾಗುವುದು ವೈಶ್ಯನು ಧನಧಾನ್ಯಗಳಿಂದ ಯುಕ್ತನಾಗುವನು. ಶೂದ್ರನ ಸಂಪೂರ್ಣಪಾಪವು ನಷ್ಟವಾಗುವುದು ಸ್ತ್ರೀಯಾಗಲೀ ಪುರುಷನಾಗಲೀ ಈ ಚರಿತ್ರೆಯನ್ನು ಆದರ ಸಹಿತವಾಗಿ ಮೂರಾ

ವೃತ್ತಿ ಕೇಳಿದರೆ ಸಂತಾನವಿಲ್ಲದವನು ಸಂತಾನವನ್ನು ಪಡೆಯುವನು. ದರಿದ್ರನಾದವನು ಧನವಂತನಾಗುವನು. ಕೀರ್ತಿಅಭಿಲಾಷೆಯುಳ್ಳವನು ವಿಶ್ವವಿಖ್ಯಾತನಾಗುವನು. ಮೂರ್ಖನು ಪಂಡಿತನಾಗುವನು. ಮಂಗಳಮಯವಾದ ಇದನ್ನು ಓದುವುದರಿಂದ ಕೇಳುವುದರಿಂದ ಸಮಸ್ತ ಅಮಂಗಳವೂ ನಾಶವಾಗುವುದು. ಇದರಿಂದ ಧನವೂ ಯಶಸ್ಸೂ ಸಿಕ್ಕುವುದು. ಆಯುಸ್ಸು ಹೆಚ್ಚುವುದು. ಸ್ವರ್ಗವು ಸಿಕ್ಕುವುದು. ಕಲಿಯುಗದ ಮಲವು ಹೃದಯದಿಂದ ದೂರವಾಗುವುದು. ಧರ್ಮ ಅರ್ಥ, ಕಾಮ, ಮೋಕ್ಷಗಳನ್ನು ಹೊಂದಲು ಯಾರು ಇಚ್ಛಿಸುವರೋ ಅವರು ಶ್ರದ್ಧಾಪೂರ್ವಕವಾಗಿ ಚತುರ್ವಿಧ ಪುರುಷಾರ್ಥಗಳನ್ನು ಕೊಡುವ ಈ ಚರಿತ್ರೆಯನ್ನು ಶ್ರವಣಮಾಡಬೇಕು. ಯಾವ ರಾಜನು ಯುದ್ಧಕ್ಕೆ ಹೋಗುವ ಸಮಯದಲ್ಲಿ ಈ ಚರಿತ್ರೆ ಕೇಳಿ ಶತ್ರುಗಳೊಡನೆ ಯುದ್ಧಮಾಡುವನೋ ಅಂತಹವನಿಂದ ಪರರಾಜರು ಪರಾಜಿತರಾಗಿ ಇವನ ಅಧೀನರಾಗುವರು. ಯಾವ ಪುರುಷನು ಸಂಸಾರದ ಸಂಗವನ್ನು ತ್ಯಾಗಮಾಡಿ ಪರಮಾತ್ಮನಲ್ಲಿ ನಿಷ್ಕಾಮ ಭಕ್ತಿಯನ್ನು ವೃದ್ಧಿಮಾಡಿಕೊಂಡು ವ್ಯಾಸರಿಂದ ಹೇಳಲ್ಪಟ್ಟ ಮಹಾತ್ಮಾ ಪೃಥುವಿನ ಈ ಮಹಾತ್ಮೆಯನ್ನು ಓದುತ್ತಾರೆಯೋ ಅವರಿಗೆ ಪೃಥುರಾಜನು ಹೊಂದಿದ ಗತಿಯು ಸಿಕ್ಕುವುದು. ಯಾವ ಮನುಷ್ಯನು ಪ್ರತಿನಿತ್ಯವೂ ಶ್ರದ್ಧಾಪೂರ್ವಕವಾಗಿ ಈ ಚರಿತ್ರೆಯನ್ನು ಕೇಳುವನೋ ಅವನಿಗೆ ಪರಮಾತ್ಮನಲ್ಲಿ ದೃಢವಾದ ಭಕ್ತಿಯು ಹುಟ್ಟುವುದು. ಈ ದೃಢಭಕ್ತಿಯು ಹುಟ್ಟಿದ ನಂತರ ಅವನಿಗೆ ಜನ್ಮಮರಣಗಳ ಭಯವಿರುವುದಿಲ್ಲ. ಅವನಿಗೆ ಸಂಸಾರ ಸಾಗರದಿಂದ ಪಾರುಮಾಡಬಲ್ಲ ನೌಕೆಯೊಂದು (ನಾವೆ) ಸಿಕ್ಕಿದಂತಾಗುವುದು.

---

# ಷಡ್ವಿಂಶ ಕಿರಣ

**ಮೈತ್ರೇಯರು ಹೇಳುತ್ತಾರೆ:—**

ಎಲೈ ! ವಿದುರನೇ ಕೇಳು. ಪೃಥುಮಹಾರಾಜನು ಪರಂ ಧಾಮವನ್ನು ಹೊಂದಿದ ನಂತರ ಆತನ ಪುತ್ರನಾದ ವಿಜಿತಾಶ್ವನು ಪೃಥ್ವೀ ಮಂಡಲಕ್ಕೆ ಮಹಾರಾಜನಾದನು. ಹೇಗೆ ಸಮಸ್ತ ರಾಜರುಗಳು ಪೃಥುವಿಗೆ ಅಧೀನರಾಗಿ ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರೋ ಹಾಗೆಯೇ ವಿಜಿತಾಶ್ವನಿಗೂ ಕೊಡಲಾರಂಭಿಸಿದರು. ವಿಜಿತಾಶ್ವನು ತನ್ನ ತಮ್ಮಂದಿರಿಗೆ ನಾಲ್ಕು ದಿಕ್ಕಿನ ರಾಜ್ಯಗಳನ್ನೂ ಕೊಟ್ಟನು. ಅಂದರೆ ಹರ್ಯಕ್ಷನಿಗೆ ಪೂರ್ವದಿಕ್ಕಿನ ರಾಜ್ಯವನ್ನೂ ಧೂಮ್ರಕೇಶನಿಗ ದಕ್ಷಿಣದಿಕ್ಕಿನ ರಾಜ್ಯವನ್ನೂ ವೃಕನಿಗೆ ಪಶ್ಚಿಮದಿಕ್ಕಿನ ರಾಜ್ಯವನ್ನು ದ್ರವಿಣನಿಗೆ ಉತ್ತರ ದಿಕ್ಕಿನ ರಾಜ್ಯವನ್ನೂ ಕೊಟ್ಟನು. ವಿಜಿತಾಶ್ವನು ಇಂದ್ರನಿಂದ ಅಂತರ್ಧಾನ ವಿದ್ಯೆಯನ್ನು ಹೊಂದಿದ್ದುದರಿಂದ ಅವನಿಗೆ **ಅಂತರ್ಧಾನ**ನೆಂಬ ಹೆಸರೂ ಬಂದಿತ್ತು. ಈತನು ತನ್ನ ಶಿಖಂಡಿನೀ ಎಂಬ ಹೆಸರಿನ ರಾಣಿಯಲ್ಲಿ ತನ್ನಂತೆಯೇ ಸಮಾನಗುಣ ರೂಪಗಳುಳ್ಳ ಪಾವಕ, ಪವಮಾನ ಮತ್ತು ಶುಚಿ ಎಂಬ ಹೆಸರುಗಳುಳ್ಳ ಮೂವರು ಪುತ್ರರನ್ನು ಉತ್ಪನ್ನಮಾಡಿದನು. ಅವರು ಮೂವರೂ ಅಗ್ನಿಗಳಾಗಿದ್ದರು.

ವಶಿಷ್ಠಋಷಿಯ ಶಾಪದಿಂದ ಮನುಷ್ಯ ಯೋನಿಯಲ್ಲಿ ಹುಟ್ಟಿ ಆ ಶಾಪದ ಅವಧಿಯು ಮುಗಿದ ನಂತರ ಪುನಃ ತಮ್ಮ ಅಗ್ನಿ ಸ್ವರೂಪವನ್ನೇ ಪಡೆದರು. ಅಂತರ್ಧಾನನು ತನ್ನ ತಂದೆಯ ಯಜ್ಞದಲ್ಲಿ ಕುದುರೆಯನ್ನು ಇಂದ್ರನು ಕದ್ದಿದ್ದರೂ, ಅವನನ್ನು ಶಿಕ್ಷಿಸಲಿಲ್ಲ. ಅವನಿಗೆ ನಭಸ್ವಿನೀ ಎಂಬ ಹೆಸರಿನ ಮತ್ತೊಬ್ಬ ರಾಣಿ ಇದ್ದಳು. ಅವಳ ಗರ್ಭದಲ್ಲಿ ಹವಿರ್ಧಾನ ಎಂಬ ಹೆಸರಿನ ಮತ್ತೊಬ್ಬ ಪುತ್ರನೂ ಉತ್ಪನ್ನನಾದನು. ರಾಜನ ಭಂಡಾರಕ್ಕೆ ಧನವು ಬರ್ರು ವುದು 1] ಕರ, ದಂಡ, ಶುಲ್ಕ ಎಂಬ ಮೂರು ಮಾರ್ಗಗಳಿಂದ. ಅಂತರ್ಧಾನನು ಈ ರಾಜವೃತ್ತಿಯು ಒಂದು ವಿಧವಾದ ಪ್ರಜಾ ಪೀಡೆಯೆಂದೇ ತಿಳಿದು ರಾಜ್ಯದ ಭಾರವನ್ನು ತಮ್ಮಂದಿರಿಗೆ ಕೊಟ್ಟು ತಾನು ಮಾತ್ರ ಯಜ್ಞಯಾಗಾದಿಗಳಲ್ಲಿ ನಿರತನಾಗಿದ್ದ ನಾದ್ದರಿಂದ ಇವನು ಹೆಸರಿಗೆ ಮಾತ್ರ ರಾಜನಾಗಿದ್ದನು. ಆತ್ಮಜ್ಞಾನಿಯಾದ ಅಂತರ್ಧಾನನು ತಾನು ಮಾಡುವ ಆ ಯಜ್ಞಗಳಲ್ಲಿ ನಿಷ್ಕಾಮನಾಗಿ ಭಕ್ತ ಭಯ ಹಾರಿಯಾದ ಪೂರ್ಣ ಸ್ವರೂಪನಾದ ಪರಮಾತ್ಮನನ್ನು ಪೂಜಿಸಿ ಅದೇ ಪರಬ್ರಹ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿ ಬ್ರಹ್ಮಸ್ವರೂಪನಾದನು. ವಿದುರ ! ಹವಿರ್ಧಾನನು ತನ್ನ ಪತ್ನಿಯಾದ ಹವಿರ್ಧಾನಿಯಲ್ಲಿ ಬರ್ಹಿಷತ್, ಗಯ, ಶುಕ್ಲ, ಕೃಷ್ಣ, ಸತ್ಯ ಮತ್ತು ಜಿತವ್ರತ ಎಂಬ ಆರು ಜನ ಮಕ್ಕಳನ್ನು ಉತ್ಪತ್ತಿಮಾಡಿದನು. ಹವಿರ್ಧಾನನ ಮಗನಾದ ಅತಿ ಭಾಗ್ಯಶಾಲಿಯಾದ ರಾಜಾ ಬರ್ಹಿ ಷದನು ಬಲುದೊಡ್ಡ ಯೋಗಿಯಾಗಿದ್ದನು. ಯಜ್ಞಾದಿ ಅನೇಕ

---

1) ಕರ ಎಂಬುದು ಕಂದಾಯ. ದಂಡ ಎಂಬುದು ಶಿಕ್ಷಿತಸ್ಥರಿಂದ ಬಲಾತ್ಕಾರವಾಗಿ ತೆಗೆದು ಕೊಳ್ಳುವ ಶಿಕ್ಷಾರೀತ್ಯ ರಾಜಧನ. ಶುಲ್ಕ ಎಂಬುದು ಹಣವಂತರಿಂದ ಅವರವರ ಆದಾಯಕ್ಕೆ ತಕ್ಕಂತೆ ರಾಜನು ತೆಗೆದುಕೊಳ್ಳುವ ಧನ.

ಕರ್ಮಗಳನ್ನು ಮಾಡಿದನು. ಆತನು ಒಂದು ಯಜ್ಞವನ್ನು ಮಾಡು ತ್ತಿರುವಾಗಲೇ ಮತ್ತೊಂದು ಯಜ್ಞಕ್ಕೆ ಸಿದ್ಧತೆಯನ್ನು ಮಾಡಿ ಕೊಳ್ಳುತ್ತಿದ್ದನು. ಹೀಗೆ ಯಜ್ಞಮಾಡುತ್ತಿರುವಾಗ ವೇದಿಯ ಮೇಲೆ ಹರಡಲ್ಪಟ್ಟ ಪೂರ್ವಪೂಲವಾದ ಕುಶಗಳಿಂದಲೇ ಭೂಮಂಡಲ ವನ್ನೆಲ್ಲಾ ಹರಡಿಬಿಟ್ಟನು. ಅಂದರೆ ಭೂಮಂಡಲದಲ್ಲಿ ಅವನು ಯಜ್ಞಮಾಡದ ಸ್ಥಳವೇ ಇರಲಿಲ್ಲ. ಆದುದರಿಂದ ಆತನಿಗೆ **ಪ್ರಾಚೀನ ಬರ್ಹಿ** ಎಂಬ ಎರಡನೇ ಹೆಸರು ಬಂದಿತು.

ರಾಜಾ ಪ್ರಾಚೀನಬರ್ಹಿಯು ಬ್ರಹ್ಮನ ಆಜ್ಞೆಯಿಂದ ಸಮುದ್ರ ಕನ್ಯೆಯಾದ ಶತದೃತಿ ಎಂಬುವಳನ್ನು ವಿವಾಹವಾದನು. ಶತ ದೃತಿಯು ಅಪೂರ್ವ ಸುಂದರಿಯಾಗಿದ್ದಳು. ಆ ಸರ್ವಾಂಗಸುಂದರಿ ಯಾದ ನವಯೌವನ ಭರಿತೆಯಾದ ಶತದೃತಿಯು ಮನೋಹರ ಗಳಾದ ಆಭರಣಗಳನ್ನು ಧರಿಸಿಕೊಂಡು ವಿವಾಹ ಸಮಯದಲ್ಲಿ ಅಗ್ನಿ ಪ್ರದಕ್ಷಿಣೆಯನ್ನು ಮಾಡುತ್ತಿರುವಾಗ ಅವಳ ರೂಪವನ್ನು ನೋಡಿ ಅಗ್ನಿಯ ಮನಸ್ಸು ಚಂಚಲವಾಯಿತು. ನವವಿವಾಹಿತೆಯಾದ ಶತ ದ್ರುತಿಯು ತನ್ನ ಚರಣಗಳ ನೂಪುರಗಳ ಶಬ್ದದಿಂದಲೇ ದೇವ ದಾನವ, ಗಂಧರ್ವ, ಮುನಿ, ಸಿದ್ಧ, ಮನುಷ್ಯ ಸರ್ಪ ಮುಂತಾದ

---

ಸಪ್ತ ಋಷಿಗಳ ಯಜ್ಞದಲ್ಲಿ ಋಷಿಪತ್ನಿಯರನ್ನು ನೋಡಿ ಅಗ್ನಿಯು ಮೋಹ ಗೊಂಡನು. ಅಗ್ನಿಯ ಹೆಂಡತಿಯಾದ ಸ್ವಾಹಾ ಎಂಬುವಳು ಸಪ್ತಋಷಿಗಳ ಪತ್ನಿ ಯರ ರೂಪವನ್ನೇ ಧಾರಣೆ ಮಾಡಿ ಅವನೊಡನೆ ಸಂಭೋಗ ಮಾಡಿದಳು. ಮತ್ತು ಶುಕರೂಪವನ್ನು ಧಾರಣೆಮಾಡಿ ಅವನಲ್ಲ ಆ ವೀರ್ಯವನ್ನು ಬಿಟ್ಟಳು. ಅದರಂತೆ ಯೆ ಈಗಲೂ ಅಗ್ನಿಯ ಮನಸ್ಸು ಚಂಚಲವಾಯಿತು.

ಎಲ್ಲರ ಮನಸ್ಸನ್ನೂ ಮೋಹಿತವನ್ನಾಗಿ ಮಾಡಿದಳು. ಪ್ರಾಚೀನ ಬರ್ಹಿಗೆ ಶತದ್ರುತಿ ರಾಣಿಯಲ್ಲಿ ಹತ್ತುಜನ ಮಕ್ಕಳಾದರು. ಅವರ ಹೆಸರೂ ಪ್ರಾಚೇತಸ ಎಂದೇ ಆಯಿತು. ಧರ್ಮಮೂರ್ತಿಗಳಾದ ಆ ಪ್ರಾಚೇತಸರಿಗೆ ಒಂದೇ ಹೆಸರು, ಒಂದೇ ಸ್ವಭಾವ, ಒಂದೇ ನಡತೆ ಇದ್ದಿತು. ಆ ಪ್ರಚೇತರುಗಳು ತಮ್ಮ ತಂದೆಯ ಆಜ್ಞೆಯನ್ನು ಅನುಸರಿಸಿ ಸಂತಾನವನ್ನು ಉತ್ಪನ್ನಮಾಡ ಬೇಕೆಂಬ ಆಶೆಯಿಂದ ತಪಸ್ಸು ಮಾಡಲು ಸಮುದ್ರದ ಒಳಗೆ ಪ್ರವೇಶ ಮಾಡಿದರು. ಮತ್ತು ಅಲ್ಲಿ ಹತ್ತು ಸಹಸ್ರ ವರ್ಷಗಳವರೆಗೂ ತಪಸ್ಸುಮಾಡುತ್ತಾ ಶ್ರೀಹರಿಯನ್ನು ಆರಾಧಿಸಿದರು. ಅ ವ ರು ತಪಸ್ಸುಮಾಡುವ ಇಚ್ಛೆಯಿಂದ ಹೋಗುತ್ತಿರುವಾಗ ಮಾರ್ಗ ಮಧ್ಯ ದಲ್ಲಿ ಮಹಾದೇವನಾದ ಪರಮೇಶ್ವರನು ಅವರಿಗೆ ಪ್ರಸನ್ನನಾಗಿ ಉಪದೇಶಮಾಡಿದನು. ಶಿವನು ಹೇಳಿದ ಕ್ರಮದಲ್ಲಿ ಅವರು ಇಂದ್ರಿಯ ಗಳನ್ನು ಜಯಿಸಿ ಯಥಾವಿಧಿಯಾಗಿ ಶ್ರೀಹರಿಯ ಜಪ, ಧ್ಯಾನ, ಪೂಜೆಗಳನ್ನು ಮಾಡುತ್ತಿದ್ದರು.

ವಿದುರನು ಹೇಳುತ್ತಾನೆ:—"ಹೇ ಬ್ರಹ್ಮನ್! ಮಾರ್ಗ ಮಧ್ಯದಲ್ಲಿ ಶಿವನು ಆ ಪ್ರಚೇತರುಗಳನ್ನು ಸಂಧಿಸಿ ಪ್ರಸನ್ನನಾಗಿ ಅವರಿಗೆ ಏನನ್ನು ಉಪದೇಶಮಾಡಿದನು" ಅದೆಲ್ಲವನ್ನೂ ನನಗೆ ಹೇಳಿ ನನ್ನನ್ನು ಅನುಗ್ರಹಿಸಬೇಕು. ಯಾವ ಈಶ್ವರನನ್ನು ಇಷ್ಟದೇವನನ್ನಾಗಿ ಭಾವಿಸಿ ಮುನಿಗಳು ದರ್ಶನವನ್ನು ಪಡೆಯಲಾಗದೆ ಕೇವಲ ಧ್ಯಾನದಿಂದಲೇ ತೃಪ್ತಿ ಹೊಂದುವರೋ ಅಂತಹ ಶಿವನನ್ನು ಮನುಷ್ಯರು ಸಂಧಿಸು ವುದು ದುರ್ಲಭವೇ ಸರಿ. ಭಗವಾನ್ ಶಿವನು ಲೋಕಾನುಗ್ರಹ

ಕ್ಕಾಗಿಯೇ ಘೋರ ವೇಷವನ್ನು ಅಥವ ಶಕ್ತಿಯನ್ನು ಧಾರಣೆ ಮಾಡಿ ರುವನು. ಆದರೆ ಆತನು ಆತ್ಮಾನಂದಾನುಭವದಲ್ಲಿಯೇ ತೃಪ್ತನಾಗಿ ದ್ದಾನೆ ಅಲ್ಲವೇ ?

ಮೈತ್ರೇಯರು ಹೇಳುತ್ತಾರೆ.;—"ಸಾಧು ಸ್ವ ಭಾ ವ ದ ಪ್ರಾಚೀತರುಗಳಿಗೆ ಪ್ರಾಚೀನಬರ್ಹಿಯು ಸೃಷ್ಟಿಯನ್ನು ಮಾಡ ಬೇಕೆಂಬ ಆಜ್ಞೆಯನ್ನು ಕೊಟ್ಟ ನಂತರ ಅವರು ಪಿತೃವಿನ ವಚನ ವನ್ನು ಆದರ ಪೂರ್ವಕವಾಗಿ ಶಿರಸಾ ಧಾರಣೆ ಮಾಡಿ, ತಪಸ್ಸು ಮಾಡಬೇಕೆಂಬ ಇಚ್ಛೆಯಿಂದ ಪಶ್ಚಿಮದಿಕ್ಕಿಗೆ ಹೊರಟರು. ಪಶ್ಚಿಮ ದಿಕ್ಕಿನಲ್ಲಿ ಅವರು ಒಂದು ದೊಡ್ಡ ಕೆರೆಯನ್ನು ಕಂಡರು. ಅದು ಒಂದು ಸಣ್ಣ ಸಮುದ್ರದಂತೆ ಕಾಣುತ್ತಿತ್ತು. ಆ ಸರೋವರವು ಮಹಾತ್ಮರುಗಳ ಮನಸ್ಸಿನಂತೆ ಸ್ವಚ್ಛವಾಗಿ ಗಂಭೀರವಾಗಿದ್ದಿತು. ಆ ಸರೋವರದಲ್ಲಿ ವಾಸಮಾಡುವ ಮೀನು ಮುಂತಾದ ಜಲ ಜಂತು ಗಳು ಪ್ರಸನ್ನವಾಗಿದ್ದವು. ಆ ಸರೋವರದಲ್ಲಿ ಅರಳಿದ ನೀಲಕಮಲ, ಅಂಭೋಜ, ಕಹ್ಲಾರ, ಇಂದೀವರ ಮುಂತಾದ ವಿವಿಧಗಳಾದ ಕಮಲ ಗಳು. ಶೋಭಿಸುತ್ತಿದ್ದವು. ಆ ಸರೋವರದ ದಡದಲ್ಲಿ ಹಂಸ, ಕಾರಂ ಡವ, ಸಾರಸ ಮುಂತಾದ ಪಕ್ಷಿಗಳು ಕೂಗುತ್ತಾ ಆಟವಾಡುತ್ತಿ ದ್ದವು. ಮತ್ತು ಮಧುಕರಗಳ ಸುಂದರ ಸ್ವರವನ್ನು ಕೇಳಿ ಸರೋ ವರದ ಅಂಚಿನಲ್ಲಿದ್ದ ವೃಕ್ಷಗಳೂ, ಲತೆಗಳೂ, ಆನಂದದಿಂದ ರೋಮಾಂಚವಾಗಿ ಹೂ ಬಿಡುತ್ತಿರ ಲಿಲ್ಲವೆಂದು ಕಾಣುತ್ತಿತ್ತು. ಪದ್ಮದ ಪರಾಗವನ್ನು ತೆಗೆದುಕೊಂಡು ನಾಲ್ಕು ಕಡೆಗೂ ಸಂಚರಿಸುವ ವಾಯುವು ದಿಕ್ಕು ದಿಕ್ಕಿಗೂ ಆನಂದವನ್ನೇ ಹರಡುತ್ತಿದ್ದಂತೆ ತೋರುತ್ತಿದ್ದಿತು. ಅಲ್ಲಿ ರಾಜಕುಮಾರರು ಮುಂಚೆ ಮೃದಂಗ, ತಬಲ, ಆದಿವಾದ್ಯಗಳನ್ನು

ಕೇಳಿದರು. ಅದರೊಡನೆಯೇ ದಿವ್ಯ ಗಾನವನ್ನೂ ಅದರ ಮನೋಹರ ವಾದ ವಿವಿಧ ರಾಗಗಳನ್ನೂ ಕೇಳಿದರು. ಅವನ್ನು ನೋಡಿ ಅವರು ವಿಸ್ಮಿತರಾದರು. ಹಾಗೆಯೇ ತಪ್ತಕಾಂಚನದಂತೆ ಶೋಭಾಯ ಮಾನವಾದ ದೇಹದಿಂದಲೂ, ಮೂರುಕಣ್ಣುಗಳಿಂದಲೂ, ಶೋಭಿತನಾದ ನೀಲಕಂಠನಾದ ಶಿವನು ಆ ಸರೋವರದಿಂದ ಹೊರಕ್ಕೆ ಬಂದನು. ಶಿವನ ಹಿಂದೆಹಿಂದೆಯೇ ದೇವತೆಗಳು ಸ್ತೋತ್ರಮಾಡುತ್ತಿರುವುದನ್ನು ಆ ಪ್ರಾಚೇತರುಗಳು ನೋಡಿದರು. ಮತ್ತು ಆತನ ಮನೋಹರ ವಾದ ಮುಖ ಮಂಡಲವನ್ನು ನೋಡುತ್ತಲೇ ಆತನು ಪ್ರಸನ್ನನಾಗಿ ವರವನ್ನು ಕೊಡಲು ಸಿದ್ಧನಾಗಿದ್ದಾನೆ ಎಂದು ತಿಳಿದರು. ಮಹಾ ದೇವನು ಅಲ್ಲಿ ಧಟ್ಟನೆ ಪ್ರಕಟನಾದುದನ್ನು ನೋಡಿದ ಆ ಪ್ರಚೇತರು ಗಳಿಗೆ ಬಹಳ ಆಶ್ಚರ್ಯವುಂಟಾಯಿತು. ಅವರು ಈಶ್ವರನಿಗೆ ದಂಡ ವತ್ಪ್ರಣಾಮವನ್ನು ಮಾಡಿದರು. ಶರಣಾಗತರ ಸಂಕಟವನ್ನು ಕತ್ತರಿ ಸುವ ಧರ್ಮಪಾಲಕನಾದ ಶಿವನು ಆ ಧರ್ಮಜ್ಞರಾದ, ಸುಶೀಲ ರಾದ ಪ್ರಚೇತರುಗಳನ್ನು ನೋಡಿ ಹೇಳಿದನು. "ನೀವು ಪ್ರಾಚೀನ ಬರ್ಹಿ ರಾಜನ ಮಕ್ಕಳು ಎಂಬುದು ನನಗೆ ಗೊತ್ತಿದೆ. ನೀವು ಏತಕ್ಕಾಗಿ ಬಂದಿರುವಿರೆಂಬುದನ್ನೂ ನಾನು ಬಲ್ಲೆ. ನಿಮಗೆ ಕಲ್ಯಾಣ ವಾಗಲಿ ! ನಿಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ಈಗ ದರ್ಶನ ಕೊಟ್ಟಿ ದ್ದೇನೆ. ಯಾವ ಪುರುಷನು ಪ್ರಕೃತಿ ಪುರುಷರುಗಳಿಗೆ ಸ್ವಾಮಿ ಯಾದ ಸಾಕ್ಷಾತ್ ಮಹಾ ವಿಷ್ಣುವಿಗೆ ಶರಣಾಗತನಾಗುವನೋ ಅಂತಹವನು ನನಗೆ ಪ್ರಿಯನು. ನೂರಾರು ಜನ್ಮಗಳು ಧರ್ಮ ಮಾರ್ಗದಲ್ಲಿ ಧೃಢವಾಗಿ ಸಾಧನೆ ಮಾಡಿದನಂತರ ಪುರುಷನಿಗೆ ಬ್ರಹ್ಮಪದವು ಸಿಕ್ಕುವುದು. ಅದಕ್ಕಿಂತಲೂ ಹೆಚ್ಚಿನ ಪುಣ್ಯದಿಂದ

ನನ್ನ ಪದವು ಸಿಕ್ಕುವುದು. ಆದರೆ ಯಾವ ವ್ಯಕ್ತಿಯು ಶ್ರೀ ಮಹಾ ವಿಷ್ಣುವಿನ ಭಕ್ತನೋ ಆತನು ಶರೀರವನ್ನು ಬಿಟ್ಟನಂತರ ವಿಷ್ಣು ಲೋಕಕ್ಕೆ ಹೋಗುವನು. ದೇವತೆಗಳೂ, ನಾವೆಲ್ಲರೂ, ಯಥಾ ಸಮಯದಲ್ಲಿ ಆ ವಿಷ್ಣುಪದದಲ್ಲಿಯೇ ಐಕ್ಯವಾಗುವೆವು. ತನ್ನ ಸ್ವಧರ್ಮ ವನ್ನು ಶ್ರದ್ಧೆಯಿಂದ ಆಚರಣೆಮಾಡುವ ಮನುಷ್ಯನು ಅನೇಕ ಜನ್ಮ ಗಳು ಕಳೆದಮೇಲೆ ಬ್ರಹ್ಮಲೋಕವನ್ನು ಹೊಂದುವನು. ಅನಂತರ ಅದಕ್ಕಿಂತ ಹೆಚ್ಚಿನ ಪುಣ್ಯವನ್ನು ಸಂಪಾದನೆ ಮಾಡಿದನಂತರ ನನ್ನನ್ನು ಹೊಂದುತ್ತಾನೆ. ಆದರೆ ಯಾವಾತನು ಅಖಂಡ ಪರಿಪೂರ್ಣ ನಾದ ಭಗವಂತನ ಭಕ್ತನಾಗುವನೋ ಅವನು ಶರೀರವನ್ನು ಬಿಡು ತ್ತಿದ್ದಂತೆಯೇ ಮಾಯಾ ಪ್ರಪಂಚದಿಂದ ಬಿಡಲ್ಪಟ್ಟು ವಿಷ್ಣುಪದ ವನ್ನು ಹೊಂದುತ್ತಾನೆ. ನಾನೂ ಮತ್ತು ಉಳಿದೆಲ್ಲ ದೇವತೆಗಳೂ, ನಮ್ಮ ನಮ್ಮ ಅಧಿಕಾರ ಕ್ರಮದಲ್ಲಿ ಲಿಂಗಶರೀರವು ನಷ್ಟವಾದ ನಂತರ ವಿಷ್ಣುವಿನಲ್ಲಿ ಲೀನರಾಗುತ್ತೇವೆ. ಎಲೈ ರಾಜಪುತ್ರರುಗಳೇ ! ನೀವು ಪರಮ ಭಾಗವತರಾಗಿದ್ದೀರಿ. ಆದುದರಿಂದಲೇ ನೀವು ನನಗೂ ಪ್ರಿಯರು. ನನಗೆ ಭಗವದ್ಭಕ್ತರಿಗಿಂತ ಹೆಚ್ಚಿನ ಪ್ರಿಯರಿಲ್ಲ. ಆದುದ ರಿಂದ ಪವಿತ್ರವಾದ, ಮಂಗಳವನ್ನು ಕೊಡುವ ಮೋಕ್ಷವನ್ನು ಸಿದ್ಧ ಮಾಡುವ, ಶ್ರೇಷ್ಠವಾದ ಜಪವನ್ನು ಹೇಳುತ್ತೇನೆ. ಕೇಳಿರಿ."

ಮೈತ್ರೇಯರು ಹೇಳುತ್ತಾರೆ:—ಈರೀತಿಯಾಗಿ ದಯಾಯುಕ್ತನಾಗಿ ಶ್ರೀ ಶಿವನು ಕೈ ಕಟ್ಟಿಕೊಂಡು ನಿಂತುಕೊಂಡಿರುವ ರಾಜಪುತ್ರರುಗಳಿಗೆ ನಾರಾಯಣಸಂಬಂಧಿಯಾದ ಈ ಮಾತುಗಳನ್ನು ಹೇಳಿದನು.

ಶ್ರೀರುದ್ರನು ಹೇಳುತ್ತಾನೆ:—ದೇವ! ಆತ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ

ಜನಗಳಿಗೆ ಕಲ್ಯಾಣಪ್ರಾಪ್ತಿಗೋಸ್ಕರವಾಗಿಯೇ ನೀನು ಸಿದ್ಧನಾಗಿ ದ್ದೀಯೆ. ನೀನು ಎಲ್ಲರ ಆತ್ಮನಾಗಿದ್ದೀಯೆ. ನೀನು ಸರ್ವತ್ರ ಪರಮಾನಂದ ರೂಪದಿಂದ ಸ್ಥಿರನಾಗಿ ನಿಂತಿದ್ದೀಯೆ. ಆದುದರಿಂದ ನಾನು ನಿನಗೆ ಪ್ರಣಾಮಮಾಡುತ್ತೇನೆ. ದೇವಲೋಕ ಮಯವಾದ ಕಮಲವು ನಿನ್ನ ನಾಭಿಯಿಂದ ಉತ್ಪನ್ನವಾಗಿದೆ. ನೀನು ಸಮಸ್ತಕ್ಕೂ ಕಾರಣನಾಗಿದ್ದೀಯೆ. ನೀನೇ ತತ್ವಗಳಿಗೂ, ಪಂಚ ತನ್ಮಾತ್ರೆಗಳಿಗೂ ನಿಯಂತೃವು. ಚಿತ್ತಕ್ಕೆ ಅಧಿಷ್ಠಾತೃವಾದ, ಶಾಂತನಾದ, ವಿಕಾರ ರಹಿತನಾದ, ಸ್ವಯಂಪ್ರಕಾಶನಾದ, ದೇವನು ನೀನೇ ! ಅಹಂಕಾರಕ್ಕೆ ಅಧಿಷ್ಠಾತೃವಾದ, ಅವ್ಯಕ್ತನಾದ, ಅನಂತನೇ ನೀನು ! ನಿನ್ನ ಮುಖ ದಲ್ಲಿನ ಅಗ್ನಿಯಿಂದ ಲೋಕತ್ರಯಗಳನ್ನೂ ಭಸ್ಮಮಾಡುವ ಮೃತ್ಯು ರೂಪನಾದ, ಸಂಕರ್ಷಣನೇ ನೀನು. ನಿನ್ನಿಂದಲೇ ಈ ಜಗತ್ತಿನ ಜ್ಞಾನವಾಗುವುದು. ಬುದ್ಧಿಗೆ ಅಧಿಷ್ಠಾತೃವಾದ ಪ್ರದ್ಯುಮ್ನನು ನೀನೇ. ಸಂಪೂರ್ಣ ಇಂದ್ರಿಯಗಳಿಗೆ ಪ್ರಧಾನವಾದ ಮನಸ್ಸು ನಿನ್ನ ಸ್ವರೂಪವೇ ಆಗಿದೆ. ಮನಸ್ಸಿಗೆ ಅಧಿಷ್ಠಾತೃವಾದ ಅನಿರುದ್ಧನು ನೀನೇ. ನಿನಗೆ ಬಾರಿ ಬಾರಿಗೂ ನಮಸ್ಕರಿಸುತ್ತೇನೆ. ತೇಜಃ ಪೂರ್ಣನಾದ, ವಿಶ್ವದಲ್ಲಿ ತೇಜಸ್ಸಿನಿಂದ ತುಂಬಿರುವ ನಿನಗೆ ವಂದಿಸು ವೆನು. ನಿನಗೆ ಕ್ಷಯವೂ ಇಲ್ಲ. ವೃದ್ಧಿಯೂ ಇಲ್ಲ. ನೀನೇ ಸ್ವರ್ಗಕ್ಕೂ ಮತ್ತು ಮೋಕ್ಷಕ್ಕೂ ದ್ವಾರರೂಪನಾಗಿದ್ದೀಯೆ. ಎಲ್ಲ ರಿಗೂ ಅಂತರ್ಯಾಮಿಯಾಗಿದ್ದೀಯೆ. ನೀನು ಅಗ್ನಿ ರೂಪನು. ಚಾತುರ್ಹೋತ್ರ ಕರ್ಮಕ್ಕೆ ಸಾಧನನು. ನಿನ್ನಿಂದಲೇ ಚಾತುರ್ಹೋತ್ರ ಕರ್ಮವು ಸಿದ್ಧವಾಗುವುದು. ಪಿತೃಗಳಿಗೆ ಅನ್ನ ಸ್ವರೂಪನೂ ನೀನೇ. ದೇವಗಣಕ್ಕೂ ಅನ್ನ ಸ್ವರೂಪನು ನೀನೇ. ಭಗವಾನ್ ಚಂದ್ರ

ಸ್ವರೂಪನೂ ನೀನೇ. ಸಮಸ್ತ ಪ್ರಾಣಿಗಳಿಗೂ ತೃಪ್ತಿಯನ್ನು ಕೊಡುವವನೂ ನೀನೇ. ಜಲ ರೂಪನೂ ನೀನೇ. ಪೃಥ್ವಿ ಸ್ವರೂಪನಾದ ಮತ್ತು ಪ್ರಾಣಿಗಳಿಗೆ ಶರೀರರೂಪನಾದ ವಿಶ್ವಮೂರ್ತಿಯಾದ ನಿನಗೆ ನಮಸ್ಕಾರವು. ಲೋಕ ತ್ರಯಗಳಿಗೆ ಪಾಲಕನಾದ ವಾಯು ರೂಪನಾದ ಮತ್ತು ಶಾರೀಕ ಬಲರೂಪನಾದ ದೇವನೇ ನೀನು. ನೀನೇ ಆಕಾಶರೂಪನು. ಶಬ್ದಗುಣಯುಕ್ತನಾಗಿರುವುದರಿಂದ ಸಂಪೂರ್ಣ ಅರ್ಥಕ್ಕೆ ಪ್ರಕಾಶನಾಗಿದ್ದೀಯೆ. ನಿನ್ನ ಆಧಾರದಿಂದಲೇ ಆಂತರಿಕ ಮತ್ತು ಬಾಹ್ಯ ವ್ಯವಹಾರ ಆಗುತ್ತಿರುವುದು. ನೀನು ಪುಣ್ಯಲೋಕ ರೂಪನಾಗಿದ್ದೀಯೆ. ನಿನಗೆ ನಮಸ್ಕಾರವು. ಯಾವ ಪ್ರವೃತ್ತಿ ಮತ್ತು ನಿವೃತ್ತಿಗಳ ಮೂಲಕ ಯಥಾಕ್ರಮವಾಗಿ ಪಿತೃ ಮತ್ತು ದೇವ ಲೋಕಗಳು ಸಿಕ್ಕುತ್ತವೆಯೋ ಅಂತಹ ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗವು ನಿನ್ನ ಸ್ವರೂಪವೇ ಆಗಿದೆ. ಅಧರ್ಮದ ದುಃಖರೂಪ ಫಲವನ್ನು ಕೊಡುವ ಮೃತ್ಯುವು ನೀನೇ. ಹೇ ಈಶ್ವರ ! ನೀನೇ ಸಮಸ್ತ ಕರ್ಮಗಳಿಗೂ ಫಲಗಳನ್ನು ಕೊಡುವ ಸರ್ವಜ್ಞನಾಗಿದ್ದೀಯೆ. ಧರ್ಮಾತ್ಮನಾದ ಕೃಷ್ಣರೂಪನಾಗಿದ್ದೀಯೆ. ನಿನ್ನ ಬುದ್ಧಿಯು ಯಾವಾಗಲೂ ಕುಂಠಿತವಾಗುವುದಿಲ್ಲ. ನೀನು ಪುರಾಣ ಪುರುಷನಾದ, ಸಾಂಖ್ಯಯೋಗಕ್ಕೆ ಈಶ್ವರನಾದ, ಆಚಾರ್ಯನಾಗಿದ್ದೀಯೆ. ನಿನಗೆ ನಮಸ್ಕಾರವು. ಅಹಂಕಾರ ರೂಪನಾದ ರುದ್ರನೂ ನೀನೇ. ಕರ್ತಾಶಕ್ತಿ, ಕರ್ಮಶಕ್ತಿ, ಕಾರಣ ಶಕ್ತಿಗಳೊಂದಿಗೆ ಯುಕ್ತನಾದವನೂ ನೀನೇ. ನೀನೇ ಬ್ರಹ್ಮನು. ನಿನ್ನಿಂದಲೇ ಅನೇಕ ಪ್ರಕಾರವಾದ ಪ್ರಾಣಿಗಳ ಸೃಷ್ಟಿಯಾಯಿತು. ನೀನೇ ಜ್ಞಾನಸ್ವರೂಪನು. ಕ್ರಿಯಾಸ್ವರೂಪ, ಜ್ಞಾನಿಯೂ ಆಗಿದ್ದೀಯೆ.

ಯಾವ ರೂಪವು ಭಕ್ತರಿಗೆ ಪ್ರಿಯವಾಗಿದೆಯೋ ಯಾವುದನ್ನು ಎಲ್ಲ ಭಕ್ತರೂ ಪೂಜಿಸುವರೋ ಮತ್ತು ಯಾವುದು ಸಂಪೂರ್ಣ ಇಂದ್ರಿಯಗಳ ಗುಣಗಳನ್ನು ಪ್ರಕಾಶಿತವಾಗಿ ಮಾಡುವುದೋ ಅಂತಹ ನಿನ್ನ ರೂಪವನ್ನು ನಾವು ನೋಡಲು ಇಚ್ಛೆಪಡುತ್ತೇವೆ. ದೇವ! ನಿನ್ನ ಆ ಮೂರ್ತಿಯು ವರ್ಷಾಕಾಲದ ಮೇಘದಂತೆ ಶ್ಯಾಮಲವರ್ಣವಾಗಿದೆ. ನಿನ್ನ ಚತುರ್ಭುಜಗಳು ಜಾನುಪರ್ಯಂತ ಉದ್ದವಾಗಿ ಸುಂದರವಾಗಿವೆ ಮುಖವು ಪರಮ ಸುಂದರವಾಗಿದೆ ಸಮಸ್ತ ಅವಯವಗಳು ಅಚ್ಚುಕಟ್ಟಾಗಿ ಲಕ್ಷಣವಾಗಿವೆ. ಎರಡು ನೇತ್ರಗಳೂ ಕಮಲಪತ್ರದಂತೆ ವಿಶಾಲವಾಗಿ ಆನಂದದಾಯಕಗಳಾಗಿವೆ. ನಾಸಿಕವೂ ಹುಬ್ಬುಗಳೂ ಬಹು ಸುಂದರವಾಗಿವೆ. ದಂತಪಂಕ್ತಿಗಳಿಂದಲೂ ಸುಂದರ ದುಂಡು ಕಪೋಲಗಳಿಂದಲೂ ಒಡಗೂಡಿದ ಮುಖವು ದರ್ಶನಯೋಗ್ಯವಾದುದು. ಎರಡು ಕಿವಿಗಳಲ್ಲಿಯೂ ಮಕರ ಕುಂಡಲಗಳು ಶೋಭಿಸುತ್ತಿವೆ ಕಮಲ ಪುಷ್ಪರಾಗದಂತೆ ಪೀತವರ್ಣದ ವಸ್ತ್ರವು ಸೊಂಟದಲ್ಲಿ ಶೋಭಿಸುತ್ತಿದೆ. ಶಿರದಲ್ಲಿ ಕಿರೀಟ ಮುಕುಟ, ಭುಜಗಳಲ್ಲಿ ನವರತ್ನಖಚಿತ ಭುಜಕೀರ್ತಿ, ಕಣ್ಣುಗಳ ಠಕನೆಯಲ್ಲಿ ಪ್ರಕಟವಾಗುವ ಪ್ರೇಮ, ಮುಖದಲ್ಲಿ ಮಂದಹಾಸ, ಹಣೆಯ ಮೇಲಿನ ಗುಂಗುರು ಕೂದಲು ಹೃದಯದಲ್ಲಿನ ವನಮಾಲೆ, ಚರಣಗಳಲ್ಲಿನ ನೂಪುರ. ಸೊಂಟದಲ್ಲಿನ ಉಡಿದಾರ, ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮ, ಕಂಠದಲ್ಲಿ ಕೌಸ್ತುಭ ಮಣಿ ಇವುಗಳು ಅಪೂರ್ವ ಸೌಂದರ್ಯವನ್ನು ಬೀರುತ್ತಲಿವೆ. ಶ್ಯಾಮಲವರ್ಣದ ವಕ್ಷಸ್ಥಳದಲ್ಲಿ ಶೋಭಿಸುವ ಲಕ್ಷ್ಮೀದೇವಿಯ ಕಾಂತಿಯು ಎದುರಿನಲ್ಲಿ ಸುವರ್ಣರೇಖಾಯುಕ್ತ ಒರೆಗಲ್ಲಿನ ಶೋಭೆಯೂ ತುಚ್ಛವಾಗುವುದು. ಗಾಳಿಯಿಂದ ಅಲುಗಾಡುವ ಅಶ್ವತ್ಥವೃಕ್ಷದ ಎಲೆಯಂತೆ ಶ್ವಾಸೋಚ್ಛ್ವಾಸ

ಗಳಿಂದ ಚಲಿಸುವ ತ್ರಿವಳಿಯುಕ್ತ ತ್ರಿವಳಿಯು ಅದೇ ತಾನೇ ಚಿಗುರು ತ್ತಿರುವ ಅರಳೀ ಎಲೆಯಂತೆ ಸುಂದರವಾಗಿ ಶೋಭಿಸುತ್ತಿರುವುದು. ಗಂಭೀರವಾದ ಸುತ್ತಿನಿಂದ ಕೂಡಿದ ನಾಭಿಯು ಶ್ವಾಸೋಚ್ಛ್ವಾಸ ಗಳಿಂದ ಚಲಿಸುವಾಗ ಆ ನಾಭಿಯಿಂದ ಉತ್ಪನ್ನವಾದ ವಿಶ್ವವು ಅದರಲ್ಲಿಯೇ ಅಡಗಿದಂತೆ ಕಾಣುವುದು. ಶ್ಯಾಮಲವರ್ಣದ ನಿತಂಬದ ಮೇಲೆ ಪೀತಾಂಬರವೂ ಅದರ ಮೇಲೆ ಸುವರ್ಣಮಯವಾದ ಉಡಿದಾರವೂ ಶೋಭಿಸುತ್ತಿರುವುವು. ಚರಣಗಳು ಸಮವಾಗಿ ಸುಂದರವಾಗಿರುವುವು. ಊರೂ ಮತ್ತು ಜಂಘೆಗಳು ದರ್ಶನೀಯವಾಗಿರುವುವು. ಎರಡು ಮೊಣಕಾಲುಗಳೂ ಹೆಚ್ಚು ಎತ್ತರವಿಲ್ಲದೆ ದೇಹ ಸೌಂದರ್ಯದ ಶೋಭೆ ಯನ್ನು ಹೆಚ್ಚಿಸುತ್ತಿರುವುವು. ಭಗವನ್! ತಮೋಗುಣಪ್ರವೃತ್ತಿ ಯುಳ್ಳವರಿಗೆ ಸನ್ಮಾರ್ಗವನ್ನು ತೋರಿಸುವ ಗುರುರೂಪವಾಗಿರುವೆ. ಶರದೃತುವಿನಲ್ಲಿ ಅರಳಿದ ಕಮಲದಳದಂತೆ ಶೋಭಾಯಮಾನವಾದ ಅರುಣ ವರ್ಣವುಳ್ಳ ಚರಣಕಮಲಗಳ ನಖಗಳ ಕಾಂತಿಯು ನಮ್ಮ ಹೃದಯಗಳ ಅಂಧಕಾರವನ್ನು ದೂರಮಾಡುವುದರಿಂದ ಆ ಚರಣ ದ್ವಯವನ್ನು ನಮಗೆ ದರ್ಶನ ಮಾಡಿಸು. ನಿನ್ನ ಈ 'ಭುವನ'ಭಯ ಭಂಜನರೂಪವು ಪರಮ ದುರ್ಲಭವಾದುದು. ತಮ್ಮ ಆತ್ಮವು ಶುದ್ಧ ವಾಗಬೇಕೆಂಬ ಇಚ್ಛೆಯುಳ್ಳವರೆಲ್ಲಾ ಆ ರೂಪವನ್ನು ಧ್ಯಾನಮಾಡ ಬೇಕು. ಇಂತಹ ಆತ್ಮಶುದ್ಧಿ ಕಾಮನೆಯುಳ್ಳ ಜನರು ಆ ರೂಪವನ್ನು ಧ್ಯಾನಮಾಡಬಲ್ಲರೇ ಹೊರತು ಪ್ರತ್ಯಕ್ಷ ದರ್ಶನ ಮಾಡಲಾರರು. ಯಾರು ತಮ್ಮ ಸ್ವಧರ್ಮದಲ್ಲಿಯೇ ನಿರತರಾಗಿರುವರೋ ಅವರಿಗೆ ನಿನ್ನ ಆ ರೂಪವು ಅಭಯದಾಯಕವಾಗಿರುವುದು. ಭಕ್ತರು ಮಾತ್ರ ನಿನ್ನನ್ನು ಹೊಂದಬಲ್ಲರು. ಆದರೆ ಉಳಿದ ಪ್ರಾಣಿಗಳಿಗೆ

ನೀನು ದುರ್ಲಭನು. ಆತ್ಮ ತ್ಯಾಗಿಗಳಿಗೆ ನೀನು ಗತಿಸ್ವರೂಪನು. ಸ್ವರ್ಗ ರಾಜ್ಯವನ್ನು ಅನುಭವಿಸುತ್ತಿರುವವರೂ ನಿನ್ನ ದರ್ಶನಾಕಾಂಕ್ಷಿಗಳಾಗಿರುವರು. ನಾನು ನಿನ್ನ ಚರಣಗಳ ಸೇವೆಯನ್ನು ಬೇಡುತ್ತಿರುವೆನು. ಸಾಧು ಜನಗಳೂ ಸಹ ಬಹಳ ಪರಿಶ್ರಮದಿಂದಲೇ ನಿನ್ನನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುವುದು ಕಷ್ಟವಾಗಿರುವಾಗ ಅಂತಹ ನಿನ್ನನ್ನು ಭಕ್ತಿಯಿಂದ ಪ್ರಸನ್ನನನ್ನಾಗಿ ಮಾಡಿಕೊಂಡು ನಿನ್ನ ಚರಣಗಳನ್ನು ಸೇವಿಸದೆ ಸ್ವರ್ಗಾದಿ ತುಚ್ಛ ಸುಖಗಳನ್ನೇ ಅಪೇಕ್ಷಿಸುವ ಮೂಢನಿರುವನೆ ? ಯಾವ ಮೃತ್ಯುವು ತನ್ನ ಪ್ರಭಾವ ಮತ್ತು ಹುಬ್ಬಿನ ನೋಟದಿಂದ ವಿಶ್ವವನ್ನೆಲ್ಲಾ ವಿನಾಶ ಮಾಡಬಲ್ಲದೋ ಅದೂ ಸಹಾ ನಿನ್ನ ಚರಣಕಮಲಗಳನ್ನು ಶರಣುಹೋಗಿರುವ ಪುರುಷನ ಮೇಲೆ ತನ್ನ ಅಧಿಕಾರವನ್ನು ಉಪಯೋಗಿಸಲಾರದು. ಭಗವದ್ಭಕ್ತರ ಸಮಾಗಮದಲ್ಲಿ ಕಳೆದ ಅರ್ಧಕ್ಷಣದ ಸುಖಕ್ಕೆ ಸ್ವರ್ಗ ಮೋಕ್ಷಗಳೂ ಸರಿಯಾಗದಿರುವಾಗ ಅಧಿಕಾರ ಐಶ್ವರ್ಯಗಳ ಪಾಡೇನು ? ಭಗವನ್ ! ನಿನ್ನ ಪಾದಗಳು ಸಮಸ್ತ ಪಾಪಗಳನ್ನೂ ನಷ್ಟಮಾಡುವಂತಹವು. ನಿನ್ನ ಕೀರ್ತಿಯ ಕೀರ್ತನದಿಂದ ಯಾರ ಹೃದಯವು ಪವಿತ್ರವಾಗಿದೆಯೋ, ನಿನ್ನ ಚರಣಗಳಿಂದ ಹೊರ ಹೊರಟ ತೀರ್ಥ [ಗಂಗೆ] ಸ್ನಾನದಿಂದ ಯಾರ ದೇಹವು ಶುದ್ಧವಾಗಿದೆಯೋ ಅಂತಹ ಕಲ್ಮಷರಹಿತ, ಸಮಸ್ತ ಪ್ರಾಣಿಗಳಲ್ಲಿಯೂ ದಯೆಯುಳ್ಳ ಸರಳ ಪ್ರಕೃತಿಯ ಸಾಧು ಜನಗಳ ಸಂಗವು ನಿನ್ನ ಅನುಗ್ರಹದಿಂದ ನನಗೆ ಪ್ರಾಪ್ತವಾಗಲಿ ಎಂಬುದೇ ನನ್ನ ಪ್ರಾರ್ಥನೆ. ಯಾವಾಗ ಸಾಧುಗಳಲ್ಲಿ ಭಕ್ತಿ, ಮತ್ತು ಅವರ ಸಂಗದಲ್ಲಿ ಪ್ರೀತಿ ಇವುಗಳಿಂದ ಪ್ರಾಣಿಯ ಚಿತ್ತವು ಚಂಚಲ ರಹಿತವಾಗಿ ಶುದ್ಧವಾಗಿ ಇಂದ್ರಿಯ ವಿಷಯ

ಗಳ ಕಡೆಗೆ ಆಕರ್ಷಿಸಲ್ಪಡದಿರುವುದೋ ಮತ್ತು ಅಜ್ಞಾನದ ಅಂಧಕಾರ ಮಯವಾದ ಕಂದರದಲ್ಲಿ ಬೀಳದಿರುವುದೋ, ಆಗ ಆ ಪುರುಷನು ನಿನ್ನ ತತ್ವವನ್ನು ದರ್ಶನಮಾಡಲು ಅಥವ ತಿಳಿಯಲು ಶಕ್ತನಾಗುತ್ತಾನೆ. ದೇವ ! ನಿನ್ನ ತತ್ವವು ಎಂತಹ ವಿಚಿತ್ರವಾದುದು ? ದೃಶ್ಯವಾದ ಈ ವಿಶ್ವವು ನಿನ್ನ ತತ್ವದಲ್ಲಿ ಪ್ರಕಾಶಿತವಾಗುವುದು, ಅಥವಾ ವಿಶ್ವದಲ್ಲಿ ನಿನ್ನ ತತ್ವದಲ್ಲಿ ಪ್ರಕಾಶಿತವಾಗುವುದು. ಅಥವಾ ವಿಶ್ವದಲ್ಲಿ ನಿನ್ನ ಪ್ರಕಾಶವು ತುಂಬಿ ತುಳುಕುತ್ತಿರುವುದು. ಅದನ್ನೇ ಬ್ರಹ್ಮ ಎಂದು ಕರೆಯುತ್ತಾರೆ. ಅದು ಪರಮಜ್ಯೋತಿಸ್ವರೂಪವಾದುದು. ಆಕಾಶ ದಂತೆ ಸರ್ವವ್ಯಾಪಿಯಾದುದು. ಹೇ ಈಶ ! ನೀನು ನಿನ್ನ ಬಹು ರೂಪಿಣಿಯಾದ ಮಾಯೆಯಿಂದ ಈ ಜಗತ್ತನ್ನು ಉತ್ಪನ್ನಮಾಡಿ ರುವೆ. ಇದನ್ನು ಪಾಲನೆ ಮಾಡುವೆ ಸಂಹಾರಮಾಡುವೆ. ಆದರೆ ನೀನು ಸ್ವತಃ ಈ ಸೃಷ್ಟಿಸ್ಥಿತಿಲಯ ರೂಪವಿಕಾರಕ್ಕೆ ಸಿಕ್ಕಿಲ್ಲ, ಅಂದರೆ ಸ್ವಸ್ವರೂಪದಲ್ಲಿ ನಿಂತಿರುವೆ. ಮಾಯೆಯು ಇತರರ ಬುದ್ಧಿಯಲ್ಲಿ ಭೇದ ಭಾವದ ಭ್ರಾಂತಿಯನ್ನು ಹುಟ್ಟಿಸಬಹುದಾದರೆ ಅದ ನಿನ್ನ ಮೇಲೆ ತನ್ನ ಪ್ರಭಾವವನ್ನೇ ಬೀರಲಾರದು. ನೀನು ಸರ್ವತಂತ್ರ ಸ್ವತಂತ್ರ ಸಚ್ಚಿದಾನಂದ ಪರಬ್ರಹ್ಮ ಪರಮಾತ್ಮನಾಗಿರುವೆ, ಎಂದು ನಾವು ತಿಳಿದಿದ್ದೇವೆ. ಸಿದ್ಧಿಯನ್ನು ಹೊಂದಲು ಇಚ್ಛಿಸುವ ಯೋಗಿಗಳು ಶಾಸ್ತ್ರ ಹೇಳಿದ ನಿನ್ನ ಸಾಕಾರ ಶ್ರೀರೂಪವನ್ನು ಶ್ರದ್ಧೆಯಿಂದಲೂ, ಕರ್ಮ ದಿಂದಲೂ ಭಜಿಸುವರು. ಆದುದರಿಂದ ಅವರು ವೇದಜ್ಞರು ತಂತ್ರ ಜ್ಞರು. ನೀನು ಪಂಚತತ್ವಗಳಿಗೂ ಇಂದ್ರಿಯಗಳಿಗೂ ಅಂತಃಕರಣ ಚತುಷ್ಟಯಕ್ಕೂ ನಿಯಂತೃವಾಗಿರುವೆ ಹೇ ಪ್ರಭು ! ನೀನೇ ಆದಿ ಪುರುಷನು, ನಿನ್ನ ಮಾಯಾಶಕ್ತಿಯನ್ನು ನಿನ್ನೊಳಗೆ ಅಡಗಿಸಿ

ಕೊಂಡಾಗ ನೀನೊಬ್ಬನೇ ಇರುವೆ. ನಿನ್ನ ಮಾಯೆಯನ್ನು ಹೊರಕ್ಕೆ ಬಿಟ್ಟಾಗ ಸತ್ವ ರಜಸ್ತಮೋ ಗುಣಗಳು ಉತ್ಪನ್ನವಾಗುವುವು. ಅವು ಗಳಿಂದ ಮಹತ್ತತ್ವ-ಅಹಂಕಾರತತ್ವ ಆಕಾಶ, ವಾಯು, ಅಗ್ನಿ, ಜಲ, ಪೃಥ್ವೀ, ದೇವ, ಋಷಿ, ಭೂತಗಣಗಳ ಉತ್ಪತ್ತಿಯಾಗುವುದು. ಅಥವಾ ಜಗತ್ತೆಲ್ಲವೂ ಪ್ರಕಾಶಿತವಾಗುವುದು. ನಿನ್ನ ಮಾಯಾಶಕ್ತಿ ಯಿಂದ ಅಂಡಜ, (ಪಕ್ಷಿ) ಸ್ವೇದಜ, (ಕಸದಿಂದ ಹುಟ್ಟುವ ಹುಳ ಹುಪ್ಪಟೆಗಳು) ಉದ್ಭಿಜ, (ವೃಕ್ಷಾದಿಗಳು) ಜರಾಯುಜ (ಮನುಷ್ಯ) ಎಂಬ ನಾಲ್ಕು ಪ್ರಕಾರದ ಪ್ರಾಣಿಗಳನ್ನು ಸೃಷ್ಟಿಮಾಡಿ ಅವುಗಳ ಶರೀರದಲ್ಲಿ ನೀನೇ ನಿನ್ನ ಅಂಶರೂಪ ಚೈತನ್ಯದಿಂದ ಜೀವರೂಪ ನಾಗಿ ಪ್ರವೇಶಮಾಡುವೆ. ಶರೀರ*ರೂಪಿಯಾದ ಪುರದಲ್ಲಿ ವಾಸ ಮಾಡುವುದರಿಂದ ನಿನ್ನನ್ನು ಪುರುಷನೆನ್ನುತ್ತಾರೆ. ಆದರೆ ನೀನು ಅವಿದ್ಯಾಮೋಹಿತ ಸಂಸಾರಿಯಾದ ಜೀವನಲ್ಲ. ಅಂದರೆ ಜನ್ಮ ಮರಣ ಧರ್ಮಯುಕ್ತನು ನೀನಲ್ಲ. ಪರಮಾತ್ಮನೇ ನೀನು. ಜೇನು ನೊಣವು ಯಾವುದಾದರೊಂದು ಸ್ಥಾನದಲ್ಲಿ ಗೂಡನ್ನು ಕಟ್ಟಿ ಅದ ರಲ್ಲಿ ಜೇನನ್ನು ತುಂಬಿಟ್ಟು ತಿನ್ನುವಂತೆ ಅವಿದ್ಯೆಯಲ್ಲಿ ಮೋಹಿತ ನಾಗಿ ಕರ್ಮಗಳ ಮೂಲಕ ಕ್ಷುದ್ರವಿಷಯ ಸುಖೋಪಭೋಗ ವಸ್ತು ಗಳನ್ನು ಸಂಗ್ರಹಿಸಿ ಭೋಗಿಸುವವನು *ಜೀವಾತ್ಮನು. ನೀನಾವರೋ

---

* 1)ಜೀವ ರೂಪದಿಂದ ಸೃಷ್ಟಿ ಶರೀರದಲ್ಲಿ 2] ಜಗದಾತ್ಮ ರೂಪದಿಂದ ಚಿನ್ಮೂರ್ತಿ ಸಮಷ್ಟಿ ಶರೀರದಲ್ಲಿ.

1) ಚೈತನ್ಯಂ ಯದಧಿಷ್ಠಾನಂ ಲಿಂಗದೇಹಶ್ಚ ಯಃ ಪುನಃ ।
ಚಿಚ್ಛಕ್ತಿರ್ಲಿಂಗದೇಹಸ್ಥಾ ತತ್ಸಂಘೋಽಜೀವ ಉಚ್ಯತೇ ॥

ಅಧಿಷ್ಠಾನವಾದ ಪರಬ್ರಹ್ಮ ಚೈತನ್ಯ, ಲಿಂಗದೇಹ, ಲಿಂಗದೇಹದಲ್ಲಿ ಪ್ರತಿಫಲಿಸುವ ಚಿಚ್ಛಕ್ತಿ ಇವುಗಳ ಸಂಘವು ಜೀವನೆನ್ನಲ್ಪಡುತ್ತದೆ. ಲಿಂಗದೇಹವು

ಅದಕ್ಕೆ ಸಾಕ್ಷಿಯಾದ ಪರಮಾತ್ಮನು. ಪ್ರಭು ! ನಿನ್ನ ವೇಗವು ಅತ್ಯಂತ ಪ್ರಚಂಡವಾದುದು. ಕಾಲವು ನಿನ್ನ ರಥವು. ವಾಯುವು ಹೇಗೆ ಮೇಘಗಳನ್ನು ತನ್ನ ಅಧೀನದಲ್ಲಿ ನಡೆಸುತ್ತಿರುವುದೋ ಹಾಗೆಯೇ ನೀನೂ ಸಹ ಪಂಚಭೂತಗಳ ಮೂಲಕ ಪ್ರಾಣಿಗಳನ್ನು ನಿನ್ನ ಅಧೀನದಲ್ಲಿ ನಡೆಯಿಸುತ್ತಿರುವೆ. ನಿನ್ನ ತತ್ವವು ಅಥವಾ ರೂಪವು ಅಗೋಚರವಾದುದು.

ಮನುಷ್ಯನ ವಿಷಯ ಭೋಗೇಚ್ಛೆಯು ಕಡಿಮೆಯಾಗುವುದಕ್ಕೆ ಬದಲಾಗಿ "ನಾನು ಹೀಗೆ ಮಾಡುತ್ತೇನೆ. ಹಾಗೆ ಮಾಡುತ್ತೇನೆ. ಎಂಬ ಮುಂತಾದ ಹೊಸ ಹೊಸ ಸಂಕಲ್ಪಗಳ ಚಿಂತೆಯನ್ನು ಮಾಡು ತ್ತಿರುತ್ತಾನೆ. ಹಸಿದಿರುವ ಸರ್ಪವು ಭಯಭ್ರಾಂತವಾದ ಕಪ್ಪೆಯನ್ನು —(*) ಇಲಿಯನ್ನು ತಟ್ಟನೆ ಹಿಡಿದು ಹೇಗೆ ತಿನ್ನುವುದೋ ಹಾಗೆ ವಿಷಯ ಲಾಲಸೆಯಿಂದ ವ್ಯಾಪ್ತನಾ ಪುರುಷನನ್ನು ಕಾಲರೂಪನಾದ ನೀನು ತಟ್ಟನೆ ನಾಶಮಾಡುತ್ತೀಯೆ. ನಿನ್ನಿಂದ ವಿಮುಖರಾಗಿರು ವುದರಿಂದ ಕ್ಷೀಣ ದೇಹಿಗಳಾದವರು ನಿನ್ನ ಚರಣಕಮಲವನ್ನು ಬಿಟ್ಟು ಅನ್ಯ ವಿಷಯಗಳಲ್ಲಿ ಅಲಿಪ್ತರಾಗಿರುವರು. ಬ್ರಹ್ಮನೂ ಚತುರ್ದಶ ಮನುಗಳೂ ನಿನ್ನ ಚರಣಕಮಲಗಳನ್ನು ಆಶ್ರಯಿಸಿರುವರು. ಹೇ ಬ್ರಹ್ಮನ್ ! ಈ ಜಗತ್ತು ಸಂಹಾರ ಕಾರಿಯಾದ ಕಾಲನ ಭಯ ದಿಂದ ನಾಶವಾಗುತ್ತಿರುವುದರಿಂದ ನೀನು ನಮ್ಮನ್ನು ಕಾಲ ಭಯದಿಂದ ರಕ್ಷಿಸು. ನಿನ್ನ ಮಾರ್ಗದಲ್ಲಿ ನಡೆಯುವುದರಿಂದ ಮನುಷ್ಯನಿಗೆ

---

ನಾಶವಾದರೆ ಅದರಲ್ಲಿ ಪ್ರತಿಫಲಿಸುವ ಚೈತನ್ಯ ಇರುವುದಿಲ್ಲ. ಆಗ ಅಖಂಡ ಚೈತನ್ಯ ...ಒಂದೇ ಉಳಿಯುವುದು. ಜೀವ ಎಂಬುದೇ ಇರುವುದಿಲ್ಲ. ಅದುದರಿಂದ ಜೀವನನ್ನು ಬೋಧಾಭಾಸ, ಚಿದಾಭಾಸ ಎನ್ನುತ್ತಾರೆ.

ಯಾವ ಭಯವೂ ಇರುವುದಿಲ್ಲ.

ಹೀಗೆ ರುದ್ರ ಗೀತೆಯನ್ನು ಆ ರಾಜಪುತ್ರರುಗಳಿಗೆ ಹೇಳಿ "ಎಲೈ ರಾಜಪುತ್ರರೇ ! ನೀವು ಪವಿತ್ರರಾಗಿರಿ. ನೀವಿನ್ನು ಧರ್ಮಾಚರಣೆಯಲ್ಲಿ ನಿರತರಾಗಿರಿ. ನಿಮ್ಮ ಅಂತಃಕರಣಗಳನ್ನು ಪರಮಾತ್ಮನಲ್ಲಿಟ್ಟು ಈ ರುದ್ರಗೀತೆಯನ್ನು ಪಾಠಮಾಡಿರಿ. ನಿಮಗೆ ಕಲ್ಯಾಣವಾಗಲಿ. ಎಲ್ಲ ಪ್ರಾಣಿಗಳ ಹೃದಯದಲ್ಲಿಯೂ ಅಂತರಾತ್ಮರೂಪದಿಂದ ನಿಂತಿರುವ ಶ್ರೀಹರಿಯನ್ನು ನಿಮ್ಮ ಆತ್ಮದಲ್ಲಿಯೇ ನಿಂತಿರುವನೆಂದು ತಿಳಿದು ನಿತ್ಯವೂ ಆತನನ್ನೇ ಪೂಜಿಸಿರಿ. ಧ್ಯಾನಮಾಡಿರಿ. ಸ್ತೋತ್ರಮಾಡಿರಿ. ನನ್ನಿಂದ ನಿಮಗೆ ಈ ಸ್ತೋತ್ರವು ಲಭ್ಯವಾಯಿತು. ಮುನಿಗಳಂತೆ ನೀವು ಚಿತ್ತವನ್ನು ನಿಗ್ರಹಿಸಿ, ಇದನ್ನು ಆದರದಿಂದ ಶ್ರದ್ಧೆಯಿಂದ ಮನಸ್ಸಿನಲ್ಲಿ ಚಿಂತನೆಮಾಡಿರಿ. ಮತ್ತು ಜಪದ ಮೂಲಕ ಇದನ್ನು ಸಾಧನೆಮಾಡಿರಿ. ಪ್ರಜಾಪತಿಗಳ ಪತಿಯಾದ ಬ್ರಹ್ಮನು ಭೃಗು ಮುಂತಾದ ಪುತ್ರರನ್ನು ಸೃಷ್ಟಿಮಾಡಿದನು ಅವರು ಅವನ ಆಜ್ಞೆಯಿಂದ ಸೃಷ್ಟಿಕಾರ್ಯವನ್ನು ಪ್ರಾರಂಭ ಮಾಡಿದಾಗ ಈ ಪವಿತ್ರ ಸ್ತೋತ್ರವನ್ನು ಉಪದೇಶಮಾಡಿದನು. ಅದರಿಂದ ಭೃಗು ಮುಂತಾದ ಪ್ರಜಾಪತಿಗಳ ಅಜ್ಞಾನವು ನಾಶವಾಯಿತು. ಮತ್ತು ಇದರ ಪ್ರಭಾವದಿಂದ ವಿವಿಧ ಸೃಷ್ಟಿಯು ಆರಂಭವಾಯಿತು.

ಯಾವ ಮನುಷ್ಯನು ವಾಸುದೇವನಲ್ಲಿ ಭಕ್ತಿಯನ್ನಿಟ್ಟು ಈ ಸ್ತೋತ್ರವನ್ನು ಭಕ್ತಿಯಿಂದ ಏಕಾಗ್ರಚಿತ್ತದಿಂದ ಪಠಣಮಾಡುತ್ತಾನೆಯೋ ಆತನಿಗೆ ನಿತ್ಯ ಮಂಗಳವಾಗುವುದು. ಕಲ್ಯಾಣಕಾರೀ

ವಿಷಯಗಳಲ್ಲೆಲ್ಲಾ ಜ್ಞಾನವೇ ಶ್ರೇಷ್ಠವಾದುದು. ಜ್ಞಾನರೂಪೀ ನಾವೆಯನ್ನು ಸಂಪಾದಿಸಿದವನು. ದುಸ್ತಾರವಾದ ಸಂಸಾರ ಸಾಗರ ವನ್ನು ಸುಲಭವಾಗಿ ದಾಟಬಲ್ಲನು ಈ ಸ್ತೋತ್ರವನ್ನು ಶ್ರದ್ಧಾ ಭಕ್ತಿಗಳಿಂದ ಪಠಣ ಮಾಡಿದರೆ ಶ್ರೀಹರಿಯನ್ನು ಪೂಜಿಸಿದಂತೆಯೇ. ಈ ಸ್ತೋತ್ರವನ್ನು ಪಾರಾಯಣ ಮಾಡುವವನು ಶ್ರೀಹರಿಯನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳುತ್ತಾನೆ. ಆತನಿಂದ ತನ್ನ ಮನಸ್ಸಿನ ಇಷ್ಟಾರ್ಥವನ್ನು ಪೂರ್ಣಮಾಡಿಕೊಳ್ಳುತ್ತಾನೆ. ದಿನವೂ ಪ್ರಾತಃಕಾಲದಲ್ಲಿ ಎರಡು ಕೈಗಳನ್ನೂ ಜೋಡಿಸಿ ಭಕ್ತಿಯಿಂದ ಇದನ್ನು ಪಠಣಮಾಡಿದವನು—ಹೇಳುವವನು ಕೇಳುವವನು ಕರ್ಮ ಬಂಧನದಿಂದ ಮುಕ್ತರಾಗುತ್ತಾರೆ. ಪರಮ ಪುರುಷನಾದ ಶ್ರೀ ಹರಿಯ ಈ ಸ್ತೋತ್ರವನ್ನು ಏಕಾಗ್ರ ಮನಸ್ಸಿನಿಂದ ನಿತ್ಯವೂ ಜಪ ಮಾಡುತ್ತಾ ತಪಸ್ಸು ಮಾಡಿರಿ. ನಿಮ್ಮ ಮನೋರಥವನ್ನು ಹೊಂದು ವಿರಿ.

ಪ್ರಚೇತರುಗಳು ರುದ್ರದೇವತೆಯನ್ನು (ಮಹಾದೇವನನ್ನು ಪೂಜಿಸಿದರು. ಅವರಿಗೆ ರುದ್ರಗೀತೆಯನ್ನು ಉಪದೇಶ ಮಾಡಿ ರಾಜಕುಮಾರರು ನೋಡುನೋಡುತ್ತಿದ್ದಂತೆಯೇ ಶಂಕರನು ಅಂತರ್ಧಾನನಾದನು. ಆ ಪ್ರಚೇತರು ತಮಗೆ ಉಪದೇಶವಾದ ರುದ್ರ ಗೀತೆಯನ್ನು ಜಪಮಾಡುತ್ತಲೇ ಜಲಾಂತರ್ಗತರಾಗಿ ಹತ್ತುಸಹಸ್ರ ವರ್ಷಗಳ ವರೆಗೂ ಘೋರ ತಪಸ್ಸುಮಾಡಿದರು. ಅವರ ತಂದೆ ಯಾದ ಪ್ರಾಚೀನ ಬರ್ಹಿಯು ಕರ್ಮ ಕಾಂಡಲ್ಲಿ ತತ್ಪರನಾಗಿ ಯಜ್ಞ ಗಳನ್ನು ಮಾಡುತ್ತಿದ್ದನು.

ಕೆಲವು ಕಾಲವಾದ ಮೇಲೆ ಆತ್ಮಜ್ಞಾನಿಗಳಾದ ಸನಂದನರಿಗೆ ಅವನ ಮೇಲೆ ದಯೆಯು ಹುಟ್ಟಿ ಅವನ ಬಳಿಗೆ ಬಂದು ಜ್ಞಾನೋಪದೇಶ ಮಾಡಿದರು.

ನಾರದ— "ಎಲೈ ರಾಜನೆ! ನೀನು ಈ ಯಜ್ಞರೂಪಕರ್ಮವನ್ನು ಮಾಡುತ್ತಾ ಯಾವ ಸುಖವನ್ನು ಅಪೇಕ್ಷಿಸುತ್ತಿರುವೆ? ದುಃಖದ ನಾಶ, ಸುಖದ ಲಾಭ, ಈ ಎರಡೇ ಮನುಷ್ಯನಿಗೆ ಕಲ್ಯಾಣಕಾರಿಗಳು. ಈ ಕರ್ಮಗಳಿಂದ ದುಃಖದ ನಾಶವೂ ಆಗಲಾರದು. ಸುಖದ ಲಾಭವೂ ಸಾಧಿಸಲಾರದು."

ರಾಜ—"ಹೇ ಮಹಾಭಾಗ! ನನ್ನ ಬುದ್ಧಿಯು ಕರ್ಮಗಳಲ್ಲಿ ಲಿಪ್ತವಾಗಿ ಹೋಗಿದೆ. ಪರಮ ಕಲ್ಯಾಣಕಾರಿಯಾದ ಮುಕ್ತಿಯು ಹೇಗೆ ದೊರೆಯುವುದೆಂಬುದರ ಜ್ಞಾನವು ನನಗೆ ಇಲ್ಲ. ಈ ಕರ್ಮಪಾಶದಿಂದ ನಾನು ಮುಕ್ತನಾಗುವ ನಿರ್ಮಲ ಜ್ಞಾನವನ್ನು ನೀವು ನನ್ನ ಮೇಲೆ ದಯೆಯಿಟ್ಟು ಉಪದೇಶ ಮಾಡಬೇಕು. ಸಂಸಾರದಲ್ಲಿ—ಮನೆಯಲ್ಲಿ ಆಸಕ್ತನಾದ ಪುರುಷನು ಪುತ್ರ, ಸ್ತ್ರೀ ಧನ ಮುಂತಾದವುಗಳನ್ನೇ ಪುರುಷಾರ್ಥವೆಂದು ತಿಳಿದು ಜಗತ್ತಿನಲ್ಲಿ ಅನೇಕ ಮಾರ್ಗಗಳಲ್ಲಿ (ಯೋನಿಗಳಲ್ಲಿ) ತಿರುಗುತ್ತಿರುತ್ತಾನೆ. ಪರಮಾರ್ಥವನ್ನು ಹೊಂದುವುದರಲ್ಲಿ ಎಂದಿಗೂ ಸಮರ್ಥನಾಗುವುದಿಲ್ಲ.

ನಾರದ—"ಪ್ರಜಾಪಾಲಕನಾದ ಭೂಪತಿಯೇ! ನೀನು ನಿರ್ದಯನಾಗಿ ಯಜ್ಞಗಳಲ್ಲಿ ಸಹಸ್ರಾರು ಪ್ರಾಣಿಗಳನ್ನು ಹತ್ಯೆ ಮಾಡಿರುವೆ. ಅವೆಲ್ಲವೂ ನೀನು ಮರಣ ಹೊಂದುವ ಮಾರ್ಗವನ್ನೇ ನೋಡುತ್ತಿರುವುವು. ನೀನು ಮರಣ ಹೊಂದಿದ ಮೇಲೆ ಆ ಪ್ರಾಣಿಗಳೆಲ್ಲವೂ ನೀನು

ಕೊಟ್ಟಿರುವ ಪೀಡೆಯನ್ನು ಜ್ಞಾಪಿಸಿಕೊಳ್ಳುತ್ತಾ ನಿನ್ನಮೇಲೆ ಮುಯ್ಯಿ ತೀರಿಸಿಕೊಳ್ಳಲು ಹವಣಿಸುತ್ತಿರುವುವು ಅವೆಲ್ಲವೂ ನಿನ್ನ ಮೇಲಿನ ಸಿಟ್ಟಿನಿಂದ ಯಮರಾಜನ ಸಮೀಪದಲ್ಲಿ ವಜ್ರದಂತೆ ಕಠಿಣಗಳಾದ ತಂತಮ್ಮ ಕಾಲುಗೊರಸುಗಳಿಂದಲೂ ಕೋಡುಗಳಿಂದಲೂ ನಿನ್ನ ಶರೀರವನ್ನು ತುಳಿದು ಛಿನ್ನ ಭಿನ್ನವಾಗಿ ಮಾಡುವುವು. ನಿನಗೆ ಬಲು ದೊಡ್ಡ ವಿಪತ್ತು ಕಾದಿದೆ. ಅದರಿಂದ ನೀನು ಪಾರಾಗಲು ನಿನಗೆ ಒಂದು ಪುರಾತನ ಇತಿಹಾಸವನ್ನು ಹೇಳುತ್ತೇನೆ. ಅದರಲ್ಲಿ ಪುರಂಜನನ ಚರಿತ್ರೆಯು ಇರುವುದು. ನೀನು ಏಕಾಗ್ರ ಚಿತ್ತನಾಗಿ ಅದನ್ನು ಕೇಳು. ಇದನ್ನು ಕೇಳುವುದರಿಂದ ನಿನಗೆ ಜ್ಞಾನವಾಗುವುದು. ಆ ಜ್ಞಾನದಿಂದ ಮುಕ್ತಿಯು ಲಭಿಸುವುದು".

ಎಂದು ಪುರಂಜನನ ಚರಿತ್ರೆಯನ್ನು ಹೇಳಲು ಆರಂಭಿಸಿದರು.— "ಬಹುಕಾಲದ ಹಿಂದೆ ಪುರಂಜನನೆಂಬ ರಾಜನಿದ್ದನು. ಅವನಿಗೊಬ್ಬ ಮಿತ್ರನಿದ್ದನು. ಅವನ ಹೆಸರು ಯಾರಿಗೂ ಗೊತ್ತಿರಲಿಲ್ಲ. ಅವನು ಏನು ಮಾಡುತ್ತಿದ್ದಾನೆ ಎಂಬುದು ಯಾರಿಗೂ ತಿಳಿಯದು. ಆ ರಾಜನು ತನಗೆ ಭೋಗಕ್ಕೆ ಯೋಗ್ಯವಾದ ಸ್ಥಾನವನ್ನು ಹುಡುಕುತ್ತಾ ಭೂಮಿಯನ್ನು ಸಂಚರಿಸಲಾರಂಭಿಸಿದನು. ಅವನಿಗೆ ತೃಪ್ತಿಯನ್ನು ಕೊಡಬಲ್ಲ ಭೋಗಸ್ಥಾನವು ಎಲ್ಲಿಯೂ ಸಿಕ್ಕದಿರಲು ಅವನು ಉದಾಸೀನನಾದನು. ಅವನಿಗೆ ಯಾವ ಯಾವ ಭೋಗವು ಅಪೇಕ್ಷೆಯಾಯಿತೋ ಅದನ್ನು ತೃಪ್ತಿಯಾಗಿ ಅನುಭವಿಸುವ ಸ್ಥಾನವು ಅವನಿಗೆ ಸಿಕ್ಕಲೇ ಇಲ್ಲ. ಅವನಿಗೆ ಯಾವಪಟ್ಟಣವು ಸಿಕ್ಕಿದರೂ ಅದು ಒಪ್ಪಿಗೆಯಾಗಲೇ ಇಲ್ಲ ಹೀಗೆ ಭೂಮಂಡಲದಲ್ಲಿ ಸುತ್ತುತ್ತಿರಲು, ಹಿಮವತ್ಪರ್ವತದ ದಕ್ಷಿಣ ಭಾಗದ ಶಿಖರಗಳಲ್ಲೊಂದರ ಮೇಲೆ ಒಂದು ಪಟ್ಟಣವು ಸಿಕ್ಕಿತು. ಆ ಪಟ್ಟಣದಲ್ಲಿ ಪುರಂಜನನಿಗೆ ಯಾವ ಯಾವ ಭೋಗದ ಅಪೇಕ್ಷೆಯಿದ್ದಿತೋ ಅದೆಲ್ಲವನ್ನೂ

ತೃಪ್ತಿಯಾಗಿ ಅನುಭವಿಸುವ ಅನುಕೂಲತೆಗಳು ಕಂಡುಬಂದವು ಆ ಪಟ್ಟಣದಲ್ಲಿ ಒಂಭತ್ತು ಬಾಗಿಲುಗಳಿದ್ದವು. ನಾಲ್ಕು ಕಡೆಗಳಲ್ಲಿಯೂ ಎತ್ತರದ ಗೋಡೆಗಳೂ, ಮನೋಹರಗಳಾದ ಉಪವನಗಳೂ, ಸರೋವರಗಳೂ, ಕಾರಂಜಿಗಳೂ, ಪುಷ್ಪ ವಾಟಿಕೆಗಳೂ, ಆ ಪಟ್ಟಣದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದವು. ವಜ್ರ, ವೈಡೂರ್ಯಾದಿ ನವರತ್ನಗಳಿಂದ ಅಲಂಕೃತಗಳಾದ ದೊಡ್ಡ ದೊಡ್ಡ ಪ್ರಾಸಾದಗಳೂ, ಕಣ್ಣು ಕೋರೈಸುವಂತಹ ಮಣಿಗಳನ್ನು ತಲೆಯಲ್ಲಿ ಧರಿಸಿರುವ ನಾಗರುಗಳಿಂದ ಶೋಭಿತವಾದ ನಾಗಪುರಿಯಾದ ಭೋಗವತಿಯಂತೆ ಆ ಪಟ್ಟಣವು ಕಂಡುಬಂದಿತು. ಆ ಪುರವು ಸಭಾಭವನ, ಚೌಕ, ರಾಜಮಾರ್ಗ, ಕ್ರೀಡಾಗೃಹ, ತೋಟಗಳು ದೇವಾಲಯಗಳು, ಧರ್ಮಶಾಲೆ ಇವುಗಳಿಂದಲೂ, ಧ್ವಜಪತಾಕೆಗಳಿಂದಲೂ, ಶೋಭಿತವಾಗಿತ್ತು. ಪಟ್ಟಣದ ಹೊರಗಡೆ ಒಂದು ಉಪವನವಿದ್ದು ಅದು ವಿವಿಧ ವೃಕ್ಷಗಳಿಂದಲೂ, ಲತೆಗಳಿಂದಲೂ ಶೋಭಿಸುತ್ತಿತ್ತು. ಅದರಲ್ಲಿ ಸುಂದರ ಸರೋವರಗಳಿದ್ದುವು ಅವುಗಳ ದಡಗಳಲ್ಲಿ ವೃಕ್ಷಗಳ ಕೋಮಲ ಪಲ್ಲವಗಳು ಝರಿಗಳ ನೀರಿನ ತುಂತುರುಗಳಿಂದ ಯುಕ್ತವಾದ ಶೀತಲ ವಾಯುವಿನ ತರಂಗಗಳಿಂದ ಓಲಾಡುತ್ತಿರಲು ಸರೋವರದ ಸೌಂದರ್ಯವು ಇಮ್ಮಡಿಸುತ್ತಿದ್ದಿತು ಅಲ್ಲಿ ಅನೇಕ ಪ್ರಕಾರ ವನಜಂತುಗಳು ಪರಸ್ಪರ ವಿರೋಧವನ್ನು ತೊರೆದು ಮುನಿಗಳಂತೆ ಶಾಂತಭಾವವನ್ನು ಹೊಂದಿದ್ದವು. ಮೃಗ, ಜಿಂಕೆಗಳು, ಸಿಂಹಾದಿ ಹಿಂಸ್ರ ಪಶುಗಳ ಭಯವನ್ನು ತೊರೆದು ಇಚ್ಛಾಪೂರ್ವಕ ವಿಹರಿಸುತ್ತಿದ್ದವು. ಕೋಗಿಲೆಗಳ ಮಧುರಸ್ವರವು ಇತರ ಪಕ್ಷಿಗಳನ್ನು ಆ ವನದೇಶಕ್ಕೆ ಬರಲು ಆಹ್ವಾನಿಸುವಂತಿದ್ದಿತು.

ಆ ಉಪವನದಲ್ಲಿ ಒಬ್ಬ ಸುಂದರ ಸ್ತ್ರೀಯು ಹತ್ತು ಜನ ಸೇವಕರೊಡನೆ ಪುರಂಜನನ ಕಡೆಗೆ ಬರುತ್ತಿದ್ದಳು. ಅವಳ ಸೇವಕರಲ್ಲಿ ಪ್ರತಿಯೊಬ್ಬನೂ ಒಂದೊಂದು ನೂರು ಸ್ತ್ರೀಯರಿಗೆ ನಾಯಕನಾಗಿದ್ದನು ಆ ಪುರದ ದ್ವಾರಪಾಲಕನು ಐದು ತಲೆಯುಳ್ಳ ಒಬ್ಬ ಸರ್ಪನಾಗಿದ್ದನು

ಆತನು ಆಕೆಯ ಜೊತೆಯಲ್ಲಿಯೇ ಬರುತ್ತಿದ್ದನು. ಆಕೆಗೆ ಆಗ ತಾನೆ ಯೌವನವು ಪ್ರಾರಂಭ ವಾಗುತ್ತಿದ್ದಿತು. ಅವಳ ವಯಸ್ಸು 15—16 ವರ್ಷವಿರಬಹುದು. ಆಕೆಯ ಸೌಂದರ್ಯವನ್ನು ನೋಡಿದವನು ತಟ್ಟನೆ ಮೋಹಪರವಶನಾಗುತ್ತಿದ್ದನು. ಅವಳ ಮುಖವು ಪ್ರಸನ್ನವಾಗಿತ್ತು. ನಾಸಿಕವು ಸುಂದರವಾಗಿತ್ತು. ದಂತಪಂಕ್ತಿಗಳು ಸುಂದರವಾಗಿ ಸಮನಾಗಿದ್ದುವು. ಮುಖವು ಕಮಲಕ್ಕೆ ಸಮವಾಗಿ ಪ್ರಫುಲ್ಲಿತವಾಗಿತ್ತು. ಕಿವಿಗಳಲ್ಲಿ ಕುಂಡಲಗಳು ಶೋಭಿಸುತ್ತಿದ್ದವು. ಕಪೋಲಗಳು ಗುಂಡಾಗಿ ದ್ದುವು. ಅವಳು ಪೀತಾಂಬರವನ್ನುಟ್ಟಿದ್ದಳು. ನಿತಂಬವು ವಿಶಾಲ ವಾಗಿತ್ತು. ಅದರ ಮೇಲೆ ಭಂಗಾರದ ಉಡಿದಾರವಿತ್ತು. ಅವಳು ಮೆಲ್ಲ ಮೆಲ್ಲಗೆ ನಡೆದು ಬರುತ್ತಿರುವಾಗ ನೂಪುರ ಧ್ವನಿಯು ಕರ್ಣಗಳಿಗೆ ಆಹ್ಲಾದ ಮಾನವಾಗಿದ್ದಿತು. ಅವಳ ದೇಹದ ಸಮಸ್ತ ಅಂಗಗಳು ಸುಸ್ಪಷ್ಟವಾಗಿ ನಯನಮನೋಹರವಾಗಿ ಕಾಣುತ್ತಿದ್ದವು. ಮತ್ತ ಗಜಗಾಮಿನಿಯಾಗಿ ಬರುತ್ತಿರುವಾಗ ಅವಳ ಲಜ್ಜಾಯುಕ್ತ ಮಂದ ಹಾಸವು ಎಂತಹವರ ಮನಸ್ಸನ್ನಾದರೂ ಮೋಹ ಗೊಳಿಸುವಂತಿದ್ದಿತು. ಪು ರಂ ಜ ನ ನು ಅವಳ ಸೌಂದರ್ಯವನ್ನು ನೋಡುತ್ತಿದ್ದಂತೆಯೇ ಮನ್ಮಥನ ಬಾಣದಿಂದ ಹೊಡೆಯಲ್ಪಟ್ಟು ಅವಳ ಕಟಾಕ್ಷ ವೀಕ್ಷಣದಿಂದ ಮೋಹಿತನಾದನು. ಹೇಳಿದನು "ಎಲೈ ! ಸುಂದರಿ ! ನೀನಾರು ? ಯಾರ ಮಗಳು? ಎಲ್ಲಿಂದ ಈ ಪಟ್ಟಣಕ್ಕೆ ಬಂದೆ ? ನಿನ್ನ ಇಚ್ಛೆಯೇನು ? ನಿನ್ನೊಡನಿರುವ ಹತ್ತು ಜನ ಸೇವಕರಾರು? ಹನ್ನೊಂದ ನೆಯ ಈ ಮ ಹಾ ಬ ಲ ಶಾ ಲಿ ಯಾದ ಯೋಧ್ಧ(ಸರ್ಪ)ನಾರು? ನಿನ್ನೊ ಡನೆ ಎಷ್ಟುಜನ ಸ್ತ್ರೀಯರಿದ್ದಾರೆ? ಸಾಧ್ವಿ ನೀನೇಕೆ ಲಜ್ಜಿತಳಾಗಿರುವೆ? ನೀನಾರು ? ನೀನು ಭವಾನಿಯೇ? ನಿನ್ನ ಪತಿಯಾದ ಶಂಕರನನ್ನು ಹುಡುಕುತ್ತಿರುವೆಯಾ ? ನೀನು ಸರಸ್ವತಿಯೇ ?- ಬ್ರಹ್ಮನನ್ನು

ಹು ಡು ಕಿ ಕೊಂಡು ಬರುತ್ತಿರುವೆಯಾ? ಅಥವಾ ವಿಷ್ಣುವನ್ನು ಹುಡುಕುತ್ತಿರುವ ಲಕ್ಷ್ಮೀದೇವಿಯೇ? ಇರಲಾರದು. ನೀನು* ಭೂಮಿಯ ಮೇಲೆ ನಿಂತಿರುವೆ. ಸುಂದರಿ, ನಾನು ಉತ್ತಮ ಕುಲದಲ್ಲಿ ಹುಟ್ಟಿದ ವೀರ ಪುರುಷನು. ನೀನು ನನ್ನನ್ನೇ ಪತಿಯನ್ನಾಗಿ ವರಿಸುವುದು ಉಚಿತ, ನನ್ನೊಡನೆ ಈ ಪಟ್ಟಣದ ಶೋಭೆಯನ್ನು ಹೆಚ್ಚಿಸು! ಕಾಮದೇವನು ನನ್ನನ್ನು ಪೀಡಿಸುತ್ತಿದ್ದಾನೆ. ನನ್ನ ಮೇಲೆ ಅನುಗ್ರಹಮಾಡಿ ನನ್ನನ್ನು ಪತಿಯನ್ನಾಗಿ ವರಿಸು. ಸುಂದರ ಹುಬ್ಬುಗಳಿಂದ ಶೋಭಿತವಾದ ನಿನ್ನ ಸುಖ ಮಂಡಲವು ನನ್ನ ಚಿತ್ತವನ್ನು ಹರಣಮಾಡಿದೆ. ನನ್ನನ್ನು ವರಿಸು" ಎಂದು ಮುಂತಾಗಿ ಅಂಗಲಾಚಿದನು.

ಪುರಂಜನನು ಹೀಗೆ ಸಾಮಾನ್ಯ ಅಧೀರಪುರುಷನಂತೆ ಅವಳನ್ನು ಬೇಡುತ್ತಿರಲು ಅವಳು ಮೃದು ಮಧುರ ಮಂಜುಳ ಧ್ವನಿಯಿಂದ ಉತ್ತರ ಕೊಟ್ಟಳು.—

"ಎಲೈ ಪುರುಷ ಶ್ರೇಷ್ಠ, ನನ್ನನ್ನು ಉತ್ಪನ್ನ ಮಾಡಿದವರಾರು? ಉಳಿದ ಎಲ್ಲರನ್ನೂ ಉತ್ಪನ್ನ ಮಾಡಿದವರಾರು. ಎಂಬುದು ನನಗೆ ತಿಳಿಯದು. ನನಗೆ ನನ್ನ ಗೋತ್ರವಾಗಲಿ, ಪರರ ಗೋತ್ರವಾಗಲಿ ಗೊತ್ತಿಲ್ಲ. ಈ ಪಟ್ಟಣದಲ್ಲಿ ನಾನು ವಾಸಮಾಡುತ್ತೇನೆ ಎಂಬುದು ಮಾತ್ರ ಗೊತ್ತು. ಈ ಪಟ್ಟಣವನ್ನು ಕಟ್ಟಿದವರಾರು ಎಂಬುದು ನನಗೆ ತಿಳಿಯದು. ನನ್ನೊಡನಿರುವ ಪುರುಷರು ನನ್ನ ಸ್ನೇಹಿತರು. ಈ ಸ್ತ್ರೀಯರು ಸ್ನೇಹಿತೆಯರು. ಈ ನಾಗನು ನನ್ನ ಪಟ್ಟಣದ ರಕ್ಷಕನು. ನಾನು ಮಲಗಿದಾಗ ಈತನು ಎಚ್ಚರನಾಗಿದ್ದು ನನ್ನ ಪುರಿಯನ್ನು ರಕ್ಷಣೆಮಾಡುತ್ತಾನೆ. ಹೇ ಶತ್ರುದಮನ! ನೀನು ಇಲ್ಲಿಗೆ ಬಂದುದು

---

* ದೇವತೆಗಳು ಭೂಮಿಯನ್ನು ಮುಟ್ಟುವುದಿಲ್ಲ ಸ್ವಲ್ಪ ಎತ್ತರದಲ್ಲಿ ನಡೆಯುತ್ತಾರೆ.

ಬಹು ದೊಡ್ಡ ವಿಷಯ. ನಿನಗೆ ವಿಷಯಭೋಗ ಮಾಡಬೇಕೆಂಬ ಆಶೆಯು ಹೆಚ್ಚಾಗಿದೆ ಎಂದು ಗೊತ್ತಾಗುತ್ತದೆ.

ನಿನ್ನ ಆ ಇಚ್ಛೆಯನ್ನು ನನ್ನ ಈ ಸಖಿಯರ ಸಹಾಯದಿಂದ ಪೂರ್ಣಮಾಡುವೆನು. ಎಲೈ ಸ್ವಾಮಿಯೇ! ನೀನು ನನ್ನ ಈ ನವ ದ್ವಾರಯುಕ್ತಪುರದಲ್ಲಿ ನನ್ನೊಡನೆ ವಿಷಯಭೋಗಮಾಡುತ್ತಾ ಒಂದು ನೂರು ವರ್ಷಗಳು ಸುಖವನ್ನು ಅನುಭವಿಸು. ನಾನು ನಿನ್ನನ್ನು ಬಿಟ್ಟು ಮತ್ತಾರಲ್ಲಿ ರಮಣಮಾಡಲಿ? ಆತ್ಮ ನಿಷ್ಠೆಯಿಂದ ಇಂದ್ರಿಯ ಗಳನ್ನು ದಮನ ಮಾಡಿರುವ ಇತರ ಪುರುಷರು ರತಿಯ ತತ್ವವನ್ನೇನು ಬಲ್ಲರು? ಅವರು ಮೂಢರು. ಏಕೆಂದರೆ, ಶಾಸ್ತ್ರದಲ್ಲಿ ಯಾವ ಸುಖವನ್ನು ನಿಷೇಧಮಾಡಿಲ್ಲವೋ ಅದನ್ನು ಸಹಾ ಅವರು ತ್ಯಾಗ ಮಾಡುತ್ತಾರೆ. ಅವರಿಗೆ ಪರಲೋಕದ ಚಿಂತೆಯೂ ಇಲ್ಲ ನಾಳೆಗೆ ಏನು ಮಾಡಬೇಕು ಎಂಬ ಇಹಲೋಕದ ಚಿಂತೆಯಂತೂ ಇಲ್ಲವೇಇಲ್ಲ. ಆದುದರಿಂದ ಅವರು ಪಶುಸಮಾನರು. ಗೃಹಸ್ಥಾಶ್ರಮಕ್ಕೆ ಸಮಾನವಾದ ಸುಖವು ಮತ್ತಾವ ಆಶ್ರಮದಲ್ಲಿಯೂ ಇಲ್ಲ. ಈ ಆಶ್ರಮದಲ್ಲಿ ಧರ್ಮ. ಅರ್ಥ, ಕಾಮ, ಪುತ್ರ, ಸುಖ, ಮೋಕ್ಷ, ಯಶಸ್ಸು, ಮತ್ತು ಶೋಕರಹಿತವಾದ ಪವಿತ್ರಲೋಕ ಇವುಗಳೆಲ್ಲವೂ ಸಿಕ್ಕುತ್ತವೆ. ಸನ್ಯಾಸಿಗಳಾದವರಿಗೆ ಇವುಗಳ ಹೆಸರು ಸಹಾ ತಿಳಿಯದು. ಗೃಹಸ್ಥಾಶ್ರಮದಲ್ಲಿ ದೇವ, ಋಷಿ, ಪಿತೃ, ಮನುಷ್ಯ ಭೂತಗಣಗಳ ಕಲ್ಯಾಣವೂ ಮತ್ತು ನಮ್ಮ ಸ್ವಂತ ಕಲ್ಯಾಣವೂ ಸಿದ್ಧಿಸುವುದೆಂಬುದು ಪಂಡಿತರ ಅಭಿಪ್ರಾಯ. ಹೇ ಮಹಾಬಾಹೋ ತಾನಾಗಿಯೇ ಬಂದಿರುವ, ನಿಮ್ಮಂತಹ ಉದಾರ ಸುಂದರ ಪುರುಷನನ್ನು ನನ್ನಂತಹ ಸ್ತ್ರೀಯು ವರಿಸದಿರುವಳೆ? ನಿಮ್ಮ ನೀಳವಾದ, ದುಂಡಾದ, ಮೊಳಕಾಲುಗಳನ್ನು ನಿಲುಕುವ ಸರ್ಪ ದೇಹಕ್ಕೆ ಸಮಾನವಾದ ಭುಜಗಳ ಆಶ್ರಯವನ್ನು ಪಡೆಯಲು ಬಯಸದಿರುವ ಸ್ತ್ರೀಯು ಇರುವಳೆ? ನೀವಂತೂ

ಸಾಧಾರಣ ಪುರುಷರೇ? ನಿಮ್ಮ ಕೃಪಾಪೂರ್ಣ ಮಂದಹಾಸದಿಂದೊಡ ಗೂಡಿದ ಮನೋಹರ ಕಟಾಕ್ಷ ವೀಕ್ಷಣದಿಂದ ದೀನಜನರ ಮನೋ ವ್ಯಥೆಯನ್ನು ದೂರಮಾಡುತ್ತಿರುವಿರಿ."

ಹೀಗೆಂದು ಪುರಂಜನನೂ ಪುರಂಜನಿಯೂ ಪರಸ್ಪರ ಪ್ರೇಮ ಪಾಶದಿಂದ ಬದ್ಧರಾಗಿ ಪಟ್ಟಣವನ್ನು ಪ್ರವೇಶ ಮಾಡಿದರು. ಆನಂದ ಪೂರ್ವಕವಾಗಿ ಒಂದುನೂರು ವರ್ಷಗಳನ್ನು ಸುಖವಾಗಿಕಳೆದರು. ಸಮಯ ಬಂದಾಗಲೆಲ್ಲಾ ಗಾಯಕಿಯರು ಪುರಂಜನನ ಯಶಸ್ಸನ್ನೇ ಹಾಡಿಹೊಗಳು ತ್ತಿದ್ದರು. ಪುರಂಜನನು ಸ್ತ್ರೀಯರೊಡನೆ ಕ್ರೀಡಿಸುತ್ತಿದ್ದನು. ಗ್ರೀಷ್ಮ ಋತುವಿನಲ್ಲಿ ತಿಳಿನೀರಿನ ಸರೋವರದಲ್ಲಿ ಸ್ತ್ರೀಯರೊಡನೆ ಜಲಕ್ರೀಡೆ ಯಾಡುತ್ತಿದ್ದನು.

ಪುರಂಜನನು ಆ ಸ್ತ್ರೀಯೊಡನೆ ಸುಖಪಡುತ್ತಿದ್ದ ಪಟ್ಟಣದ ಮೇಲುಭಾಗದಲ್ಲಿ ಏಳುಬಾಗಿಲುಗಳಿದ್ದುವು. ಕೆಳಭಾಗದಲ್ಲಿ ಎರಡುಬಾಗಿಲು ಗಳಿದ್ದುವು ಆ ಪಟ್ಟಣಕ್ಕೆ ಸ್ವಾಮಿಯಾದವನು ಬೇರೆ ಬೇರೆ ಸಂದರ್ಭ ಗಳಲ್ಲಿ ಸಂಚಾರ ಮಾಡಿ ಬೇರೆಬೇರೆ ವಿಷಯಗಳಲ್ಲಿ ವ್ಯವಹಾರ ಮಾಡು ವುದಕ್ಕೆ ಬೇರೆ ಬೇರೆ ದ್ವಾರಗಳಿದ್ದವು. ಪಂಚದ್ವಾರಗಳು ಪೂರ್ವದಲ್ಲಿಯೂ ಒಂದು ದಕ್ಷಿಣದಲ್ಲಿಯೂ, ಒಂದು ಉತ್ತರದಲ್ಲಿಯೂ ಉಳಿದೆರಡು ಪಶ್ಚಿಮ ದಲ್ಲಿಯೂ ಇದ್ದವು. ಈ ದ್ವಾರಗಳ ಹೆಸರುಗಳನ್ನು ಹೇಳುತ್ತೇನೆ ಕೇಳು. ಪೂರ್ವದಿಕ್ಕಿನಲ್ಲಿ ಖದ್ಯೋತಮತ್ತುಆವಿರ್ಮುಖಿ ಎಂಬ ಎರಡುಬಾಗಿಲುಗಳು ಒಟ್ಟಿಗೆಮಾಡಲ್ಪಟ್ಟಿದ್ದುವು. ಪುರಂಜನನು ದ್ಯುಮಾನ್ ಎಂಬ ಸ್ನೇಹಿತನ ಸಂಗಡ ಈ ಎರಡು ದ್ವಾರಗಳ ಮೂಲಕ ವಿಭ್ರಾಜಿತ ಎಂಬ ಪ್ರಾಂತಕ್ಕೆ ಹೋಗುತ್ತಿದ್ದನು. ಪೂರ್ವದಿಕ್ಕಿನಲ್ಲಿ ನಲಿನೀ ಮತ್ತು ನಾಲಿನೀ ಎಂಬ ಮತ್ತೆರಡು ದ್ವಾರಗಳು ಜೊತೆ ಜೊತೆಯಾಗಿ ಮಾಡಲ್ಪಟ್ಟಿದ್ದವು

ಪುರಂಜನನು ಅವಧೂತ ಎಂಬ ಸಖನೊಡನೆ ಸೌರಭ ಎಂಬ ಪ್ರಾಂತ್ಯಕ್ಕೆ ಹೋಗುತ್ತಿದ್ದನು. ಪೂರ್ವದಿಕ್ಕಿನಲ್ಲಿಯೇ ಮುಖ್ಯಾ ಎಂಬ ಮತ್ತೊಂದ್ದ ದ್ವಾರವಿದ್ದಿತು. ಪುರಂಜನನು ಆ ದ್ವಾರದಿಂದ ರಸಜ್ಞ ಮತ್ತು ವಿಪಣ ಎಂಬ ಸ್ನೇಹಿತರುಗಳೊಡನೆ ಆಪಣ ಮತ್ತು ಬಹೂದನ ಎಂಬ ದೇಶಗಳಿಗೆ ಹೋಗುತ್ತಿದ್ದನು. ದಕ್ಷಿಣ ದ್ವಾರದ ಹೆಸರು ಪಿತೃಹೂ ಎಂದು. ಪಿತೃಧರ ಎಂಬ ಮಿತ್ರನೊಡಗೂಡಿ ದಕ್ಷಿಣ ಪಾಂಚಾಲ ದೇಶಕ್ಕೆ ಹೋಗುತ್ತಿದ್ದನು. ಉತ್ತರದ್ವಾರದ ಹೆಸರು ದೇವಹೂ ಎಂದು. ಅದರ ಮೂಲಕ ಶ್ರುತಿಧರ ಸಖನೊಡನೆ ಉತ್ತರ ಪಾಂಚಾಲ ದೇಶಕ್ಕೆ ಹೋಗುತ್ತಿದ್ದನು- ಪಶ್ಚಿಮದ್ವಾರ ಒಂದರ ಹೆಸರು ಆಸುರೀ ಎಂದು, ದುರ್ಮದನೆಂಬ ಸಖನೊಡನೆ ಗ್ರಾಮ ಕ ಎಂಬ ದೇಶಕ್ಕೆ ಆಸುರೀ ದ್ವಾರದ ಮೂಲಕ ಹೋಗುತ್ತಿದ್ದನು. ಪಶ್ಚಿಮದ ಎರಡನೆಯ ಬಾಗಿಲಿನ ಹೆಸರು ನಿರ್‌ಋತಿ ಎಂದು. ಪುರಂಜನನು ಲುಬ್ಧಕ ಎಂಬ ಮಿತ್ರನೊಡನೆ ಗ್ರಾಮಕ ದೇಶಕ್ಕೆ ಹೋಗುತ್ತಿದ್ದನು. ಈ ಪಟ್ಟಣದಲ್ಲಿ ನಿರ್ವಾಕ ಮತ್ತು ಪೇಶಸ್ಕೃತಿ ಎಂಬ ಎರಡು ಗುಪ್ತ*ದ್ವಾರಗಳು ಇದ್ದವು. ಇಂದ್ರಿಯಧಾರಿಗಳ ಸ್ವಾಮಿಯಾದ ಪುರಂಜನನು, ಅವುಗಳ ಮೂಲಕ ಗಮನ ಕಾರ್ಯಗಳನ್ನು ಮಾಡುತ್ತಿದ್ದನು. ಅವನು ಅಂತಃಪುರ ದೊಳಕ್ಕೆ ಹೋದಾಗ ವಿಷೂಚೀನ ಎಂಬ ಸಖನೊಡನೆ ಪತ್ನೀ ಪುತ್ರರ ನಿಮಿತ್ತವಾಗಿ ಒಮ್ಮೊಮ್ಮೆ ಮೋಹವನ್ನು ಹೊಂದುತ್ತಿದ್ದನು. ಮತ್ತೊಮ್ಮೆ ಸಮಾಧಾನ ಹೊಂದುತ್ತಿದ್ದನು. ಒಮ್ಮೊಮ್ಮೆ ಸಂತೋಷ ವನ್ನೂ ಹೊಂದುತ್ತಿದ್ದನು.

---

* ಕಳ್ಳಗಂಡಿಗಳು, ಅಪಾಯ ಸಮಯದಲ್ಲಿ ಹೊರಬೀಳುವ ಗುಪ್ತ ದ್ವಾರಗಳು

ಹೀಗೆ ಕಾಮಿಯಾದ ಪುರಂಜನನು ಮೂರ್ಖರಂತೆ ಕರ್ಮ**ಗಳಲ್ಲಿ** ಆಸಕ್ತನಾಗಿ ವಿಷಯಗಳಿಂದ ಮೋಸಹೋದನು. ಅವನ ರಾಣಿಯು ಏನು ಮಾಡಿದರೆ ಅದನ್ನೇ ಮಾಡುತ್ತಿದ್ದನು. ಅವಳು ಮದ್ಯಪಾನಮಾಡಿ ಮದೋನ್ಮತ್ತಳಾದರೆ ಇವನು ಅವಳೊಡನೆಯೇ ಮದ್ಯಪಾನಮಾಡಿ ಮದೋನ್ಮತ್ತನಾಗುತ್ತಿದ್ದನು. ಅವಳು ಊಟ ಮಾಡಿದರೆ ಇವನೂ ಭೋಜನ ಮಾಡುವುದು, ಅವಳು ಹಾಡಿದರೆ ಇವನೂ ಹಾಡುವುದು, ಅವಳು ಅತ್ತರೆ ಇವನೂ ಅಳುವುದು, ಅವಳು ನಕ್ಕರೆ ಇವನೂ ನಗುವುದು, ಅವಳು ಮಾತನಾಡಿದರೆ ಇವನೂ ಮಾತನಾಡುವುದು, ಅವಳು ಓಡಿದರೆ ಇವನೂ ಓಡುವುದು, ಅವಳು ಕುಳಿತರೆ ಇವನೂ ಕುಳಿತುಕೊಳ್ಳುವುದು, ಅವಳು ಮಲಗಿದರೆ ಇವನೂ ಮಲಗುವುದು, ಅವಳು ಎದ್ದು ಕುಳಿತರೆ ಇವನೂ ಎದ್ದು ಕೂರುವುದು, ಅವಳು ಕೇಳಲಾರಂಭಿಸುತ್ತಲೇ ಇವನೂ ಕೇಳಲಾರಂಭಿಸುವುದು, ಅವಳು ನೋಡಲಾರಂಭಿಸುತ್ತಲೆ ಇವನೂ ನೋಡುವುದು, ಅವಳು ಮೂಗಿನಿಂದ ಮೂಸಿನೋಡಿದರೆ ಇವನೂ ಮೂಸಿನೋಡುವುದು, ಅವಳು ಮುಟ್ಟಿದ ಪದಾರ್ಥವನ್ನು ಇವನೂ ಮುಟ್ಟುವುದು, ಅವಳು ದುಃಖಿಸಿದರೆ ಇವನೂ ದುಃಖಮಾಡುವುದು, ಅವಳು ಸಮಾಧಾನವಾಗಿದ್ದರೆ ಇವನೂ ಸಮಾಧಾನವಾಗಿರುವುದು, ಅವಳಿಗೆ ತೃಪ್ತಿಯಾದರೆ ಇವನಿಗೂ ತೃಪ್ತಿಯಾಗುವುದು—ಹೀಗೆ ನಡೆಯುತ್ತಿತ್ತು.

ರಾಣಿಯು ಈ ರೀತಿ ಅವನನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಳು. ಅವನಿಗೆ ತನ್ನ ಸ್ವಭಾವವೇ ಮರೆತು ಅವಳ ಕೈ ಬೊಂಬೆಯಂತೆ ನಡೆಯಲಾರಂಭಿಸಿದನು.

ರಾಜಾ ಪುರಂಜನನು ಒಂದಾವೃತ್ತಿ ಒಲು ದೊಡ್ಡ ಧನುಸ್ಸನ್ನು ತೆಗೆದುಕೊಂಡು ವೇಗವಾಗಿ ಹೋಗುವ ರಥವೊಂದನ್ನು ಹತ್ತಿ ಬೇಟೆಯಾಡಲು ಹೊರಟನು. ಆ ರಥಕ್ಕೆ ಐದು ಕುದುರೆಗಳು ಕಟ್ಟಲ್ಪಟ್ಟಿದ್ದುವು. ಎರಡು ಮೂಕಿಗಳೂ ಎರಡು ಚಕ್ರಗಳೂ ಒಂದು ಜೋಡಣೆಯೂ ಮೂರು ಧ್ವಜಗಳೂ ಐದು ಹಗ್ಗಗಳೂ ಒಂದೇ ಕಡಿವಾಣವೂ ಒಬ್ಬನೇ ಸಾರಥಿಯೂ ಒಬ್ಬ ರಥಿಯು ಕುಳಿತುಕೊಳ್ಳುವಷ್ಟೇ ಸ್ಥಳವು ಇದ್ದುವು. ಎರಡು ನೊಗಗಳನ್ನು ಕಟ್ಟುವ ಜಾಗವೂ, ಐದು ಚಾಟಿಗಳು, ಏಳು ಚರ್ಮಾದಿಗಳ ಹೊದ್ದಿಕೆಗಳು ಇದ್ದು ಆ ರಥವು ಐದು ಬೇರೆ ಬೇರೆ ರಸ್ತೆಗಳಲ್ಲಿ ಹೋಗಬಲ್ಲುದಾಗಿದ್ದಿತು. ಅದರ ಸಾಮಾನುಗಳೆಲ್ಲ ಸ್ವರ್ಣಮಯವಾಗಿದ್ದುವು.

ಪುರಂಜನನು ಸುವರ್ಣಮಯ ಕವಚವನ್ನು ತೊಟ್ಟುಕೊಂಡು ಅಕ್ಷಯ್ಯ ತೂಣೀರವನ್ನು ಬೆನ್ನಿಗೆ ಕಟ್ಟಿಕೊಂಡು ಏಕಾದಶ (ಹನ್ನೊಂದನೆಯ ಮನಸ್ಸು) ಸೇನಾಪತಿಯನ್ನು ಜೊತೆಯಲ್ಲಿ ಕರೆದುಕೊಂಡು ಪಂಚಪ್ರಸ್ಥ ಎಂಬ ವನಕ್ಕೆ ಬೇಟೆಗಾಗಿ ಹೊರಟನು. ಅಹಂಕಾರಿಯಾದ ಪುರಂಜನನು ಧನುಸ್ಸಿಗೆ ಬಾಣವನ್ನು ಏರಿಸಿ ಕಾಡಿನಲ್ಲಿ ಬೇಟೆಯನ್ನು ಹುಡುಕಲಾರಂಭಿಸಿದನು. ತ್ಯಾಗಮಾಡಲಾಗದ ತನ್ನ ಪತ್ನಿಯನ್ನು ಬಿಟ್ಟು ಬೇಟೆಗೆ ಹೊರಟಿದ್ದನು. ರಾಕ್ಷಸೀ ಪ್ರವೃತ್ತಿಯನ್ನು ಧಾರಣೆಮಾಡಿ ನಿರ್ದಯನಾಗಿ ವನ್ಯಜಂತುಗಳನ್ನು ಕೊಲ್ಲಲಾರಂಭಿಸಿದನು. ಶಾಸ್ತ್ರದಲ್ಲಿ ಬೇಟೆಯಾಡುವುದಕ್ಕೂ ಒಂದು ನಿಯಮವಿದೆ. ಪವಿತ್ರಸನ್ನಿವೇಶಗಳಲ್ಲಿ ಶ್ರಾದ್ಧಾದಿಗಳ ಸಂದರ್ಭದಲ್ಲಿ ಆವಶ್ಯಕತೆಗೆ ತಕ್ಕಂತೆ ಪವಿತ್ರ ಪಶುಗಳನ್ನು ಬೇಟೆಯಾಡಬಹುದು. ಮಾಂಸಭೋಜನದ ಆಶೆಯಿಂದ ಮಾಡಕೂಡದು. ಶಾಸ್ತ್ರನಿಯಮವನ್ನು ಅನುಸರಿಸಿ

ಪಶುವಧೆ ಮಾಡುವವನು ಪ್ರಾಣಿಹಿಂಸೆಯ ಪಾಪಕ್ಕೆ ಗುರಿಯಾಗುವುದಿಲ್ಲ. ಅಹಂಕಾರದಿಂದ ಈ ನಿಯಮವನ್ನು ಉಲ್ಲಂಘನೆ ಮಾಡುವವನು ಪ್ರಾಣಿಹಿಂಸೆಗೆ ಗುರಿಯಾಗುತ್ತಾನೆ. ಮತ್ತು ತಮೋಗುಣಪ್ರವಾಹದಲ್ಲಿ ಸಿಕ್ಕಿ ಬುದ್ಧಿಭ್ರಷ್ಟನಾಗಿ ಅಧೋಗತಿಯನ್ನು ಹೊಂದುತ್ತಾನೆ.

ಪುರಂಜನನ ವಿಚಿತ್ರರೆಕ್ಕೆಗಳುಳ್ಳ ಬಾಣಗಳಿಂದ ಪವಿತ್ರ ಅಪವಿತ್ರ ಎಂಬ ಲೆಕ್ಕವಿಲ್ಲದೆ ಅನೇಕ ಪ್ರಾಣಿಗಳು ಕೊಲ್ಲಲ್ಪಟ್ಟವು. ಅನೇಕ ಪ್ರಾಣಿಗಳು ಗಾಯಗೊಂಡವು. ಮಹಾತ್ಮರು ನೋಡಲಾರದಂತಹ ರೀತಿಯಲ್ಲಿ ನಿರ್ದಯವಾಗಿ ಪ್ರಾಣಿವಧೆಯಾಗಿ ಹೋಯಿತು. ಹೀಗೆ ಬೇಟೆಯಾಡುತ್ತಾ ಆಯಾಸಹೊಂದಿ ಪಟ್ಟಣಕ್ಕೆ ಹಿಂದಿರುಗಿದನು. ಸ್ನಾನಮಾಡಿ ಭೋಜನ ಮುಗಿಸಿಕೊಂಡು ಅಂತಃಪುರಕ್ಕೆ ಹೊರಟನು. ಅವನನ್ನು ಸ್ವಾಗತಿಸಲು ಪತ್ನಿಯು ಎದುರಿಗೆ ಬರಲಿಲ್ಲ. ಮನಸ್ಸಿಗೆ ಗಾಬರಿಯಾಯಿತು. ವಿಚಾರಮಾಡಲಾಗಿ ಅವಳನ್ನು ಬಿಟ್ಟು ತಾನೊಬ್ಬನೇ ಬೇಟೆಗೆ ಹೋದುದಕ್ಕಾಗಿ ಅವಳು ಕೋಪಗೊಂಡಿರುವಳೆಂದೂ ಕ್ರೋಧಾಗಾರದಲ್ಲಿ ನೆಲದ ಮೇಲೆ ಬಟ್ಟೆಯನ್ನು ಹಾಕಿ ಮಾತನಾಡದೇ ಮಲಗಿರುವಳೆಂದೂ ತಿಳಿದುಬಂದಿತು ಅವಳ ಕ್ರೋಧದಿಂದ ಭಯಭೀತನಾಗಿ ಅವಳ ಸಮೀಪಕ್ಕೆ ಹೋಗಿ ವಿವಿಧವಾಗಿ ಅಂಗಲಾಚಿ ಬೇಡಿಕೊಂಡು ಅವಳನ್ನು ಸಮಾಧಾನಪಡಿಸಿದನು ಅವಳೂ ಸಹ ಹೆಚ್ಚು ಕ್ರೋಧಮಾಡದೇ ಅಷ್ಟರಲ್ಲಿಯೇ ಸಮಾಧಾನ ಹೊಂದಿ ಇವನಲ್ಲಿ ಪ್ರೇಮವನ್ನು ತೋರಿ ಆಲಿಂಗಿಸಿ ಮುದ್ದಿಟ್ಟು ಅವನನ್ನು ತೃಪ್ತಿಪಡಿಸಿದಳು.

ಹೀಗೆ ಪತ್ನಿಯ ಕೈಗೊಂಬೆಯಾಗಿ ಮಾಯಾಮೋಹಿತನಾಗಿ

ಪುರಂಜನನು ಪುರಂಜನಿಯೊಡನೆ ಸುಖಿಸುತ್ತಿರಲು ವರ್ಷಗಳು ಕ್ಷಣ ದಂತೆ ಉರುಳಿಹೋಗುತ್ತಿದ್ದವು. ಅವನ ಯೌವನದಲ್ಲಿ ಅರ್ಧ ಭಾಗ ಅವನಿಗೆ ತಿಳಿಯದಂತೆಯೇ ಕಳೆದುಹೋಯಿತು. ಅವನು ಅವಳಲ್ಲಿ ಹನ್ನೆರಡು ನೂರು ಪುತ್ರರನ್ನು ಪಡೆದನು. ಅವರ ಜೊತೆಗೆ ಒಂದುನೂರಹತ್ತು ಕನ್ಯೆಯರನ್ನೂ ಆ ಪುರಂಜನಿಯಲ್ಲಿ ಪಡೆ ದನು. ಆ ಕನ್ಯೆಯರು ಸುಂದರಿಯರಾಗಿ ಸದ್ಗುಣವಂತೆಯರಾಗಿ ಮಾತಾಪಿತೃಗಳ ಕೀರ್ತಿಯನ್ನು ವೃದ್ಧಿಮಾಡುವಂತಹವರಾದರು. ಪಾಂಚಾಲದೇಶದ ರಾಜನಾದ ಆ ಪುರಂಜನನು ತನ್ನ ಪುತ್ರರಿಗೆ ತಕ್ಕ ಕನ್ಯೆಯರನ್ನೂ ಕನ್ಯೆಯರಿಗೆ ತಕ್ಕ ವರಗಳನ್ನು ಹುಡುಕಿ ವಿವಾಹ ಮಾಡಿಸಿದನು. ಅವನ ಆ ಹನ್ನೆರಡುನೂರುಜನ ಪುತ್ರರಿಗೆ ಪ್ರತಿಯೊಬ್ಬನಿಗೂ ನೂರು ನೂರು ಮಕ್ಕಳಾದರು. ಹೀಗೆ ಪುರಂ ಜನನ ವಂಶವು ಪಾಂಚಾಲದೇಶವನ್ನೆಲ್ಲ ಆವರಿಸಿಬಿಟ್ಟಿತು. ಆ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳುಗಳ ಸಂತಾನದಿಂದ ಅವನ ಮೋಹವು ಇಮ್ಮಡಿಸಿತು. ಮಮತ್ವವು ವೃದ್ಧಿಯಾಯಿತು. ವಿಷಮ ವಿಷಯ ಪಾಶದಲ್ಲಿ ಅವನು ಚೆನ್ನಾಗಿ ಬಂಧಿಸಲ್ಪಟ್ಟನು. ಎಲೈ ರಾಜನೆ! ಕೊನೆಗೆ ಅವನೂ ನಿನ್ನಂತೆಯೇ ಅನೇಕ ಹಿಂಸಾರೂಪ ಯಜ್ಞಗಳನ್ನುಮಾಡಿದನು. ತುಚ್ಛ ಕಾಮನೆಗಳಿಗೆ ವಶನಾಗಿ ದೇವ ಪಿತೃ ಭೂತಗಣಗಳನ್ನು ಆರಾಧಿಸಿದನು. ಹೀಗೆ ಕುಟುಂಬದ ಪಾಲನೆ ಪೋಷಣೆಯಲ್ಲಿ ನಿರತನಾಗಿ ಮೋಹಿತನಾದ ಆತನು ವಿವಿಧ ಕರ್ಮಗಳನ್ನು ಮಾಡುತ್ತಾ ತನಗೆ ಅರಿವಿಲ್ಲದೆಯೇ ಅನೇಕ ಕರ್ಮ ಬಂಧನಗಳನ್ನು ಪಟ್ಟಿಕೊಂಡು ವ್ಯಥೆಗೊಳಗಾದನು. ಕೊನೆಗೆ ವಿಷಯೀ ಪುರುಷನಿಗೆ ಅಪ್ರಿಯನಾದ ಕರಾಳಕಾಲನ ಕೈಗೆ ಸಿಕ್ಕಬೇಕಾಯಿತು.

ಚಂಡವೇಗನೆಂಬ ಗಂಧರ್ವರಾಜನಿದ್ದನು. ಅವನೊಡನೆ ಮುನ್ನೂರ ಅರವತ್ತುಜನ ಪ್ರಬಲರಾದ ಸೈನಿಕರಿದ್ದರು. ಅವರಷ್ಟೆ ಸಂಖ್ಯೆಯುಳ್ಳ [360] ಬಿಳಿ ಮತ್ತು ಕಪ್ಪುಬಣ್ಣಗಳ ಪತ್ನಿಯರೊಡಗೂಡಿದ ಸೈನ್ಯದಿಂದ ಚಂಡವೇಗನು ಪುರಂಜನನ ಪಟ್ಟಣಕ್ಕೆ ಮುತ್ತಿಗೆ ಹಾಕಿ ಅದನ್ನು ಹಾಳುಮಾಡತೊಡಗಿದನು. ಆಗ ಅದನ್ನು ರಕ್ಷಣೆಮಾಡುತ್ತಿದ್ದ ಐದು ಹೆಡೆಯ ಸರ್ಪವು ಅವರೊಡನೆ ಯುದ್ಧ ಮಾಡಲಾರಂಭಿಸಿತು. ಮುನ್ನೂರ ಅರವತ್ತು ಜನರೊಡನೆ ಒಬ್ಬನ ಸಾಹಸವು ಎಷ್ಟು ದಿನ ನಡೆದೀತು ? ಕೈಲಾದಷ್ಟು ಹೋರಾಡಿ ಕೊನೆಗೆ ಮುದುರಿಕೊಂಡಿತು. ಕಾಲನ ಪುತ್ರಿಯಾದ ದುರ್ಭಗಾ ಎಂಬ ಕನ್ಯೆಯು ಎಲ್ಲಿಡೆಯೂ ವರನನ್ನು ಹುಡುಕಿ ನಾಕಾಗಿ ಬ್ರಹ್ಮಲೋಕದಿಂದ ಭೂಮಿಗೆ ಇಳಿದು ಬರುತ್ತಿದ್ದಳು. ನಾನು ಬಾಲಬ್ರಹ್ಮಚಾರಿಯಾಗಿದ್ದುದರಿಂದ ತನ್ನನ್ನು ಮದುವೆಯಾಗಬೇಕೆಂದು ನನ್ನನ್ನು ವರಿಸಲು ಉಪಾಯ ಮಾಡಿದಳು. ನಾನು ಒಪ್ಪದಿರಲು " ನೀನು ನಿಂತಲ್ಲಿ ನಿಲ್ಲದೆ ಲೋಕವನ್ನೆಲ್ಲ ಅಲೆಯುತ್ತಿರು. "ಎಂದು ನನಗೆ ಶಾಪ ಕೊಟ್ಟಳು. ನನ್ನಿಂದ ಅವಳ ಕಾಮನೆಯು ಪೂರ್ತಿಯಾಗದಿರಲು ನನ್ನಿಂದಲೇ ತೋರಿಸಲ್ಪಟ್ಟ ಭಯ ಎಂಬ ಯವನ ರಾಜನ ಸಮೀಪಕ್ಕೆ ಹೋದಳು. ಅವನು ಇವಳನ್ನು ವರಿಸಲು ಒಪ್ಪದೆ ಈಶ್ವರ ಸೂಚನೆಯಂತೆ ಅವಳಿಗೆ ಹೇಳಿದನು. ' ನೀನು ಅಯೋಗ್ಯಳಾಗಿ ಅಭಾಗ್ಯಳಾಗಿರುವೆ. ಆದುದರಿಂದ ನಿನಗೆ ಒಬ್ಬ ವರನೂ ಸಿಕ್ಕಲಾರನು. ನಿನ್ನನ್ನು ಸಂತೋಷದಿಂದ ಯಾವನೂ ವರಿಸಲಾರನು. ನಿನ್ನನ್ನು ಈ ದಿನದಿಂದ ನನ್ನ ತಂಗಿ ಯೆಂದು ಭಾವಿಸಿದ್ದೇನೆ. ಆದುದರಿಂದ ನಾನು ಧ್ಯಾನದಿಂದ ನಿನಗೆ

ಪತಿಯನ್ನು ನಿರ್ಣಯಿಸಿದ್ದೇನೆ. ಕರ್ಮ ನಿರ್ಮಿತ ದೇಹವುಳ್ಳ ಎಲ್ಲ ಪ್ರಾಣಿಗಳನ್ನೂ ನೀನೇ ಉಪಭೋಗಿಸು. ನಿನ್ನನ್ನು ಯಾರೂ ನೋಡಲಾರರು. ಆದರೆ ಎಲ್ಲರೂ ನಿನಗೆ ಸ್ವಾಮಿಯಾಗುವರು. ಪ್ರಜ್ವರನೆಂಬ ನನ್ನ ತಮ್ಮನನ್ನೂ ನನ್ನ ಸೈನ್ಯವನ್ನೆಲ್ಲವನ್ನೂ ಜೊತೆಯಲ್ಲಿ ತೆಗೆದುಕೊಂಡು ನೀನು ಜಗತ್ತಿನಲ್ಲಿ ಸಂಚರಿಸುತ್ತೀರು. ನೀವಿಬ್ಬರೂ ಇಂದಿನಿಂದ ನನ್ನ ಸೇನೆಗೆ ಅಧಿಪತಿಗಳಾಗಿ ಪೃಥ್ವೀ ಮಂಡಲವನ್ನು ಸಂಚರಿಸುತ್ತೀರಿ. '' ಎಂದು ಅಪ್ಪಣೆಕೊಟ್ಟನು

ಈ ಕಾಲನ ಸೈನ್ಯವು ಮನುಷ್ಯಲೋಕದಲ್ಲಿ ಸಮಸ್ತ ಭೋಗಗಳಿಂದಲೂ ಸಜ್ಜಿತವಾಗಿದ್ದ ಪುರಂಜನನ ಪುರಿಯನ್ನು ಮುತ್ತಿ ಎಲ್ಲವನ್ನು ಧ್ವಂಸಮಾಡಲಾರಂಭಿಸಿತು. ಕಾಲ ಕನ್ಯೆಯು ಬಲವಂತದಿಂದ ಪುರಂಜನನನ್ನು ಭೋಗಿಸಲಾರಂಭಿಸಿದಳು ಅವನ ಶಕ್ತಿಯೆಲ್ಲ ಹೋಗಿ ಸಾರಹೀನನಾದನು. ಕಾಲಕನ್ಯೆಯು ಪುರಂಜನನನ್ನು ಹಿಡಿಯುತ್ತಲೇ ಅವಳ ಸೈನ್ಯವು ನಾಲ್ಕು ದಿಕ್ಕಿನಿಂದಲೂ ಒಳಹೊಕ್ಕು ಆ ಪಟ್ಟಣನ್ನು ಹಾಳುಮಾಡಲಾರಂಭಿಸಿತು. ಕಾಲಕನ್ಯೆಯ ಭೋಗದಿಂದ ದುರ್ಬಲನಾಗಿ ಐಶ್ವರ್ಯವನ್ನು ಕಳೆದು ಕೊಂಡು ಬುದ್ಧಿಯು ಭ್ರಷ್ಟವಾಗಿ ದೀನನಾದನು. ಶಕ್ತಿಹೀನನಾದ ತನ್ನನ್ನು ಸ್ತ್ರೀ ಪುತ್ರಾದಿಗಳೆಲ್ಲ ಕೈಬಿಟ್ಟರು. ಇವನನ್ನು ಆದರಿಸುವುದನ್ನು ಕಡಿಮೆ ಮಾಡಿದರು. ಇವನಿಗೆ ಮಾತ್ರ ಅವರ ಮೇಲಿನ ಮೋಹವು ಕಡಿಮೆಯಾಗಲಿಲ್ಲ. ಅವರಿಗಾಗಿ ಬಹಳ ಪರಿತಪಿಸಲಾರಂಭಿಸಿದನು. ಅವನ ಮನಸ್ಸಿನಿಂದ ವಿಷಯಭೋಗೇಚ್ಛೆಯು ಹೊರ ಹೊರಡಲಿಲ್ಲ. ಅವನಿಗೆ ಇಷ್ಟವಿಲ್ಲದಿದ್ದರೂ ಆ ಪಟ್ಟಣವನ್ನು ಅವನು

ಬಿಟ್ಟು ಹೋಗುವ ಸಂದರ್ಭವು ಒದಗಿತು. ಭಯನಾಮಕ ಯವನ ರಾಜನ ಸೋದರನಾದ ಪ್ರಭೃತಸು ಹರಿದು ಮುರಿದು ಹೋಗಿದ್ದ ಆ ಪಟ್ಟಣವನ್ನು ಸುಡಲಾರಂಭಿಸಿದನು. ಅಸಹಾಯನಾದ ಪುರಂಜನನ ಅರಮನೆಯನ್ನು ಮುತ್ತಿ ಆವನನ್ನು ಹಿಂಗಟ್ಟು ಮುರಿಗಟ್ಟಿ ಘೋರ ಅಂಧಕಾರದಲ್ಲಿ ಕೆಡವಿದನು- ಆಗಲೂ ಅವನು ಹೆಂಡತಿ ಮಕ್ಕಳಿಗಾಗಿ ಪರಿತಪಿಸುತ್ತಿದ್ದನು. ಅವನ ಪತ್ನೀ ಪುತ್ರರೂ ಅಸಹಾಯರಾಗಿ ಅವನ ಹಿಂದೆ ಹಿಂದೆಯೇ ಹೋಗಲಾರಂಭಿಸಿದರು. ಮಹಾಬಲಶಾಲಿಯಾದ ಸರ್ಪನು ತನ್ನ ಐದು ಹೆಡೆಗಳಿಂದಲೂ ಯುದ್ಧಮಾಡಿ ಸಾಕಾಗಿ ಆ ಪಟ್ಟಣವನ್ನು ಬಿಟ್ಟು ಹೋದನು. ಅಂಧಕಾರದಲ್ಲಿ ಕೆಡವಲ್ಪಟ್ಟಿದ್ದ ಆ ಪುರಂಜನನು ಹಿಂದೆ ಮಾಡಿದ ಅನೇಕ ಯಜ್ಞಗಳಲ್ಲಿ ವಧಿಸಲ್ಪಟ್ಟ ಪಶುಗಳೆಲ್ಲ ಒಂದೊಂದಾಗಿ ಇವನನ್ನು ಅಣಕಿಸುತ್ತಾ ಕೊಡಲಿಯಿಂದ ಇವನ ದೇಹವನ್ನು ಕತ್ತರಿಸಲಾರಂಭಿಸಿದುವು. ಇಷ್ಟಾದರೂ ಅವನನ್ನು ಪತ್ನೀ ಪುತ್ರರ ಮಮತೆಯು ಬಾಧಿಸುತ್ತಲೇ ಇದ್ದು ಕೊನೆಗೆ ಅವನು ಕಾಲವಶನಾಗಿ ಮೃತ್ಯುವನ್ನು ಹೊಂದಿದನು.

ಸ್ತ್ರೀಪುತ್ರರ ಮೋಹವನ್ನು ಬಿಡಲಾರದೇ ಮರಣ ಹೊಂದಿದುದರಿಂದ ಅವನು ಎರಡನೆಯ ಜನ್ಮದಲ್ಲಿ ವಿದರ್ಭರಾಜನ ಕನ್ಯೆಯಾಗಿ ಹೆಂಗುಸಾಗಿ ಹುಟ್ಟಿದನು. ಆ ಕನ್ಯೆಯ ಸುಂದರ ರೂಪಕ್ಕೆ ಮೋಹಿತರಾದ ಅನೇಕ ರಾಜಕುಮಾರರ ಮಧ್ಯೆ ಅವರನ್ನೆಲ್ಲ ಜಯಿಸಿ ಪಾಂಡ್ಯ ದೇಶದ ರಾಜನಾದ ಮಲಯಧ್ವಜನು ಅವಳನ್ನು ವಿವಾಹವಾದನು. ಅವರಿಗೆ ಸುಂದರಿಯಾದ ಒಬ್ಬ ಮಗಳೂ ಏಳು ಜನ ಮಕ್ಕಳೂ ಹುಟ್ಟಿದರು. ಆ ಏಳು ಜನರೂ ದ್ರವಿಡ

ದೇಶಕ್ಕೆ ರಾಜರಾದರು. ಅವರಲ್ಲಿ ಪ್ರತಿಯೊಬ್ಬನಿಗೂ ಒಂದೊಂದು ಅರ್ಬುದದಂತೆ [ಹತ್ತು ಕೋಟಿ] ಮಕ್ಕಳಾದರು. ಈ ಸಪ್ತಮಲಯಧ್ವಜಪುತ್ರರೇ ಈ ಸಮಸ್ತ ಭೂಮಂಡಲವನ್ನು ಆಳಲಾರಂಭಿಸಿದರು. ಮುಂದೆಯೂ ಇವರೇ ಭೂಮಿಯನ್ನು ಆಳುತ್ತ ಬರುವರು. ಮಲಯಧ್ವಜನ ಕನ್ಯೆಯನ್ನು ಅಗಸ್ತ್ಯನು ವಿವಾಹವಾದನು. ಅಗಸ್ತ್ಯನಿಂದ ಅವಳಿಗೆ ದೃಢಚ್ಯುತನೆಂಬ ಮಗನೂ ಅವನಿಗೆ ಇಧ್ಮಬಾಹು ಎಂಬ ಮಗನೂ ಹುಟ್ಟಿದರು. ರಾಜರ್ಷಿಯಾದ ಮಲಯಧ್ವಜನು ಮಕ್ಕಳಿಗೆಲ್ಲ ರಾಜ್ಯವನ್ನು ಹಂಚಿಬಿಟ್ಟು ತಾನು ತಪಸ್ಸಿಗಾಗಿ ವನಕ್ಕೆ ಹೊರಟನು. ಪತಿವ್ರತೆಯಾದ ಅವನ ಪತ್ನಿಯೂ ಅವನನ್ನು ಹಿಂಬಾಲಿಸಿದಳು

ರಾಜನು ಪವಿತ್ರನದಿಗಳಲ್ಲಿ ಸ್ನಾನಮಾಡುತ್ತಾ ಕಂದಮೂಲ ಫಲ ಜಲಗಳಿಂದ ದೇಹರಕ್ಷಣೆ ಮಾಡಿಕೊಂಡು ತಪಶ್ಚರ್ಯೆ ಮಾಡಲಾರಂಭಿಸಿದನು. ಚಳಿ ಗಾಳಿ ಬೇಸಗೆ ಮಳೆಗಾಲ ಚಳಿಗಾಲ ಮುಂತಾದ ಪ್ರಕೃತಿಯ ಹೆಚ್ಚು ಕಡಿಮೆಗಳನ್ನೂ ಹಸಿವು, ಬಾಯಾರಿಕೆಗಳನ್ನೂ ಲೆಕ್ಕಿಸದೆ ತಪಸ್ಸುಮಾಡುತ್ತಾ ಕಾಮಕ್ರೋಧಾದಿಗಳನ್ನು ಜಯಿಸಿ ಎಲ್ಲರನ್ನೂ ಸಮಭಾವದಿಂದ ನೋಡಲಾರಂಭಿಸಿದನು. ತಪಸ್ಸು ಮತ್ತು ಉಪಾಸನೆಗಳಿಂದ ಅವನ ಚಿತ್ತದಲ್ಲಿದ್ದ ಕಾಮಕ್ರೋಧಾದಿ ವಾಸನೆಗಳು ದೂರವಾದವು. ಯಮ ನಿಯಮಾದಿ ಸಾಧನೆಗಳಿಂದ ಮನಸ್ಸನ್ನೂ ಇಂದ್ರಿಯಗಳನ್ನೂ ಅಂತಃಕರಣವನ್ನೂ ವಶಮಾಡಿಕೊಂಡು ಒಂದು ನೂರು ದಿವ್ಯವರ್ಷಗಳ ವರೆಗೆ ಏಕಾಗ್ರಚಿತ್ತದಿಂದ ಕಂಬದಂತೆ ಅಲುಗಾಡದೇ ನಿಂತು ಪರಮಾತ್ಮನಾದ ಶ್ರೀಹರಿಯನ್ನು ಧ್ಯಾನಿಸುತ್ತಾ ಸಮಾಧಿಯಲ್ಲಿದ್ದುಬಿಟ್ಟನು.

ಸ್ವಪ್ನದಲ್ಲಿ ಕಂಡ ಅನುಭವವು ಎಚ್ಚೆತ್ತಮೇಲೆ ಮಿಥ್ಯೆಯಾಗಿ ಕಾಣುವಂತೆ, ಸುಖದುಃಖಕಲ್ಪಿತ ಸಾಂಸಾರಿಕ ಭಾವನೆಗಳು ಅವನಿಗೆ ಸ್ವಪ್ನದ ರೀತಿ ತೋರಲಾರಂಭಿಸಿದವು. ಆಗಲವನು ಮಾಯೆಯಿಂದ ಮುಕ್ತನಾದನು. ಆಗ ಭಕ್ತವತ್ಸಲನಾದ ಶ್ರೀಹರಿಯು ಹೃದಯದಲ್ಲಿ ಆತನಿಗೆ ದರ್ಶನ ಕೊಟ್ಟು, ಜ್ಞಾನದೀಪದಿಂದ ಅವನ್ನು ಅನುಗ್ರಹಿಸಿದನು. ಪವಿತ್ರವಾದ, ಎಂದೆಂದಿಗೂ ಆರದಯೇ ಪ್ರಜ್ವಲಿಸುತ್ತಿರುವ, ಆ ಜ್ಞಾನ ದೀಪದ ಪ್ರಕಾಶದಲ್ಲಿ ಅವನಿಗೆ ಜಗತ್ತಿನಲ್ಲಿನ ಸಮಸ್ತವು ಯಥಾರ್ಥರೂಪದಿಂದ ಕಾಣಲಾರಂಭಿಸಿತು. ಆ ಜ್ಞಾನಪ್ರಕಾಶದಿಂದ ರಾಜಾ ಮಲಯಧ್ವಜನು ಪರಬ್ರಹ್ಮನಲ್ಲಿ ಆತ್ಮನನ್ನು ಆತ್ಮನಲ್ಲಿ ಪರಬ್ರಹ್ಮನನ್ನು ನೋಡಲು ಶಕ್ತನಾದನು. ಕೊನೆಗೆ "ನಾನು ಬ್ರಹ್ಮನಾಗಿದ್ದೇನೆ." ಎಂಬ ಭಾವನೆಯೊಡನೆ ಆ ವೃತ್ತಿನಿಂದ ನಿವೃತ್ತನಾದನು.

ಪತಿವ್ರತೆಯಾದ ಆತನ ಪತ್ನಿಯು ಸಮಸ್ತ ರಾಜಭೋಗಗಳನ್ನು ತ್ಯಾಗಮಾಡಿ ತನ್ನ ಪತಿಯನ್ನು ಸೇವೆಮಾಡುತ್ತಿದ್ದಳು. ಕೇಶಗಳು ಜಟೆಗಳಾಗಿ ಮಾರ್ಪಟ್ಟವು. ದಿವ್ಯದುಕೂಲಗಳನ್ನು ತ್ಯಾಗಮಾಡಿ ನಾರುಮಡಿಯನ್ನುಟ್ಟಳು. ಶಾಂತವಾದ ಅಗ್ನಿಯ ಸಮೀಪದಲ್ಲಿರುವ ಶಾಂತ ಅಗ್ನಿಶಿಖೆ (ಅಗ್ನಿಜ್ವಾಲೆ) ಯಂತೆ ಪತಿಯ ಸಮೀಪದಲ್ಲಿ ಶೋಭಿಸಿದಳು. ಆಕೆಯ ಪತಿಯು ನಿತ್ಯವೂ ಸಮಾಧಿಸ್ಥಿತಿಯಲ್ಲಿ ಶಾಂತಚಿತ್ತನಾದುದರಿಂದ ಅವನು ಮಾತನ್ನು ಹೊರಡಿಸದಿದ್ದುದು, ಅವಳಿಗೆ [illegible]ಗಳೇ ಇಲ್ಲ. ನಿತ್ಯದಂತೆ ಪತಿಸೇವೆ ಮಾಡುತ್ತಲೇ ಇದ್ದಳು. [illegible] ಪಾದಸೇವೆಗೆ ಪ್ರಾರಂಭಿಸಿದಾಗ ಕಾಲುಗಳು ತಣ್ಣಗಾಗಿ [illegible] ಕಂಡು ಬಂದು ಕೊನೆಗೆ ಅವನು ಮೃತನಾಗಿರುವನ್ನು ನಿಜ

ಯಿಸಿದಳು. ಸ್ವಲ್ಪಕಾಲ ದುಃಖಿಸಿ ಕೊನೆಗೆ ಧೈರ್ಯ ತೆಗೆದುಕೊಂಡು ಸುತ್ತಮುತ್ತಲಿನ ಕಟ್ಟಿಗೆಗಳನ್ನು ಆರಿಸಿ ಗುಡ್ಡೆಹಾಕಿ ಚಿತೆಯನ್ನು ಸಿದ್ಧಮಾಡಿದಳು. ಚಿತೆಯಮೇಲೆ ಆ ದೇಹವನ್ನು ಇಟ್ಟು ಬೆಂಕಿಹತ್ತಿಸಿ ತಾನು ಸಹಗಮನಕ್ಕೆ ನಿಶ್ಚಯಿಸಿ ಪತಿಯ ದೇಹದೊಡನೆ ತಾನೂ ಆ ಚಿತೆಯಮೇಲೆ ಹೋಗಿ ಕುಳಿತು ಕೊಂಡಳು.

ಇದೇ ಸಮಯದಲ್ಲಿ ಆ ಸ್ತ್ರೀರೂಪ ಧಾರಣೆ ಮಾಡಿದ ಪುರಂಜನನ ಮಿತ್ರನಾದ ಅವಿಜ್ಞಾತ*ನೆಂಬ ಬ್ರಾಹ್ಮಣನು ಸ್ವೇಚ್ಛೆಯಿಂದ ಜಗತ್ತಿನಲ್ಲಿ ಸಂಚರಿಸುತ್ತಾ ಆ ಸ್ಥಳಕ್ಕೆ ಬಂದನು. ಚಿತೆಯಮೇಲೆ ಸಹಗಮನಕ್ಕೆ ಸಿದ್ಧಳಾಗಿ ಅಳುತ್ತಿರುವ ಸ್ತ್ರೀ ರೂಪ ಧಾರಿಯಾದ ಪುರಂಜನನನ್ನು ನೋಡಿ ಈ ರೀತಿ ಸಮಾಧಾನ ಮಾಡ ಲಾರಂಭಿಸಿದನು:—

ಎಲೈ ನೀನಾರು? ಯಾರ ಮಗಳು? ಏತಕ್ಕಾಗಿ ದುಃಖಿ ಸುತ್ತಿರುವೆ? ಈ ಪುರುಷನಾರು? ನಿನಗೂ ಈತನಿಗೂ ಇರುವ ಸಂಬಂಧವೇನು? ಮಿತ್ರನಾದ ನನ್ನನ್ನು ಗುರ್ತಿಸುವೆಯಾ? ನೀನು ಪುರುಷರೂಪದಲ್ಲಿದ್ದಾಗ ನನ್ನೊಡನೆ ಎಡೆಬಿಡದೆ ಸಂಚರಿಸು ತ್ತಿದ್ದೆಯಲ್ಲಾ? ಎಲೈ ಮಿತ್ರನೇ, ನೀನಾರೆಂಬುದನ್ನು ಜ್ಞಾಪಿಸಿಕೋ. ಅವಿಜ್ಞಾತನೆಂಬ ಮಿತ್ರನಿದ್ದನೆಂದು ನಿನಗೆ ಜ್ಞಾಪಕ ಬರುವುದಿಲ್ಲವೇ? ನೀನು ನನ್ನೊಡನೆ ಅನೇಕ ಮನೋಹರ ಸ್ಥಾನಗಳಲ್ಲಿ ತಿರುಗು ತ್ತಿರಲಿಲ್ಲವೆ? ನಿನಗೆ ವಿಷಯ ಭೋಗ ಮಾಡ ಬೇಕೆಂಬ ಇಚ್ಛೆ

* ಅವಿಜ್ಞಾತನೆಂಬ ಮಿತ್ರನೊಬ್ಬನಿದ್ದನೆಂದು ಈ ಕಥೆಯ ಪ್ರಾರಂಭದಲ್ಲಿಯೇ ಹೇಳಿದೆ.

ಯಾದೊಡನೆಯೇ ನನ್ನ ಸಹವಾಸವನ್ನು ಬಿಟ್ಟು ಹೊರಟುಹೋದೆ. ಆರ್ಯ! ನಾನೂ ನೀನೂ ಹಂಸರೂಪರು. ಸಹಸ್ರಾರು ವರ್ಷಗಳು ಮಾನಸ ಸರೋವರದಲ್ಲಿ ಎಡೆಬಿಡದೆ ವಾಸವಾಗಿದ್ದವರು. ಎಲೈ ಬಂಧುವೇ ನೀನು ವಿಷಯ ಭೋಗೇಚ್ಛೆಯಿಂದ ನನ್ನನ್ನು ಬಿಟ್ಟು ಭೂಮಿಗೆ ಹೊರಟುಹೋದೆ. ಭೂಮಿಯಮೇಲೆ ತಿರುಗುತ್ತಿರುವಾಗ ನಿನಗೆ ಒಂದು ಪಟ್ಟಣವು ಸಿಕ್ಕಿತು. ಅದರಲ್ಲಿ ಐದು ಉಪವನಗಳು ಒಂಭತ್ತು ದ್ವಾರಗಳು ಒಬ್ಬ ರಕ್ಷಕನೂ ಮೂರು ಕೋಟೆಗಳು ಆರು ವ್ಯಾಪಾರಿವಂಶಗಳೂ ಐದು ಅಂಗಡಿಗಳು ಇದ್ದುವು. ಅದಕ್ಕೆ ಪಂಚ ಪ್ರಕೃತಿ ರೂಪಿಣಿಯಾದ ಒಬ್ಬ ಒಡತಿಯು ಇದ್ದಳು.

ಆ ಪಟ್ಟಣವು ಮತ್ತಾವುದೂ ಅಲ್ಲ ಮನುಷ್ಯಶರೀರವನ್ನು ಪಟ್ಟಣಕ್ಕೆ ಹೋಲಿಸಿದ್ದಾರೆ. ಪಂಚ ಜ್ಞಾನೇಂದ್ರಿಯಗಳ ವಿಷಯವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೇ ಅದರಲ್ಲಿ ಐದು ಉಪವನಗಳು. ನಾಸಿಕೆ ಮುಂತಾದ ನವರಂಧ್ರಗಳೇ ಅದರೊಳಗಿನ ಒಂಭತ್ತು ಬಾಗಿಲುಗಳು. ಪ್ರಾಣವಾಯುವು ಅವುಗಳೊಳಗೆ ಹೋಗಿಬರುತ್ತಿರುತ್ತದೆ. ಪೃಥ್ವಿ, ಜಲ, ತೇಜ ಈ ಮೂರು ಅದರ ಕೋಟೆಗಳು. ಪಂಚ ಜ್ಞಾನೇಂದ್ರಿಯಗಳೂ ಆರನೆಯ ಮನಸ್ಸೂ ಸೇರಿದರೆ ಅದು ವ್ಯಾಪಾರಿ ವಂಶವಾಗುತ್ತದೆ. ಐದು ಕರ್ಮೇಂದ್ರಿಯಗಳೇ ಐದು ಅಂಗಡಿಗಳು. ಪಂಚ ತತ್ವಗಳೇ ಪಂಚ ಪ್ರಕೃತಿಗಳು. ಸ್ತ್ರೀ ಅಥವಾ ಮಾಯೆಯು ಅದರ ಒಡೆ ಮಾನತಿಯು. ಪುರುಷನಾದ ಆತ್ಮನು [ಪುರಂಜನನಾದ ನೀನು] ಅದರೊಳಹೊಕ್ಕು ಮಾಯಾಶಕ್ತಿಗೆ ಅಧೀನನಾದೆ. ನೀನಾರು? ನಿನ್ನ ಸ್ವರೂಪವೇನು? ಎಂಬುದನ್ನು ಮರೆ

ಯುವಷ್ಟು ಪರಾಧೀನನಾಗಿ ಬಿಟ್ಟೆ. ಮಾಯಾರೂಪಸ್ತ್ರೀಯ ವಶನಾದುದರಿಂದ ನಿನಗೆ ಪರಬ್ರಹ್ಮನ ಜ್ಞಾಪಕವು ಬರಲಿಲ್ಲ. ಎಲೈ ಸರ್ವವ್ಯಾಪಿಯೇ! ನೀನು ಆ ಮಾಯೆಯ ಸಂಗದಿಂದಲೇ ಈ ದುರ್ಗತಿಗೆ ಇಳಿದೆಯಲ್ಲವೇ? ನೀನು ವಿದರ್ಭ ರಾಜನ ಕುಮಾರಿಯೂ ಅಲ್ಲ, ಆ ವೀರ ರಾಜನು ನಿನ್ನ ಪತಿಯೂ ಅಲ್ಲ. ನೀನು ಪುರಂಜನನ ಪತ್ನಿಯೂ ಅಲ್ಲ ನೀನು ನವದ್ವಾರಪುರಿಯಲ್ಲಿ ಸ್ತ್ರೀಯ ಮೋಹಕ್ಕೆ ಬದ್ಧಳಾಗಿ ಸಿಕ್ಕಿ ಬಿದ್ದಿದ್ದೆ.

ಇದೆಲ್ಲವೂ ನಾನು ಮಾಡಿದ ಮಾಯಾಸೃಷ್ಟಿ ಮಾತ್ರ ನೀನು ಪೂರ್ವಜನ್ಮದಲ್ಲಿ ನಿನ್ನನ್ನು ಪುರುಷನೆಂದು ಭಾವಿಸಿದ್ದೆ ಈಗ ಪತಿವ್ರತೆಯಾದ ಸ್ತ್ರೀ ಎಂದು ಭಾವಿಸಿದ್ದೀಯೆ. ನೀನು ಇವೆರಡೂ ಅಲ್ಲ *ನಾನು ನೀನು ಇಬ್ಬರೂ ಹಂಸರೂಪರು. ನಾನು ನೀನು ಬೇರೆ ಅಲ್ಲ. ನಾನೇ ನೀನಾಗಿದ್ದೀಯೆ. ನೀನೇ ನಾನಾಗಿದ್ದೇನೆ. ನಮ್ಮಿಬ್ಬರಲ್ಲಿ ಯಾವ ಭೇದವೂ ಇಲ್ಲ. ಚತುರರಾದ ಜ್ಞಾನಿಗಳು ನಮ್ಮಿಬ್ಬರಲ್ಲಿ ಯಾವ ಭೇದವನ್ನೂ ಎಣಿಸುವುದಿಲ್ಲ. ದಡ್ಡನು ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡಾಗ ಬಿದ್ದ ಪ್ರತಿಬಿಂಬವನ್ನು ತನ್ನಿಂದ ಬೇರೇ ಎಂದು ತಿಳಿದಂತೆ ಅಜ್ಞಾನಿಯಾದವನು ನನ್ನಲ್ಲಿ ಮತ್ತು ನಿನ್ನಲ್ಲಿ ಅಂತರವನ್ನು ನೋಡುತ್ತಾನೆ. ಆದರೆ ನೀನು ನನ್ನ ಪ್ರತಿಬಿಂಬ ಎಂಬುದನ್ನು ತಿಳಿಯಬಾರದು. ಆದುದರಿಂದ ನನಗೂ ನಿನಗೂ ಬಿಂಬ ಪ್ರತಿಬಿಂಬಗಳಂತೆ ಮಾತ್ರ ಭೇದವಿದೆ. ಹೀಗೆ ಮಾನಸ ಸರೋವರವಾಸಿ ಜೀವಾತ್ಮನಿಗೆ ಹಂಸನು [ಪರಮಾತ್ಮನು] ಯಾವಾಗ ಉಪದೇಶ ಮಾಡಿದನೋ ಆಗ ಆ ಭ್ರಾಂತನಾದ

* ನಾನು. (ಪರಮಾತ್ಮ) ನೀನು. (ಜೀವಾತ್ಮ)

(ಜೀವಾತ್ಮ) ಹಂಸನಿಗೆ ಪರಮಾತ್ಮನ ವಿಯೋಗದಿಂದ ಯಾವಜ್ಞಾನವು ನಷ್ಟವಾಗಿದ್ದಿತೊ ಅದು ಪುನಃ ಪ್ರಾಪ್ತವಾಯಿತು. ಇಂಥಹ ಆತನಿಗೆ ತನ್ನ ಸ್ವರೂಪದ ಜ್ಞಾನವಾಯಿತು. ಅಜ್ಞಾನವು ಹೋಗಲಾರಂಭಿಸಿತು.

ಎಲೈ! ಮಹಾರಾಜನಾದ ಪ್ರಾಚೀನಬರ್ಹಿಯೆ, ನಾವು ನಿನಗೆ ಪುರಂಜನನ ಉಪಾಖ್ಯಾನದ ವ್ಯಾಜದಿಂದ ಆಧ್ಯಾತ್ಮ ಜ್ಞಾನವನ್ನು ಹೇಳಿದ್ದೇವೆ. ಕಥಾರೂಪದಿಂದ ತತ್ವ ಜ್ಞಾನವನ್ನು ಹೇಳುವುದೇ ಒಳ್ಳೆಯದು. ಹೀಗೆ ಮಾಡುವುದರಿಂದ ಮನಸ್ಸಿಗೂ ಹಿಡಿಯುತ್ತದೆ. ಹಾಗೆಯೇ ಭಕ್ತವತ್ಸಲನಾದ ಶ್ರೀ ಹರಿಪರಮಾತ್ಮನಲ್ಲಿ ಭಕ್ತಿಯು ಹುಟ್ಟುತ್ತದೆ.

ಪ್ರಾಚೀನ ಬರ್ಹಿಯು ಹೇಳಿದನು—

"ನಾರದರೇ! ನಮ್ಮಂತಹ ಸಂಸಾರಿಗಳು ಇಂದ್ರಿಯ ಸುಖಕ್ಕಾಗಿ ಯಜ್ಞಾದಿ ಕರ್ಮಗಳಲ್ಲಿ ಲಿಪ್ತರಾದವರು ನೀವು ಹೇಳುವ ಗೂಢ ತತ್ವಾರ್ಥವನ್ನು ತಿಳಿಯಲಾರೆವು. ಆದುದರಿಂದ ಸ್ವಲ್ಪ ಚೆನ್ನಾಗಿ ವಿವರಿಸಿ ಹೇಳುವ ಕೃಪೆಮಾಡಬೇಕು."

ಅದಕ್ಕೆ ಉತ್ತರವಾಗಿ ನಾರದರು ಹೇಳತೊಡಗಿದರು—

"ರಾಜಾ! ನಾನೀಗ ಪುರಂಜನೋಪಾಖ್ಯಾನದ ವಿವರವಾದ ಅರ್ಥವನ್ನು ತಿಳಿಸುತ್ತೇನೆ ಕೇಳು— ಜೀವನು ಕರ್ಮದ್ವಾರಾ ಪ್ರಾಣಿಗಳು ಒಂದು, ಎರಡು, ಮೂರು, ನಾಲ್ಕು ಚರಣಗಳುಳ್ಳ, ಬಹು ಚರಣಗಳುಳ್ಳ ಅಥವಾ ಚರಣ ರಹಿತ ಪುರ(ಶರೀರ)ಗಳನ್ನು ಅಥವಾ ಭೋಗಭವನಗಳ ...ದನ್ನವೋ ಅಂತಹ ಭೋಗ ಯೋಗ್ಯ ದೇಹಗಳನ್ನು ಹೊಂದುವ

ವನು. ಪುರಂಜನನು ಜೀವಾತ್ಮನು ಎಂದು ತಿಳಿಯಬೇಕು. ಈ ಪುರವಾಸಿಯಾದ ಪುರುಷನು (ಜೀವಾತ್ಮನು) ಕರ್ಮದಿಂದಲೂ ಗುಣದಿಂದಲೂ ಯಾವನನ್ನು ತಿಳಿಯಲಾರನೋ ಅವನನ್ನು ಅವಿಜ್ಞಾತನೆಂದು ತಿಳಿಯಬೇಕು. ಇವನು ಜೀವಾತ್ಮನ ಜೊತೆಯಲ್ಲಿಯೇ ಇದ್ದು ಅವನ ಕರ್ಮಗಳಿಗೆ ಸಾಕ್ಷಿಯಾಗಿರುವನಾದುದರಿಂದ ಇವನು ಸಖನು. ಈ ಜೀವಾತ್ಮನು ಯಾವಾಗ ಮಾಯೆಯ ಗುಣಗಳನ್ನು ಚೆನ್ನಾಗಿ ಅನುಭವಿಸಬೇಕೆಂದು ಇಚ್ಛೆಪಟ್ಟನೋ ಆಗ ನವದ್ವಾರಗಳಿಂದಲೂ ಎರಡು ಕೈಕಾಲುಗಳಿಂದಲೂ ಕೂಡಿದ ಮನುಷ್ಯದೇಹವನ್ನು ಭೋಗಯೋಗ್ಯವೆಂದು ತಿಳಿದನು. ಯಾವ ತಾಮಸೀ ಬುದ್ಧಿಯಿಂದ 'ನಾನು ನನ್ನದು' ಎಂಬ ಅಹಂಕಾರವು ಹುಟ್ಟುವುದೊ ಮತ್ತು ಯಾವುದರಿಂದ ಈ ಜೀವನು ಸಂಪೂರ್ಣ ಇಂದ್ರಿಯಗಳಿಂದ ಮಾಯಾಸಂಬಂಧೀ ವಿಷಯಗಳನ್ನು ಭೋಗಿಸುವನೋ ಆಕೆಯನ್ನು ಪುರಂಜನೀ [ವಿಷಯಾಕಾರ ಬುದ್ಧಿ]— ಅವನ ಪತ್ನಿ ಎಂದು ತಿಳಿಯಬೇಕು. ಪಂಚಜ್ಞಾನೇಂದ್ರಿಯಗಳೂ ಪಂಚ ಕರ್ಮೇಂದ್ರಿಯಗಳೂ ಹೀಗೆ ಹತ್ತು ಆವಳ ಮಿತ್ರರು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು ಐದು ರೂಪವಾಗಿ ದೇಹ ರಕ್ಷಣೆ ಮಾಡುವ ವಾಯುವೇ ಐದು ಹೆಡೆಯ ಸರ್ಪವು. ಆವಳ ಮಿತ್ರರೆಲ್ಲರಿಗಿಂತಲೂ ಬಲಶಾಲಿಯಾದವನು, ಹನ್ನೊಂದನೆಯ ಇಂದ್ರಿಯವಾದ ಮನಸ್ಸು. ಶಬ್ದ, ಸ್ಪರ್ಶ, ರೂಪ, ರಸ, ಗಂಧ ರೂಪಗಳಾದ ವಿಷಯಸಮೂಹವೇ ಪಾಂಚಾಲದೇಶವು. ಅದರ ಮಧ್ಯದಲ್ಲಿರುವುದೇ ಈ ನವದ್ವಾರಪುರವಾದ ಮನುಷ್ಯಶರೀರವು. ಎರಡು ಕಣ್ಣುಗಳು, ಎರಡು ಮೂಗಿನಹೊಳ್ಳೆಗಳು, ಒಂದು ಬಾಯಿ, ಎರಡು ಕಿವಿಗಳು. ಜನನೇಂದ್ರಿಯ ಗುದದ್ವಾರ ಈ ರೀತಿಯಾಗಿ ಒಂಬತ್ತು ರಂಧ್ರಗಳೇ ನವದ್ವಾರಗಳು.

ಈ ಜೀವನು ಸ್ವಸ್ಥಿತಿಯಲ್ಲಿ ಇಂದ್ರಿಯಾದೀ ಮಿತ್ರನೊಡನೆ ಈ ದ್ವಾರಗಳ ಮೂಲಕ ಹೊರಗಿನ ವಿಷಯಗಳನ್ನು ಅನುಭವಿಸುತ್ತಾನೆ. [illegible], ಬಾಯಿ ಈ [illegible] ಪೂರ್ವದ್ವಾರಗಳು. [illegible] ಬಲಕಿವಿಯು ದಕ್ಷಿಣ ದ್ವಾರವು. ಎಡಕಿವಿಯು ಉತ್ತರ ದ್ವಾರವು. ಜನನೇಂದ್ರಿಯ ಗುದದ್ವಾರಗಳು ಪಶ್ಚಿಮ ದ್ವಾರಗಳು. ಎರಡು ಕಣ್ಣುಗಳೇ ಜೊತೆಯಲ್ಲಿ ಮಾಡಲ್ಪಟ್ಟ ಖದ್ಯೋತ ಆವಿರ್ಮುಖೀ ಎಂಬೆರಡು ದ್ವಾರಗಳು. ಇವುಗಳ ಮೂಲಕ ಜೀವಾತ್ಮನು 'ಚಕ್ಷುರಿಂದ್ರಿಯದ ಸಹಾಯದಿಂದ ವಿಭ್ರಾಜಿತ ದೇಶ ಅಥವಾ ರೂಪವನ್ನು ನೋಡುತ್ತಾನೆ. ನಲಿನೀ ನಾಲಿನೀ ಎಂಬೆರಡು ಮೂಗಿನ ಹೊಳ್ಳೆಗಳು "ಸೌರಭ" ದೇಶವು ಸುಗಂಧವು. ಘ್ರಾಣೇಂದ್ರಿಯವೇ ಅವಧೂತನಾಮ ಸಖನು. ಜೀವನು ಈ ಮಿತ್ರನ ಸಹಾಯದಿಂದ ಸುಗಂಧವನ್ನು ಗ್ರಹಣಮಾಡುತ್ತಾನೆ. ಬಾಯಿಯೇ ಮುಖ್ಯಾ ಎಂಬ ದ್ವಾರವು ವಾಕ್ ಶಕ್ತಿಯೇ 'ವಿಪಣ' ಎಂಬ ಸಖನು. ರಸಗಳ ರುಚಿಯನ್ನು ಗುರ್ತಿಸಬಲ್ಲ ನಾಲಿಗೆಯೇ—ರಸನೇಂದ್ರಿಯವೇ ರಸಜ್ಞ ಎಂಬ ಸಖನು. ಮಾತನಾಡುವುದೇ 'ಆಪಣ' ದೇಶವು. ಅನೇಕ ಪ್ರಕಾರದ ಅನ್ನವು ಬಹೂದನದೇಶವು—ಬಲಗಿವಿಯ ಹೆಸರು ಪಿತೃಹೂ ಎಂದೂ ಎಡಗಿವಿಯ ಹೆಸರು ದೇವಹೂ ಎಂದು ರೂಪ ರಸ ಆದಿ ಪಂಚ ವಿಷಯಗಳಲ್ಲಿ ಪ್ರವೃತ್ತಿಯೂ ನಿವೃತ್ತಿಯೂ ಪಾಂಚಾಲ ದೇಶವು. ಶ್ರೋತ್ರೇಂದ್ರಿಯವೇ ಶ್ರುತಧರ ಎಂಬ ಮಿತ್ರನು. ಇವನ ಸಹಾಯದಿಂದ ಎಡ ಅಥವಾ ಬಲಗಿವಿಯಿಂದ ಕರ್ಮ ಕಾಂಡ ಮತ್ತು ಜ್ಞಾನಕಾಂಡ ರೂಪವಾದ ಶಾಸ್ತ್ರಗಳನ್ನು ಶ್ರವಣಮಾಡಿ ಜೀವಾತ್ಮನು ದೇವಯಾನ ಪಿತೃಯಾನಗಳನ್ನು ಹೊಂದುತ್ತಾನೆ. ಜನನೇಂದ್ರಿಯವೇ ಆಸುರಿ ಎಂಬ ಹೆಸರಿನ ಪಶ್ಚಿಮ ಮಾರ್ಗವು. ಮೈಥುನವನ್ನು ಗ್ರಾಮಕ ದೇಶವೆನ್ನುತ್ತಾರೆ. ಏಕೆಂದರೆ ಗ್ರಾಮೀಣ ವಿಷಯೀ ಜನ

ಗಳಿಗೆ ಇವರಲ್ಲಿಯೇ ಹೆಚ್ಚಿನ ಪ್ರೇಮವಿರುತ್ತದೆ. ಉಪಸ್ಥ ಇಂದ್ರಿಯವೇ ದುರ್ಮದ ಎಂಬ ಮಿತ್ರನು. ಗುದೇಂದ್ರಿಯವೇ ನಿರ್ಋತಿ ಎಂಬ ಪಶ್ಚಿಮದ್ವಾರವು. ಮಲತ್ಯಾಗವು ವೈಶಸ ಎಂಬದೇಶವು. ಪಾಯು ಇಂದ್ರಿಯವೇ ಲುಬ್ಧಕ ಎಂಬ ಮಿತ್ರನು. ನಿರ್ವಾಕ ಮತ್ತು ಪೇಶಸ್ಕೃತ ಎಂಬವು ಕೈ ಮತ್ತು ಕಾಲುಗಳ ರೂಪದ ಅಂಧದ್ವಾರಗಳು. ಜೀವನು ಇವುಗಳಿಂದ ಕರ್ಮ ಮಾಡುತ್ತಾನೆ. ಮತ್ತು ನಡೆಯುತ್ತಾನೆ. ಹೃದಯವೇ ಅಂತಃಪುರವು. ಮನವೇ ವಿಷೂಚೀನವೆಂಬ ಸಖನು. ಜೀವನು ಮನಸ್ಸಿನ ಸಹಾಯದಿಂದ ಹೃದಯದಲ್ಲಿ ಮನಸ್ಸಿನ ಗುಣಗಳಾದ ಸತ್ವ, ರಜಸ್ಸು, ತಮಸ್ಸುಗಳ ಮೂಲಕ ಶೋಕವನ್ನೂ ಸಂತೋಷವನ್ನೂ ಆನಂದವನ್ನೂ ಹೊಂದುತ್ತಾನೆ. ಪುರಂಜನೀ ಅಥವಾ ಬುದ್ಧಿಯು ಹೇಗೆ ಹೇಗೆ ವಿಕಾರವನ್ನು ಹೊಂದುವಳೋ ಹಾಗೆ ಹಾಗೆಯೇ ಬುದ್ಧಿಯ ಗುಣಗಳಲ್ಲಿ ಲಿಪ್ತನಾದ ಜೀವಾತ್ಮನು ತಾನು ಸಹಜವಾಗಿ ಕೇವಲ ಸಾಕ್ಷಿಯಾಗಿದ್ದರೂ ಬುದ್ಧಿಯ ವೃತ್ತಿಗಳನ್ನು ಅನುಸರಣೆ ಮಾಡುತ್ತಾನೆ. ಈ ದೇಹವೇ ರಥವು. ಇಂದ್ರಿಯಗಳೇ ಕುದುರೆಗಳು. ವರ್ಷಗಳು ಕಳೆದು ಹೋಗುವುದು ಆ ರಥದ ಗತಿಯು. ಪುಣ್ಯಕರ್ಮ ಪಾಪ ಕರ್ಮಗಳು ರಥದ ಎರಡು ಚಕ್ರಗಳು. ಮೂರು ಗುಣಗಳೇ ಮೂರು ಧ್ವಜಗಳು. ಪಂಚಪ್ರಾಣಗಳೇ ಐದು ಹಗ್ಗಗಳು. ಮನವೇ ಲಗಾಮು. ಬುದ್ಧಿಯೇ ಸಾರಥಿಯು. ಹೃದಯವೇ ರಥಿಕನು ಕುಳಿತುಕೊಳ್ಳುವ ಸ್ಥಾನವು. ಶೋಕ ಮೋಹಾದಿ ದ್ವಂದ್ವಗಳೇ ನೊಗದ ಆಗಣಿಗಳು. ಇಂದ್ರಿಯ ವಿಷಯಗಳೇ ಶಸ್ತ್ರಗಳು. ಮೇದಸ್ಸು, ಮಜ್ಜ ಮುಂತಾದ ಸಪ್ತ ಧಾತುಗಳೇ [illegible] ಹೊದಿಕೆಗಳು.

ಬಾಹ್ಯವಿಭ್ರಮರೂಪ ರಜೋಗುಣಮಯ ರೂಪವೇ ಕವಚವು. ಮೃಗತೃಷ್ಣೆ ಅಥವಾ ಫಲಶೂನ್ಯ ವಿಷಯ ಭೋಗವೇ ಬೇಟೆಯಾಡುವಿಕೆಯು. ಶಬ್ದಾದಿ ಪಂಚವಿಷಯಗಳೇ ಪಂಚ ಪ್ರಸ್ರವಣವು. ಒಳ್ಳೆಯ ಕೆಟ್ಟ ವಿವಿಧ ರೂಪದ ಶಬ್ದಾದಿ ವಿಷಯಗಳ ಭೋಗವೇ ಬೇಟೆಯ ಮೃಗಗಳು. ಸಂವತ್ಸರವ ಕಾಲನೇ ಚಂಡವೇಗನೆಂಬ ಗಂಧರ್ವನು. ವರ್ಷವಲ್ಲಿನ ಮುನ್ನೂರ ಅರವತ್ತು ಹಗಲುಗಳೇ ಗಂಧರ್ವರು. ಮುನ್ನೂರ ಅರವತ್ತು ರಾತ್ರಿಗಳೇ ಗಂಧರ್ವ ಪತ್ನಿಯರು. ವೃದ್ಧಾವಸ್ಥೆಯೇ ಕಾಲ ಕನ್ಯೆಯು. ಅವಳನ್ನು ಯಾರೂ ವರಿಸುವುದಿಲ್ಲ. ಇಚ್ಛಿಸುವುದಿಲ್ಲ. ಮೃತ್ಯುವೇ ಯವನರ ಅಧಿಪತಿಯು. ಅವನು ಲೋಕಕ್ಷಯ ಮಾಡಲು ವೃದ್ಧಾಪ್ಯವನ್ನು ತನ್ನ ಸೋದರಿಯನ್ನಾಗಿ ಮಾಡಿಕೊಂಡಿದ್ದಾನೆ. ಆಧಿ [ಮಾನಸಿಕ ಚಿಂತೆ] ವ್ಯಾಧಿಗಳೇ ಯವನೇಶ್ವರನ ಅನುಯಾಯಿಗಳು. ಪ್ರಾಣಿಗಳಿಗೆ ತೊಂದರೆ ಕೊಡುವುದರಲ್ಲಿ ಅವುಗಳನ್ನು ಕೊಲ್ಲುವುದರಲ್ಲಿ ಸಮರ್ಥರಾದ ಜ್ವರ ಪ್ರಜ್ವರ ಎಂಬ ಹೆಸರಿನವರು ಮೃತ್ಯುವಿನ ಸೋದರರು. ಹೇ ರಾಜ! ಜೀವಾತ್ಮನು ನಿರ್ಗುಣನಾದ ಈಶ್ವರನ ಸ್ವರೂಪನಾಗಿದ್ದಾಗ್ಯೂ ತಮೋಗುಣದಿಂದ ಆವೃತವಾದ ದೇಹವನ್ನು ಗ್ರಹಣಮಾಡಿ ಅದರಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಕ್ಲೇಶಗಳನ್ನು ಹೊಂದುತ್ತಾ, ಒಂದು ನೂರು ವರ್ಷಗಳವರೆಗೂ ವ್ಯಾಧಿ ಶೋಕ ಮುಂತಾದ ಮಾನಸಿಕ, ಧರ್ಮರೂಪ, ಆಧಿದೈವಿಕ ದುಃಖಗಳನ್ನೂ ಕುರುಡಾಗುವಿಕೆ, ಕುಂಟನಾಗುವಿಕೆ ಮುಂತಾದ ಇಂದ್ರಿಯಾದಿ ಧರ್ಮರೂಪ ಆಧಿಭೌತಿಕ ದುಃಖಗಳನ್ನೂ ಹಸಿವು ಬಾಯಾರಿಕೆ ಮುಂತಾದ ಪ್ರಾಣಿಧರ್ಮರೂಪ ಆಧ್ಯಾತ್ಮಿಕ ದುಃಖಗಳನ್ನೂ ಕಲ್ಪಿಸಿ

ಮಾಡಿಕೊಳ್ಳುತ್ತಿರುತ್ತಾನೆ. ಸಾಧಾರಣ ವಿಷಯ ಸುಖಗಳ ಇಚ್ಛೆಯಾದ ನಾನು, ನನ್ನದು ಎಂಬ ಅಜ್ಞಾನದಲ್ಲಿ ಮೋಹಿತವಾದ ಕರ್ಮಗಳನ್ನು ಮಾಡುತ್ತಿರುತ್ತಾನೆ. ಈ ಜೀವನು ತಾನು ಸ್ವತಃ ಪ್ರಕಾಶಮಾನನಾಗಿದ್ದಾಗಿ ತನ್ನ ಸ್ವರೂಪವನ್ನು ತನ್ನ ಪರಮಗುರುವಾದ ಈಶ್ವರನನ್ನು ಮರೆತು ಮಾಯೆಯ ಗುಣಗಳಲ್ಲಿ ಲಿಪ್ತನಾಗುತ್ತಾನೆ. ಆ ಮಾಯಾ ಗುಣಗಳಲ್ಲಿ ಅಭಿಮಾನವನ್ನು ಹೊಂದುತ್ತಾನೆ. ಅಹಂಕಾರದಿಂದ ಪರವಶನಾಗಿ ಸಾತ್ವಿಕ (ಶುಕ್ಲ) ರಾಜಸ (ಕೆಂಪು) ತಾಮಸ (ಕಪ್ಪು) ಕರ್ಮಗಳನ್ನು ಮಾಡುತ್ತಾನೆ. ಅಂತಹ ಕರ್ಮಗಳಿಗೆ ತಕ್ಕಂತೆ ಉತ್ತಮ, ಮಧ್ಯಮ, ಅಧಮ ಯೋನಿಗಳಲ್ಲಿ ತಿರುಗುತ್ತಿರುತ್ತಾನೆ. ಸಾತ್ವಿಕ ಕರ್ಮಗಳನ್ನು ಮಾಡುವುದರಿಂದ ಬಹು ಚಮತ್ಕಾರ ಯುಕ್ತ, ಸುಖಮಯ ಲೋಕಗಳಿಗೆ ಹೋಗುತ್ತಾನೆ. ಪರಿಶ್ರಮಯುಕ್ತ ರಾಜಸ ಕರ್ಮಗಳನ್ನು ಮಾಡುವುದರಿಂದ ಮೋಹಮಯಗಳಾದ ಪರಿಣಾಮದಲ್ಲಿ ದುಃಖಗಳನ್ನು ಕೊಡುವ ಲೋಕಗಳನ್ನು ಹೊಂದುತ್ತಾನೆ. ಸಾತ್ವಿಕ ಮುಂತಾದ ಕರ್ಮಗಳಿಗೆ ಅನುಸಾರವಾಗಿ ಒಮ್ಮೆ ಹೆಂಗಸಿನ ದೇಹವನ್ನು ಒಮ್ಮೆ ಗಂಡಸಿನ ದೇಹವನ್ನು ಮತ್ತೊಮ್ಮೆ ನಪುಂಸಕ ಜನ್ಮವನ್ನು ಪಡೆಯುತ್ತಾನೆ. ಹಾಗೆಯೇ ದೇವ, ಮನುಷ್ಯ, ಪಶು, ಪಕ್ಷಿ ರೂಪದೇಹಗಳನ್ನು ಹೊಂದುತ್ತಾನೆ. ಹಸಿವು ತೃಷೆಗಳಿಂದ ದೀನನಾಗಿ ನಾಯಿಯಂತೆ ಭಾಗ್ಯಾನುಸಾರ ಶಿಕ್ಷೆಯನ್ನು, ರೊಟ್ಟಿಯ ತುಂಡನ್ನು ಹೊಂದುತ್ತಾ ಆಶ್ರಯಕ್ಕಾಗಿ ಮನೆ ಮನೆಯನ್ನು ಸುತ್ತುತ್ತಿರುತ್ತಾನೆ. ಹೀಗೆ ಸುಖದ ಇಚ್ಛೆಯಿಂದ ಪೂರ್ವಕರ್ಮಾನುಸಾರವಾಗಿ ಅನೇಕ ಯೋನಿಗಳಲ್ಲಿ ಹೋಗಿಬಂದು ಸುಖ ದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಅಂದರೆ ವಿಷಯ ಕಾಮನೆಯಿಂದೊಡ

ಗೂಡಿ ಮೇಲು ಕೀಳು ಕರ್ಮಗಳನ್ನು ಪ್ರಿಯಾಪ್ರಿಯಗಳನ್ನು (ಸುಖ ದುಃಖ) ಹೊಂದುತ್ತಿರುತ್ತಾನೆ. ಕ್ಷಣಭಂಗುರವಾದ ವಿಷಯ ಸುಖವು ಸಿಕ್ಕುವುದರಿಂದ ಆಧ್ಯಾತ್ಮಿಕಾದಿ ತ್ರಿವಿಧವಾದ ದುಃಖಗಳು ಶಮನವಾಗಲಾರವು. ಸಕಾಮ ಕರ್ಮದಿಂದಲೂ ಕರ್ಮಭಾರ ದುಃಖವು ನಿವೃತ್ತಿಯಾಗಲಾರದು. ತಲೆಯಮೇಲಿನ ಭಾರವನ್ನು ಭುಜದಮೇಲಕ್ಕೆ ಇಳಿಸಿಕೊಂಡಾಗ, ತಲೆಗೆ ಭಾರವು ಸ್ವಲ್ಪ ಕಾಲ ಕಡಿಮೆಯಾದಂತೆ ತೋರಿದರೂ ಭಾರದ ದುಃಖವು ಕಡಿಮೆಯಾದಂತೆ ಇಲ್ಲ. ತಲೆಯ ದುಃಖಕ್ಕೆ ಸ್ವಲ್ಪಕಾಲ ವಿಶ್ರಾಂತಿ ಸಿಕ್ಕಿದಂತೆ. ಹಾಗೆಯೇ ಕರ್ಮದಿಂದ ಕರ್ಮಕ್ಕೆ ಪ್ರತೀಕಾರವು ಮಾಡಲೂ ಸಾಧ್ಯವಿಲ್ಲ. ಕೇವಲ ಕರ್ಮದಿಂದ ಕರ್ಮ ಪ್ರತೀಕಾರವು ಸಾಧ್ಯವಿಲ್ಲ. ಏಕೆಂದರೆ ಈ ಎರಡು ಕರ್ಮಗಳೂ ಅಜ್ಞಾನ ಜನಿತವಾದವು. ಸ್ವಪ್ನದೊಳಗಿನ ಸ್ವಪ್ನದಂತೆ ಎರಡೂ ಸಮಾನ ಅನುಭವಗಳು. ಸ್ವಪ್ನದಿಂದ ಸ್ವಪ್ನದ ಅನುಭವವು ದೂರವಾದೀತೆ? ಸ್ಥೂಲ ಶರೀರವು ನಾಶವಾದರೂ ವಾಸನಾಮಯವಾದ ಲಿಂಗಶರೀರವು ನಾಶವಾಗದಿದ್ದರೆ ಸಂಸಾರವು ಜನ್ಮ ಮರಣಗಳ ಪ್ರವಾಹವು ನಾಶವಾಗಲಾರದು. ಈ ಮನಸ್ಸು ಸ್ವಪ್ನಾವಸ್ಥೆಯಲ್ಲಿ ಸಂಪೂರ್ಣ ಶರೀರಕ್ಕೆ ಅಭಿಮಾನಿಯಾಗಿ ವಿವಿಧ ಕರ್ಮಗಳಿಗೆ ಸಂಬಂಧಿಸಿದ ಸುಖ ದುಃಖಗಳನ್ನು ಅನುಭವ ಮಾಡುತ್ತಿರುವಂತೆ ಈ ಶರೀರವನ್ನು ಬಿಟ್ಟರೂ ಈ ಶರೀರಾಭಿಮಾನಿಯು ಮನಸ್ಸು ವಿಷಯ ವಾಸನೆಗಳಿಂದ ಲಿಪ್ತವಾಗಿರುತ್ತದೆ. ಆದುದರಿಂದ ಜನ್ಮ ಮರಣಗಳ ಜಾಲವು ತಪ್ಪಲಾರದು. ಕೇವಲ ಆತ್ಮಜ್ಞಾನವನ್ನು ಹೊಂದುವುದರಿಂದ ಭಕ್ತಿಪೂರ್ವಕವಾಗಿ ಪರಮಗುರುವಾದ ಪರಮೇಶ್ವರನನ್ನು ಚೆನ್ನಾಗಿ ಭಜನೆ ಮಾಡುವುದರಿಂದ ಮಾತ್ರ ಮನಸ್ಸು ಸಾಂಸಾರಿಕ ವಿಷಯಗಳಿಂದ

ಹಿಂದಿರುಗುತ್ತದೆ. ವಿಷಯವಾಸನೆಯು ನಷ್ಟವಾಗಿ ಅನಂತರ ಕರ್ಮ ಬಂಧನವು ಕತ್ತರಿಸಲ್ಪಡುತ್ತದೆ. ಆದುದರಿಂದ ದೊಡ್ಡ ದೊಡ್ಡ ಅನರ್ಥಗಳಿಗೆ ಮೂಲವಾದ ಸಂಸಾರಬಂಧನವೂ ಬಿಟ್ಟುಹೋಗುತ್ತದೆ. ಸಮಸ್ತಪ್ರಾಣಿಗಳಿಗೂ ಅಂತರ್ಯಾಮಿಯಾದ ಭಗವಂತನಲ್ಲಿ ಏಕಾಗ್ರ ಮನಸ್ಸುಳ್ಳವನಾಗಿ ಭಕ್ತಿ ಭಾವವನ್ನು ಬಲಪಡಿಸುವುದರಿಂದ ಜೀವ ನಿಗೆ ಮಾಯಾರಚಿತ ವಿಷಯ ಭೋಗಗಳಲ್ಲಿ ವೈರಾಗ್ಯವು ಹುಟ್ಟು ತ್ತದೆ. ಈಶ್ವರನಲ್ಲಿ ದೃಢಭಕ್ತಿಯನ್ನು ಇಡುವುದರಿಂದ ತತ್ವಜ್ಞಾನವು ಹುಟ್ಟುತ್ತದೆ. ಪರಮಾತ್ಮನಾದ ಅಚ್ಯುತನ ಕಥೆಗಳನ್ನು ಶ್ರದ್ಧಾ ಪೂರ್ವಕವಾಗಿ ನಿತ್ಯವೂ ಪಠನಮಾಡುವುದರಿಂದ ಮತ್ತು ಕೇಳು ವುದರಿಂದ ಸಂಸಾರದಿಂದ ಬಿಡಿಸಲ್ಪಡುವ ಪರಮೇಶ್ವರ ಭಕ್ತಿಯು ಜಾಗ್ರತೆಯಾಗಿ ಹೃದಯದಲ್ಲಿ ಸ್ಥಿರವಾಗುತ್ತದೆ. ಪರಮಾತ್ಮನ ಗುಣ ಗಳನ್ನು ಹೊಗಳುವ ಅವುಗಳನ್ನು ಕೇಳುವ ಲಾಲಸೆಯು ಯಾರಲ್ಲಿ ಉಂಟಾ ಗುವುದೋ ಅಂತಹ ನಿರ್ಮಲ ಮತ್ತು ಶಾಂತಹೃದಯವುಳ್ಳ ಭಗವದ್ಭಕ್ತರು ಸಾಧುಜನಗಳಾಗುತ್ತಾರೆ. ಅಲ್ಲಿಂದ, ಅಂತಹ ಮಹಾತ್ಮರ ಮುಖ ದಿಂದ ಹೊರಟ ಹರಿಚರಿತ್ರರೂಪೀ ಶುದ್ಧ ಅಮೃತಪ್ರವಾಹವು ಹರಿಯ ಲಾರಂಭಿಸುತ್ತದೆ. ಯಾರು ಆ ಭಗವಚ್ಚರಿತ್ರರೂಪ ಅಮೃತವನ್ನು ಏಕಾಗ್ರರಾಗಿ ಕಿವಿಯಿಟ್ಟು ಕೇಳುತ್ತಾರೆಯೋ ಕೇಳಿದಷ್ಟೂ ದಣಿಯು ವುದಿಲ್ಲವೋ ಅಂತಹವರನ್ನು ಹಸಿವು ತೃಷೆ ಭಯ ಶೋಕ ಮೋಹಾದಿ ತಾಪತ್ರಯಗಳು ಬಾಧಿಸಲಾರವು ಮೇಲೆ ಹೇಳಿದ ತಾಪತ್ರಯ ಗಳು ಮನುಷ್ಯನಿಗೆ ಸ್ವಾಭಾವಿಕವಾದವುಗಳು. ಇವುಗಳಿಂದ ಪೀಡಿತ ನಾದ ಮನುಷ್ಯನ ಮನಸ್ಸು ಅಮೃತಸಮಾನವಾದ ಹರಿಭಕ್ತಿ ಯಲ್ಲಿ—ಹರಿಕಥೆಯಲ್ಲಿ ಪ್ರೇಮವನ್ನು ಹೊಂದಲಾರದು. ಆದುದರಿಂದ ಈ ತಾಪಗಳಿಂದ ನಿವೃತ್ತಿಹೊಂದಲು ಸತ್ಸಂಗವನ್ನು ಮಾಡಬೇಕು.

ಈಶ್ವರಕೃಪೆಯಿಲ್ಲದಿದ್ದರೆ ಆತನನ್ನು ನೋಡಲಾರಿಗೂ ಸಾಧ್ಯವಿಲ್ಲ. ಪ್ರಜಾಪತಿಗಳ ಪತಿಯಾದ ಬ್ರಹ್ಮನೂ, ಶಂಕರನೂ, ಮನುವೂ, ದಕ್ಷನೇ ಮುಂತಾದ ಪ್ರಜಾಪತಿಗಳೂ, ಸನಕಾದಿ ನೈಷ್ಠಿಕಬ್ರಹ್ಮಚಾರಿಗಳೂ, ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ, ಕ್ರತು, ಭೃಗು ವಸಿಷ್ಠ ಮತ್ತು ನಾನು (ನಾರದ) ಮುಂತಾದ ಬ್ರಹ್ಮಚಾರಿಗಳಾದ ಋಷಿಗಳು ಈಗಲೂ ತಪಸ್ಸುಮಾಡುತ್ತಿರುವ ತಪಸ್ವಿಗಳು ಬಹುಕಾಲ ನಿಂತು ಈಶ್ವರದರ್ಶನಕ್ಕಾಗಿ ಕಾಯುತ್ತಿರುವ ತಪೋ ವಿದ್ಯಾ ಸಮಾಧಿ ಮುಂತಾದ ಉಪಾಯಗಳಿಂದ ಈಶ್ವರದರ್ಶನಾಕಾಂಕ್ಷಿಗಳಾಗಿರುವವರೂ ಈ ಎಲ್ಲರಿಗೂ ಆತನನ್ನು ದುರ್ಲಭನೆಂದು ತಿಳಿ. ಯಾರು ಬಹು ವಿಸ್ತೃತವಾದ ಅಪಾರ ವೇದಸಾಗರದಲ್ಲಿ ಈಜುತ್ತಿರುವರೋ ಅವರು ಸ್ವರ್ಗಾದಿ ಸುಖಕಾಮನೆಯಿಂದ ಇಂದ್ರಾದಿ ದೇವತೆಗಳನ್ನು ಯಜ್ಞಗಳ ಮೂಲಕ ಆರಾಧನೆ ಮಾಡುತ್ತಿರುವುದರಿಂದ ಈಶ್ವರನನ್ನು ನೋಡಲಾರರು. ಕೇವಲ ಈಶ್ವರನನ್ನೇ ಹೊಂದಬೇಕೆಂಬ ಇಚ್ಛೆಯಿಂದ ಆತನನ್ನು ಯಾರು ಭಜಿಸುತ್ತಾರೆಯೋ ಅವರಿಗೆ ಈಶ್ವರ ಕೃಪೆಯಾಗುವುದು. ಅವರು ಲೌಕಿಕಸುಖಗಳ ಆಶೆಯನ್ನೂ ವೈದಿಕ ಕಾಮ್ಯ ಕರ್ಮ ಗಳ ಆಶೆಯನ್ನೂ ಅಸಾರವೆಂದು ತಿಳಿದು ಅವುಗಳನ್ನು ತ್ಯಾಗಮಾಡುತ್ತಾರೆ ಆದುದರಿಂದ ಎಲೈ ! ಪ್ರಾಚೀನಬರ್ಹಿಯೇ! ವೇದದಲ್ಲಿ ಎಷ್ಟು ಸಕಾಮಕರ್ಮಗಳು ಹೇಳಲ್ಪಟ್ಟಿವೆಯೋ ಅವೆಲ್ಲವೂ ಕಿವಿಗೆ ಕೇಳುವುದಕ್ಕೆ ರುಚಿಕರವಾಗಿ ತೋರಿಬರುವ ಮಧುರವಾದ ವಾಕ್ಯಗಳ ಮಾತ್ರ. ಅಜ್ಞಾನಿಗಳು ಅವುಗಳನ್ನು ಪರಮಾರ್ಥವೆಂದು ತಿಳಿದು ಭ್ರಾಂತಿ ಪಡುತ್ತಾರೆ. ಸ್ವರ್ಗಾದಿಲೋಕಗಳು ಪುಣ್ಯಫಲವು ತೀರಿದ ನಂತರ ದುಃಖವನ್ನು ಕೊಡುವುವಾದುದರಿಂದ ಈ ಯಜ್ಞಾದಿಕರ್ಮ

ಗಳನ್ನೇ ಜೀವನದ ಸಾರಾಂಶವೆಂದೂ ಪುರುಷಾರ್ಥವೆಂದೂ ನಂಬಬೇಡ. ವೇದಗಳು ಕೇವಲ ಯಜ್ಞಾದಿಕಾಮ್ಯಕರ್ಮಗಳನ್ನೇ ಹೇಳುತ್ತಿವೆ ಎಂದು ತಿಳಿಯುವವರ ಬುದ್ಧಿಗಳೂ ಯಜ್ಞದ ಧೂಳಿನಿಂದ ಮಲಿನವಾಗಿವೆ. ಅವರು ಕರ್ಮದ ಸ್ವರೂಪವನ್ನೂ, ಸರಿಯಾಗಿ ವೇದದ ಸ್ವರೂಪವನ್ನೂ ತಿಳಿಯಲಾರರು. ವೇದಸ್ವರೂಪನಾದ ಜನಾರ್ದನನು ವೇದತತ್ತ್ವಾರ್ಥವಾದ ಜ್ಞಾನದಲ್ಲಿ ವಾಸಮಾಡುತ್ತಿರುವನೆಂದು ಅಂತಹ ಅಜ್ಞಾನಿಗಳು ತಿಳಿಯುವುದಾದರೂ ಹೇಗೆ ? ನೀನೂ ಸಹ ಅಂತಹವನೇ. ನೀನು ಕರ್ಮಸ್ವರೂಪವನ್ನು ತಿಳಿದಿರುವಿಯೆಂದು ಅಹಂಕಾರಪಡುತ್ತಿರುವೆ ! ಕೇವಲ ದರ್ಭಾಸನದಿಂದ ಭೂಮಿಯನ್ನೆಲ್ಲಾ ಹರಡುವಂತೆ ಮಾಡಿ ಅನೇಕ ಪಶುಗಳನ್ನು ಹತ್ಯೆಮಾಡಿ ' ನಾನು ದೊಡ್ಡ ಯಜ್ಞಕರ್ತೃ ' ಎಂಬುದಾಗಿ ಅಭಿಮಾನಪಡುತ್ತಿರುವೆ. ಆದರೆ ನಿನಗೆ ಕರ್ಮದ ವಾಸ್ತವಸ್ವರೂಪವು ತಿಳಿದಿಲ್ಲ. ಪರಮಾತ್ಮನು ಯಾವುದರಿಂದ ಪ್ರೀತನಾಗುವನೋ ಅದೇ ಕರ್ಮ. ಯಾವುದರಿಂದ ಹರಿಯಲ್ಲಿ ಭಕ್ತಿಭಾವವು ಹುಟ್ಟುವುದೋ ಅದೇ ವಿದ್ಯೆಯು. ಭಗವಂತನಾದ ಹರಿಯೇ ದೇಹಧಾರಿಗಳೆಲ್ಲರ ಆತ್ಮನಾಗಿದ್ದಾನೆ. ಈ ಜಗತ್ತಿಗೆ ಸ್ವತಂತ್ರನಾಗಿ ಕಾರಣನಾಗಿದ್ದಾನೆ. ಆ ಹರಿಯ ಚರಣಕಮಲಗಳಿಗೆ ಶರಣು ಹೋಗುವುದರಿಂದಲೇ ಜೀವರುಗಳಿಗೆ ಶಾಂತಿಯು ಸಿಕ್ಕಬಲ್ಲುದು. ಆ ಹರಿಯೇ ಎಲ್ಲರಿಗೂ ಪರಮಪ್ರಿಯನಾದ ಆತ್ಮನಾಗಿದ್ದಾನೆ. ಆತನನ್ನು ಶರಣ್ಯನನ್ನಾಗಿ ಸ್ವೀಕರಿಸುವುದರಿಂದಮಾತ್ರ ಮನುಷ್ಯನು ನಿರ್ಭಯನಾಗಿರಬಲ್ಲನು. ಈ ತತ್ತ್ವವನ್ನಾವನು ತಿಳಿಯುವನೋ ಆತನೇ ವಿದ್ವಾಂಸನು. ಇಂತಹ ವಿದ್ವಾಂಸನೇ ಎಲ್ಲರಿಗೂ ಗುರುವು. ಆತನು ಸಾಕ್ಷಾತ್ ಹರಿಯ ರೂಪವೆಂದೇ ತಿಳಿಯಬೇಕು.

ಆಕಾರಣದಿಂದ ಎಲೈ ರಾಜನೇ! ನಿನ್ನ ಪ್ರಶ್ನೆಗೆ ಉತ್ತರವನ್ನು ಮೇಲೆ ಹೇಳಿದ ಅಧ್ಯಾತ್ಮವಾದದ ಮೂಲಕ ತಿಳಿಸಿ ಕೊಟ್ಟಿದ್ದೇನೆ. ಇದರಿಂದ ನಿನಗೆ ಜ್ಞಾನವು ಪ್ರಾಪ್ತವಾಗುವುದು. 'ನನ್ನ ಮಕ್ಕಳು ಈಗೆಲ್ಲಿರುವರು? ಯಾವಾಗ ರಾಜಭಾನಿಗೆ ಹಿಂದಿರುಗುವರು.' ಎಂದು ನೀನು ಕೇಳುವಿಯಲ್ಲವೆ? ಅದಕ್ಕೆ ಹೇಳುತ್ತೇನೆ:-

ನಿನಗೆ ವೈರಾಗ್ಯವು ದೃಢವಾಗುವಂತೆ ಒಂದು ರಹಸ್ಯಮಯವಾದ ತತ್ವವನ್ನು ತಿಳಿಸುತ್ತೇನೆ, ಕೇಳು.

"ಪುಷ್ಪವಾಟಿಕೆಯಲ್ಲಿ ಮಧುವಿನ ಲೋಭದಿಂದ ಭ್ರಮರಗಳು ಹಾಡುತ್ತಾ ಸುತ್ತುತ್ತಿರುತ್ತವೆ. ಹಣ್ಣು ಹುಲ್ಲಿನೊಡನೆ ಒಂದು ಮೃಗವು ಆ ಸಂಗೀತದ ಮಾಧುರ್ಯಕ್ಕೆ ಮನಸೋತು ಅಲ್ಲಿಯೇ ನಿಂತುಕೊಳ್ಳುತ್ತಿರುತ್ತದೆ. ಅದರ ಎದುರಿಗೆ ದೊಡ್ಡದೊಂದು ಹುಲಿಯು ಕಾದು ಕುಳಿತಿರುತ್ತದೆ. ಅದರೆ ಮೃಗಕ್ಕೆ ಅದರ ಅರಿವೇ ಇರುವುದಿಲ್ಲ. ಹೀಗಿರುವಾಗ ವ್ಯಾಧನೊಬ್ಬನು ಹಿಂದಿನಿಂದ ಬಾಣವನ್ನು ಬಿಟ್ಟು ಆ ಮೃಗವನ್ನು ಹೊಡೆಯುತ್ತಾನೆ." ಇದೇ ಪ್ರಪಂಚ.

ಈ ರೂಪಕದ ಅರ್ಥವು ಇಷ್ಟು. ಸುಗಂಧಿತ ಪುಷ್ಪದ ಸುಗಂಧವು ಕ್ಷಣಿಕ. ಅದರ ಪ್ರಫುಲ್ಲತೆಯೊಡನೆಯೇ ಗಂಧವಹನು ಅದರಲ್ಲಿನ ಸೌಂದರ್ಯವನ್ನೂ ಸುಗಂಧವನ್ನೂ ಹರಣಮಾಡುವನು. ಸುಗಂಧವೂ ಸೌಂದರ್ಯವೂ ಹೋಗುತ್ತಲೇ ಅದು ಬಾಡಿ ನಿರ್ಮಾಲ್ಯ

ವಾಗಿ ಕೆಳಕ್ಕೆ ಬೀಳುವುದು. ಹೂಗಳಂತೆ ಕೆಲವು ಕಾಲ ಸುಖ ಕರವಾಗಿ ಕಂಡು ನಂತರ ಶೋಭಾಹೀನವಾಗುವ ಸ್ತ್ರೀಯರಿಂದೊಡಗೂಡಿದ ಗೃಹವೇ ಪುಷ್ಪವಾಟಿಕೆಯು. ಪುಷ್ಪಗಳ ಸುಗಂಧದ— ಮಧುವಿನ ಸಮಾನವಾದ ಸಕಾಮ ಕರ್ಮಕ್ಕೆ ಪುನಸೋತು ಆ ಕ್ಷುದ್ರ ಸುಖಗಳ ಫಲಸ್ವರೂಪ ಭೋಜನ ಮೈಥುನಗಳ— ವಿಷಯಸುಖದ ಬೆನ್ನಟ್ಟಿ ತಿರುಗುತ್ತಿರುವ ಹರಿಣವೇ ನೀನು. ಭ್ರಮರಗಳ ಸಂಗೀತದಂತೆ ಮೋಹಕವಾದ ಸ್ತ್ರೀ ಪುತ್ರಾದಿಗಳ ಸರಸ ಸಲ್ಲಾಪಕ್ಕೆ ಬೆರಗಾಗಿರುವ ನಿನ್ನೆದುರಿಗೆ ಕಾಲರೂಪನಾದ ವ್ಯಾಘ್ರನು ಕುಳಿತಿರುವುದನ್ನು ನೀನು ಕಾಣಲಾರೆ. ಆತನು ನಿನ್ನ ಆಯುಷ್ಯವನ್ನು ಪ್ರತಿಕ್ಷಣವೂ ನುಂಗುತ್ತಿರುವನೆಂಬುದರ ಅರಿವೇ ನಿನಗಿಲ್ಲ. ಹಿಂದಿನಿಂದ ನಿನಗೆ ಅರಿವಿಲ್ಲದಂತೆಯೇ ಮೃತ್ಯುರೂಪ ವ್ಯಾಧನು ನಿನ್ನ ಪ್ರಾಣಗಳನ್ನು ಹರಣಮಾಡಲು ಸಿದ್ಧನಾಗಿದ್ದಾನೆ. ರಾಜನೇ ! ಮೃತ್ಯುವು ನಿನ್ನನ್ನು ಶೀಘ್ರದಲ್ಲಿಯೇ ನುಂಗುವುದೆಂಬುದನ್ನು ತಿಳಿ. ಮೃಗಕ್ಕೆ ಸಮಾನವಾದ ನಿನ್ನ ವಿಷಯಾಭಿಲಾಷೆಯನ್ನು ತ್ಯಜಿಸು. ಚಿತ್ತವನ್ನು ಹೃದಯದಲ್ಲಿ ಏಕಾಗ್ರವಾಗಿ ನಿಲ್ಲಿಸು. ಇಂದ್ರಿಯಗಳ ಬಾಹ್ಯಪ್ರವೃತ್ತಿಯನ್ನು ( ವಿಷಯ ವಾಸನೆಗಳನ್ನು ) ಚಿತ್ತದ ಮೂಲಕ ಹಿಡಿದು ನಿಲ್ಲಿಸು. ಮೂರ್ಖರಾದ ವಿಷಯಲಂಪಟರ ವಿಷಯವಾಸನೆಯಿಂದ ದೂಷಿತವಾದ ಗೃಹಸ್ಥಾಶ್ರಮವನ್ನು—ಸ್ತ್ರೀಸಂಗವನ್ನು ತ್ಯಾಗಮಾಡು. ಸಮಸ್ತ ಜೀವರುಗಳ ಪ್ರಭುವಾದ ಪರಮೇಶ್ವರನನ್ನು ಶರಣುಹೋಗು. ಹೀಗೆ ಮನಸ್ಸನ್ನು ಕ್ರಮಕ್ರಮವಾಗಿ ವಿಷಯಗಳಿಂದ ಹಿಂದಿರುಗಿಸಿ ಮಂಗಳಮಯನಾದ ಭಗವಂತನಲ್ಲಿ ನಿಲ್ಲಿಸು. ಆಗ ನಿನಗೆ ಶಾಂತಿಯು ದೊರಕುವುದು.

**ಪ್ರಾಚೀನ ಬರ್ಹಿಯು ಹೇಳಿದನು:—**

"ಹೇ ಬ್ರಹ್ಮರ್ಷೆ! ತಾವು ಹೇಳಿದುದನ್ನೆಲ್ಲ ನಾನು ಮನಸ್ಸಿಟ್ಟು ಕೇಳಿದೆನು. ಅದನ್ನು ಕುರಿತು ಮನಸ್ಸಿನಲ್ಲಿ ವಿಚಾರ ವನ್ನು ಮಾಡುತ್ತಿದ್ದೇನೆ. ನನ್ನ ಉಪಾಧ್ಯಾಯರುಗಳಿಗೆ (ಆಚಾರ್ಯ) ಈ ವಿಷಯವು—ಆತ್ಮಜ್ಞಾನವು ಗೊತ್ತೇ ಇಲ್ಲವೆಂದು ಭಾವಿಸುತ್ತೇನೆ. ಇದು ತಿಳಿದಿದ್ದರೆ ಅವರು ನನಗೆ ಖಂಡಿತವಾಗಿಯೂ ತಿಳಿಸುತ್ತಿದ್ದರು. ಹೇ ದೇವರ್ಷಿ! ನೀವು ನನ್ನ ಸಂಶಯವನ್ನು ನಿವೃತ್ತಿಮಾಡಿರುತ್ತೀರಿ. ಆದರೂ ನನಗೆ ಒಂದು ಸಂದೇಹವು ಬಾಧಿಸುತ್ತಿದೆ. ಇದು ಎಲ್ಲರೂ ವಿಚಾರಮಾಡಲು ಯೋಗ್ಯವಾದುದು. ನನಗೆ ಸಮಾಧಾನವಾಗದಿದ್ದರೆ ನನ್ನ ಇಂದ್ರಿಯಗಳ ಪ್ರವೃತ್ತಿಯು ಆ ಕಡೆಗೆ ಹೋಗಲಾರದು. ನನ್ನ ಸಂದೇಹವೇನೆನ್ನುವಿರೋ? ಜೀವನು ಈ ಪ್ರಪಂಚದಲ್ಲಿ ಯಾವ ದೇಹದಿಂದ ಕರ್ಮಮಾಡುತ್ತಾನೆಯೋ ಅದು ಇಲ್ಲಿಯೇ ಸತ್ತು ಹೋಗಿ ಅದರಲ್ಲಿನ ಪಂಚಭೂತಾಂಶಗಳೂ ಪಂಚಭೂತಗಳಲ್ಲಿ ಲೀನ ವಾಗುತ್ತವೆ. ಈ ಕರ್ಮಗಳ ಫಲವನ್ನು ಅನುಭವಿಸುವುದಕ್ಕೆ ಪರಲೋಕದಲ್ಲಿ ಮತ್ತೊಂದು ಶರೀರವು ಬರುತ್ತದೆ. ಅದೇ ಶರೀರ ದಿಂದಲೇ ಅವನು ಪರಲೋಕದಲ್ಲಿ ಕರ್ಮಫಲಗಳನ್ನನುಭವಿಸುತ್ತಾನೆ. ಎಂದು ವೇದವೇತ್ತರುಗಳು ಹೇಳುತ್ತಾರೆ. ಕರ್ಮಮಾಡುವುದೊಂದು ಶರೀರ. ಅದರ ಫಲವನ್ನು ಅನುಭವಿಸುವುದೊಂದು ಶರೀರ. ಇದು ಹೇಗಾದೀತು? ಅಸಂಗತವಲ್ಲವೆ? ಜನರು ಮಾಡುವ ವೇದ ವಿಹಿತಕರ್ಮಗಳು ಪೂರ್ತಿಯಾದ ನಂತರ ಸ್ವಲ್ಪ ಹೊತ್ತಿನಲ್ಲಿ ಕ್ಷೀಣ ವಾಗುತ್ತದೆ. ಪರೋಕ್ಷ ಅಥವಾ ಅದೃಶ್ಯವಾದ ಕರ್ಮಗಳ ಫಲವು ಪ್ರಕಾಶಕ್ಕೆ ಬಂದು ಅದನ್ನು ನಾವು ಅನುಭವಿಸುವುದು ಹೇಗೆ.?

"ರಾಜಾ! ನೀನು ತಪ್ಪು ತಿಳಿದುಕೊಂಡಿದ್ದೀಯೆ. ಈ

ಲೋಕದಲ್ಲಿ ಯಾವ ದೇಹದಿಂದ ಕರ್ಮಮಾಡುವೆವೋ ಅದೇ ದೇಹದಿಂದಲೇ ಕರ್ಮಫಲವನ್ನು ಅನುಭವಿಸುವೆವು. ಕರ್ಮಕ್ಕೂ ಫಲಭೋಗಕ್ಕೂ ಬೇರೆ ಬೇರೆ ದೇಹಗಳಿರುವುದಿಲ್ಲ. ಇಲ್ಲಿ ಈ ಲೋಕದಲ್ಲಿ ನಾಶವಾಗುವುದು ಚರ್ಮ ರಕ್ತ ಮಾಂಸಾಸ್ಥಿಗಳಿಂದ ಕೂಡಿದ ಸ್ಥೂಲದೇಹ ಮಾತ್ರ. ಅದು ಜಡ. ಏನನ್ನೂ ಮಾಡಲಾರದು. ಕಟ್ಟಿಗೆಯಂತೆ ಪರಾಧೀನವಾದುದು. ಅದರೊಳಗಿರುತ್ತಾ ಅದಕ್ಕೆ ಅಭಿಮಾನಿಯಾಗಿ ಅದನ್ನು ನಡೆಸುತ್ತಿರುವುದಾವುದೋ ಅದು ಲಿಂಗ ಶರೀರ. ಕರ್ಮಕರ್ತೃವು ಅದೇ. ಈ ಸ್ಥೂಲ ದೇಹವನ್ನು ಬಿಟ್ಟ ನಂತರ ಪರಲೋಕದಲ್ಲಿ ಇಂತಹ ಮತ್ತೊಂದು ದೇಹವು ಅದಕ್ಕೆ ಸಿಕ್ಕುವುದು. ಅದನ್ನು ತಗಲುಹಾಕಿಕೊಂಡು ಸುಖ ದುಃಖಗಳನ್ನೂ ಪಾಪಪುಣ್ಯಗಳನ್ನೂ ಅನುಭವಿಸುವುದು ಆ ಶರೀರವೇ. ಆದುದರಿಂದ ನಿನ್ನ ಸಂಶಯಕ್ಕೆ ಕಾರಣವೇ ಇಲ್ಲ. ಈ ಜೀವನು "ಇದು ನಾನು, ಇದು ನನ್ನದು." ಎಂಬ ಅಭಿಮಾನದಿಂದ ಯಾವ ಯಾವ ಕರ್ಮಗಳನ್ನು ಮಾಡುತ್ತಾನೆಯೋ ಆಯಾ ಕರ್ಮ ಫಲಗಳನ್ನು ಅದಕ್ಕೆ ತಕ್ಕಂತಹ ದೇಹಗಳ ಆಧಾರದಿಂದ ಅನುಭವಿಸುತ್ತಾನೆ. ಅಹಂಕಾರವನ್ನು ಸ್ವೀಕಾರಮಾಡುತ್ತಾನಾದ್ದರಿಂದ ಪುನಃಪುನಃ ಜನ್ಮವನ್ನು ಪಡೆಯುತ್ತಿರುತ್ತಾನೆ. ಸ್ಥೂಲದೇಹವು ನಾಶವಾದರೂ ಅದಕ್ಕೆ ಅಭಿಮಾನಿಯಾದ ಲಿಂಗ ಶರೀರ, ಅಥವಾ ಮನಸ್ಸು ನಾಶವಾಗುವುದಿಲ್ಲ. ಈ ಸ್ಥೂಲದೇಹವನ್ನು ಬಿಟ್ಟ ನಂತರ ಲಿಂಗಶರೀರದಿಂದಲೇ ಪಶ್ವಾದಿ ಯೋನಿಗಳಲ್ಲಿ ಹುಟ್ಟಿ ಕರ್ಮಫಲವನ್ನು ಭೋಗಿಸುತ್ತಾನೆ. ಆದುದರಿಂದ ಅಭಿಮಾನಮಾಡುವ ಮನಸ್ಸೇ ನಿಜವಾದ ಕರ್ಮಕರ್ತನು. ಸ್ಥೂಲದೇಹವು ಕರ್ಮಫಲಭೋಗಕ್ಕಾಗಿಯೇ ಸಿದ್ಧವಾದ ಭೋಗಾಯತನವು ಮಾತ್ರ.

ಕರ್ಮವು ನಷ್ಟವಾದ ನಂತರ ಅದರ ಫಲವು ಹೇಗೆ ಹುಟ್ಟುವುದು ಎಂಬುದು ನಿನ್ನ ಎರಡನೆಯ ಪ್ರಶ್ನೆ. ಇಂದ್ರಿಯಗಳ ಜ್ಞಾನ ಕರ್ಮಸಂಜ್ಞಕಜ್ಞಾನ ಎಂಬ ಎರಡು ಪ್ರವೃತ್ತಿಗಳಿಂದ ಅವುಗಳಿಗೆ ಆಧಾರವಾದ ಚಿತ್ತವನ್ನು ನಿರ್ಮಾಣಮಾಡುತ್ತೇವೆ. ಯಾವ ವಸ್ತುವು ಯಾವ ಆಕಾರ ನಾಮಗುಣ ಕರ್ಮ ಸ್ವಭಾವಗಳಿಂದಿರುವುದೋ ಅದರ ಅನುಭವವು ಈ ದೇಹದಿಂದ ಆಗಿರದಿದ್ದರೆ ಅದು ಸ್ವಪ್ನ ಅಥವಾ ಇಚ್ಛೆಯಲ್ಲಿ ಹುಟ್ಟುವ ಸಂಭವವೇ ಇಲ್ಲ. ಆದುದರಿಂದ ವಾಸನೆಯಿಂದೊಡಗೂಡಿದ ಜೀವನ ಅನುಭವಕ್ಕೆ ಈ ಜನ್ಮವೂ ಕಾರಣವಾಗದಿದ್ದರೆ ಪೂರ್ವಜನ್ಮವಾದರೂ ಇದ್ದೇ ಇರಬೇಕು. ಮನಸ್ಸಿಗೆ ಗೊತ್ತಿರದ ವಿಷಯದ ಇಚ್ಛೆಯು ಮನದಲ್ಲಿ ಹುಟ್ಟುವ ಸಂಭವವೂ ಇಲ್ಲ. ಈ ಮನಸ್ಸು ಪೂರ್ವ ಜನ್ಮದ ಅನುಭವವನ್ನು ಗುರ್ತಿಸಿ ಮುಂದಿನದನ್ನು ನಡೆ ಸೂಚಿಸಬಲ್ಲ ಶಕ್ತಿಯನ್ನು ಹೊಂದಿದೆ. ಮಾನವನಾದವನೊಬ್ಬನಿಗೆ ಉದಾರತೆ ಕೃಪಣತೆ ಮುಂತಾದ ವಿಶೇಷ ಸ್ವಭಾವವಿರುವುದು ಕಂಡುಬಂದಾಗ ಅವನು ಪೂರ್ವಜನ್ಮದಲ್ಲಿ ಅಂಥ ಸ್ವಭಾವದವನಾಗಿದ್ದಿರಬೇಕು. ಮುಂದೆಯೂ ಹಾಗೆಯೇ ಆಗುವನು ಎಂದು ಮುಂತಾಗಿ ಹೇಳುವ ರೀತಿ. ಯಾವನಾದರೊಬ್ಬನಿಗೆ ಸ್ವಪ್ನದಲ್ಲಿ, ಕಂಡು ಕೇಳಿ ಅರಿಯದ ಅಸಂಭವವಾದ ಹಗಲಿನಲ್ಲಿ ನಕ್ಷತ್ರವನ್ನು ಕಾಣುವುದು, ಬೆಟ್ಟದ ಮೇಲೆ ಸಮುದ್ರವನ್ನು ಕಾಣುವುದು ಮುಂತಾದ ಅನುಭವಗಳುಂಟಾದರೆ ಅವು ದೇಶ, ಕಾಲ, ಅಜೀರ್ಣ ಮುಂತಾದ ವಿಶೇಷ ಸಂದರ್ಭಗಳಿಂದ ಉಂಟಾಗುವುದು ಕಾಣಬರುತ್ತದೆ. ಮನಸ್ಸಿನ ಶಕ್ತಿಯು ಅಪರಿಮಿತವಾಗಿರುವುದರಿಂದಲೂ ಇಂದ್ರಿಯ ವಿಷಯಗಳು ಭೋಗ್ಯರೂಪಗಳಿಂದ ಅದರ ಮುಂದೆ ಸಂಚರಿಸುತ್ತಿರುವುದರಿಂದ ಮನಸ್ಸಿಗೆ ಗೋಚರವಾಗದ ವಿಷಯವೇ ಜಗತ್ತಿನಲ್ಲಿಲ್ಲವೆಂದು

ಹೇಳಬಹುದು. ಈ ಜನ್ಮದಲ್ಲಾಗಲೀ ಹಿಂದಿನ ಅನೇಕಜನ್ಮಗಳಲ್ಲಾಗಲೀ ಯಾವಾಗಲೊಮ್ಮೆ ಪ್ರತಿಯೊಂದು ವಿಷಯವೂ ಅನುಭವಕ್ಕೆ ಬಂದೇ ಬಂದಿರುತ್ತದೆ. ಚಂದ್ರನೊಡನೆ ಸೇರಿದಾಗ ರಾಹುವೂ ಪ್ರಕಾಶಕ್ಕೆ ಬರುವಂತೆ ಪ್ರತ್ಯಕ್ಷವಾಗಿ ಕಾಣುವ ಈ ಜಗತ್ತೂ ಸಹಾ ಸತ್ವಗುಣದಲ್ಲಿ ನಿಂತು ಭಗವದ್ಧ್ಯಾನದಲ್ಲಿ ನಿರತವಾದ ಮನಸ್ಸಿನಿಂದ ಪ್ರಕಾಶಿತವಾಗುತ್ತದೆ. ಬುದ್ಧಿ, ಮನಸ್ಸು, ಇಂದ್ರಿಯ, ಇಂದ್ರಿಯವಿಷಯ ಗಳು ಇವೆಲ್ಲವುಗಳ ಸಾಧಾರಣ ಪರಿಣಾಮವಿರುವವರೆಗೂ ದೇಹಾಭಿಮಾನವು–ನಾನು–ನನ್ನದು ಎಂಬ ಸ್ಥೂಲಶರೀರದ ಸಂಬಂಧವು ಇದ್ದೇ ಇರುತ್ತದೆ. ನಿದ್ರಾ ಮೂರ್ಛಾ ಉಪತಾಪ1 ಮೃತ್ಯು ವೃದ್ಧಾವಸ್ಥೆ ಈ ಅವಸ್ಥೆಗಳಲ್ಲೆಲ್ಲಾ ಇಂದ್ರಿಯಗಳ ಮೂಲಕ ಅಹಂಕಾರಕ್ಕೆ ಆಧಾರವಾದ ವಸ್ತುವಿನ ಗ್ರಹಣವಾಗುವುದು. ಆಗ ಅಹಂಕಾರವು ಸ್ಫೂರ್ತಿಯಾಗುತ್ತದೆ. ನಿದ್ರಾದಿ ಅವಸ್ಥೆಗಳಲ್ಲಿಯೂ ಅಹಂಕಾರವು ಪೂರ್ತಿಯಾಗಿ ನಾಶವಾಗಿರುವುದಿಲ್ಲ. ಯೌವನದಲ್ಲಿ ಅಹಂಕಾರವು ಪುರುಷನ ಹನ್ನೊಂದು ಇಂದ್ರಿಯಗಳಲ್ಲಿಯೂ ಸ್ಪಷ್ಟರೂಪದಿಂದ ಕಾಣ ಬರುವುದು. ಬಾಲ್ಯದಲ್ಲಿಯೂ ಗರ್ಭದಲ್ಲಿಯೂ ಅಷ್ಟು ಸ್ಪಷ್ಟವಾಗಿರು ವುದಿಲ್ಲ. ಬಾಲ್ಯದಲ್ಲಿಯೂ ಗರ್ಭದಲ್ಲಿಯೂ ಸೂಕ್ಷ್ಮವಾಗಿ ಅಮಾವಾಸ್ಯೆಯ ಚಂದ್ರನಂತೆ ಅತ್ಯಂತಕ್ಷೀಣವಾಗಿ ಕಾಣಬರುವುದು. ಯೌವನ ದಲ್ಲಿ ಎಲ್ಲ ಇಂದ್ರಿಯಗಳೂ ಪೂರ್ಣಾವಸ್ಥೆಯನ್ನು ಹೊಂದಿರುವುವು. ಆದುದರಿಂದ ಅಹಂಕಾರಕ್ಕೆ ಆಧಾರವಾದುದು ಸ್ಥೂಲದೇಹವು. ಅದರ ವಿಯೋಗವಾದಾಗ ಸಮಸ್ತಇಂದ್ರಿಯವಿಷಯಗಳೂ ವಾಸ್ತವವಾಗಿ ಎದುರಿಗೆ ಇರದಿದ್ದರೂ ಸಂಸಾರದ ನಿವೃತ್ತಿಯಾಗುವುದಿಲ್ಲ. ವಿಷಯ

1 ಇಷ್ಟ ಮಿತ್ರರುಗಳ ವಿಯೋಗ.

ಗಳನ್ನು ಧ್ಯಾನಮಾಡುವ ಪುರುಷನಿಗೆ ಸ್ವಪ್ನದಲ್ಲಿ ಶರೀರವಿರುವಂತೆ ಪ್ರಕಾರಾಂತರದಿಂದ ಸಂಸಾರವು ಇದ್ದೇ ಇರುತ್ತದೆ. ಅಂದರೆ ಮನೋ ರೂಪ[illegible] ಶರೀರವು ಇರುವವರೆಗೂ ಸಂಸಾರನಿವೃತ್ತಿಯಾಗುವುದೇ [illegible] ಪಂಚತನ್ಮಾತ್ರರೂಪವಾದ* ತ್ರಿಗುಣ ಮತ್ತು ಷೋಡಶವಿಕಾರ ಗಳಿಂದ ವಿಸ್ತೃತವಾದ ಲಿಂಗಶರೀರವು ಈ ಚೇತನದಿಂದೊಡಗೂಡಿದರೆ (ಅಹಂಕಾರ) ಜೀವನೆನ್ನಿಸಿಕೊಳ್ಳುತ್ತದೆ. ಈ ಪುರುಷನು ಇದೇ ಲಿಂಗ ದೇಹದ ಮೂಲಕ ಸ್ಥೂಲದೇಹವನ್ನು ಗ್ರಹಣಮಾಡುತ್ತಾನೆ ಮತ್ತು ತ್ಯಾಗಮಾಡುತ್ತಾನೆ. ಇದೇ ಲಿಂಗಶರೀರದಿಂದಲೇ ಶೋಕ ಹರ್ಷ ಸುಖ ದುಃಖ ಭಯಗಳನ್ನು ಹೊಂದುತ್ತಾನೆ. ತೃಣಜಲೌಕಾ ಎಂಬ ಹುಳುವು ಎರಡನೆಯ ತೃಣವನ್ನು ಭದ್ರವಾಗಿ ಹಿಡಿಯುವ ವರೆಗೂ ಮೊದಲನೆಯ ತೃಣವನ್ನು ಬಿಡದಿರುವಂತೆ ಈ ಪುರುಷನು ಎಲ್ಲಿಯ ವರೆಗೆ ಹಿಂದಿನ ಶರೀರದಲ್ಲಿ ಆರಂಭಮಾಡಿದ ಕರ್ಮಗಳನ್ನು ಪೂರ್ತಿ ಮಾಡಿದಲ್ಲದೆ ಮತ್ತೊಂದು ದೇಹವನ್ನು ಅವಲಂಬನ ಮಾಡು ವು ದಿಲ್ಲವೋ ಅಲ್ಲಿಯವರೆಗೆ ಸ್ಥೂಲದೇಹವನ್ನು ತ್ಯಾಗಮಾಡಿದರೂ ಅದರ ಅಭಿಮಾನವನ್ನು ಬಿಡುವುದಿಲ್ಲ. ವಾಸ್ತವವಾಗಿ ತಿಳಿಯುವುದಾದರೆ ಮನಸ್ಸು ಜನ್ಮಮರಣಗಳಿಗೆ ಕಾರಣವಾಗಿದೆ. ಈ ಪುರುಷನು ಇಂದ್ರಿಯಗಳಿಂದ ಯಾವ ಯಾವ ವಿಷಯಗಳನ್ನು ಅ ನು ಭ ವಿ ಸು ತ್ತಾ ನೆ ಯೋ ಅವುಗಳನ್ನು ಧ್ಯಾನಮಾಡುತ್ತಲೇ ಪುನಃ ಪುನಃ ಕರ್ಮಗಳನ್ನು ಆರಂಭಮಾಡುತ್ತಾನೆ. ಕರ್ಮದಿಂದಲೇ ಅವಿದ್ಯೆಯು ಹುಟ್ಟುವುದು. ಅವಿದ್ಯೆಯಿಂದಲೇ ದೇಹಾದಿಗಳಿಗೆ ಕರ್ಮಪಾಶದ

---

*ಏವಂ ಪಂಚವಿಧಂ ಲಿಂಗಂ ತ್ರಿವೃತ್ ಷೋಡಶವಿಸ್ತೃತಮ್
ಏಷ ಚೇತನಯಾ ಯುಕ್ತೋ ಜೀವ ಇತ್ಯಭಿಧೀಯತೇ ||

ಬಂಧನವು ಬರುವುದು. ಆದುದರಿಂದ ಸಂಸಾರಕ್ಕೆ ಕಾರಣವಾದ ಅವಿದ್ಯೆಯನ್ನು ನಾಶಮಾಡುವುದಕ್ಕಾಗಿಯೇ ತನು ಮನ ಧನಗಳಿಂದ ಭಗವಂತನಾದ ಹರಿಯನ್ನು ಭಜನೆಮಾಡಬೇಕು. ಈ ಜಗತ್ತನ್ನು ಈಶ್ವರಮಯವಾಗಿ ನೋಡಬೇಕು. ಆ ಈಶ್ವರನೇ ವಿಶ್ವಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿದ್ದಾನೆ.'

## ಮೈತ್ರೇಯರು ಹೇಳುತ್ತಾರೆ.

ವತ್ಸ ವಿದುರ! ಹರಿಭಕ್ತಶಿರೋಮಣಿಯಾದ ನಾರದರು ಹೀಗೆ ಜೀವ ಮತ್ತು ಈಶ್ವರನ ಸ್ವರೂಪವನ್ನು ತಿಳಿಸಿಕೊಟ್ಟು ಪ್ರಾಚೀನ ಬರ್ಹಿರಾಜನಿಂದ ಬೀಳ್ಕೊಂಡು ಸಿದ್ಧಲೋಕಕ್ಕೆ ಹೊರಟುಹೋದರು. ರಾಜರ್ಷಿಯಾದ ಪ್ರಾಚೀನಬರ್ಹಿಯು ರಾಜ್ಯವನ್ನು ಮಕ್ಕಳಿಗೆ ವಹಿಸಿ ಕೊಟ್ಟು ಅಂದರೆ ಮಂತ್ರಿಗಳಿಗೆ "ನಾವು ಹೊರಟುಹೋಗುತ್ತೇವೆ. ನಮ್ಮ ಮಕ್ಕಳು ಹಿಂದಿರುಗಿ ಬಂದ ನಂತರ ರಾಜ್ಯಶಾಸನಮಾಡಬೇಕು ಎಂದು ಅವರಿಗೆ ತಿಳಿಸಿ" ಎಂದು ಹೇಳಿ ಮಂತ್ರಿಗಳ ವಶಕ್ಕೆ ಒಪ್ಪಿಸಿಕೊಟ್ಟು ತಪಸ್ಸುಮಾಡುವುದಕ್ಕಾಗಿ ಕಪಿಲಮಹರ್ಷಿಗಳ ಆಶ್ರಮಕ್ಕೆ ಹೊರಟುಹೋದರು. ಆ ಆಶ್ರಮದಲ್ಲಿ ನಿಸ್ಸಂಗನಾಗಿ ಏಕಾಗ್ರಮನಸ್ಸಿನಿಂದ ಭಗವಾನ್ ಗೋವಿಂದನ ಚರಣಕಮಲಗಳನ್ನು ಮನಸ್ಸಿಟ್ಟು ಧ್ಯಾನಿಸುತ್ತಾ ದೃಢಭಕ್ತಿಯ ಪ್ರಭಾವದಿಂದ ಅತಿಶೀಘ್ರ ದಲ್ಲಿಯೇ ಭಗವಂತನಲ್ಲಿ ಲೀನನಾದನು.

ವತ್ಸ ವಿದುರ! ದೇವರ್ಷಿ ನಾರದರು ಪುರಂಜನನ ರೂಪಕ

ದಿಂದ ಈ ಅಧ್ಯಾತ್ಮತತ್ತ್ವವನ್ನು ವರ್ಣನೆಮಾಡಿದ್ದಾರೆ. ಇದನ್ನು ಯಾರು ಕೇಳುವರೋ ಹೇಳುವರೋ ಅವರೆಲ್ಲರೂ ಲಿಂಗಶರೀರದಿಂದ ಬಿಡಲ್ಪಟ್ಟು ಮುಕ್ತರಾಗುವರು. ದೇವರ್ಷಿ ನಾರದರ ಮುಖದಿಂದ ಪ್ರಕಟವಾದ ಈ ಪುರಂಜನೋಪಾಖ್ಯಾನವು ಆತ್ಮವನ್ನು ನಿರ್ಮಲ ವನ್ನಾಗಿ ಮಾಡುವುದು. ಭಗವಾನ್ ಮುಕುಂದನ ಯಶಸ್ಸಿನ ಸಂಸರ್ಗವು ಇದಕ್ಕೆ ಇದೆ. ಆದುದರಿಂದ ಲೋಕತ್ರಯವನ್ನು ಪಾವನಮಾಡು ವುದು. ಇದನ್ನು ಯಾರು ಕೇಳುವರೋ ಅವರು ಸಂಸಾರಬಂಧನದಿಂದ ಮುಕ್ತರಾಗಿ ಬ್ರಹ್ಮಲೋಕವನ್ನು ಹೊಂದುತ್ತಾರೆ. ಅವರು ಸಂ ಸಾರಕ್ಕೆ ಮತ್ತೆ ಹಿಂದಿರುಗುವುದಿಲ್ಲ. ಪುರಂಜನನ ರೂಪಕದಿಂದ ನನಗೆ ದೊರೆತಿರುವ ಈ ಅದ್ಭುತ ಅಧ್ಯಾತ್ಮತತ್ವವನ್ನು ನಿನಗೆ ಹೇಳಿ ದ್ದೇನೆ. ಇದನ್ನು ಕೇಳುವುದರಿಂದಲೂ ಇದರ ಸ್ವರೂಪವನ್ನು ಚೆನ್ನಾಗಿ ತಿಳಿಯುವುದರಿಂದಲೂ ದೇಹಾಭಿಮಾನವು ದೂರವಾಗುವುದು. ಸತ್ತಮೇಲೆ ಕರ್ಮಭೋಗವನ್ನು ಮಾಡುವ ಸಂದೇಹವು ಉಳಿಯು ವುದಿಲ್ಲ.

**ವಿದುರ:—** ಹೇ ! ಬ್ರಹ್ಮನ್ ಪ್ರಾಚೀನಬರ್ಹಿರಾಜನ ಮಕ್ಕಳು ರುದ್ರಗೀತೆಯನ್ನು ಕೇಳಿದ ನಂತರ ಯಾವ ಸಿದ್ಧಿಯನ್ನು ಹೊಂದಿ ದರು ? ಅವರು ಭಗವಾನ್ ಶಂಕರನ ಅನುಗ್ರಹವನ್ನು ಹೊಂದಿದ ನಂತರ ಅವಶ್ಯವಾಗಿ ಮೋಕ್ಷವನ್ನು ಪಡೆದಿರಬೇಕು. ಅದಕ್ಕೆ ಮುಂಚೆ ಇಹಪರಲೋಕಗಳಲ್ಲಿ ಏನನ್ನು ಹೊಂದಿದರು ಎಂಬುದನ್ನು ತಿಳಿಯಲು ಅಪೇಕ್ಷಿಸುತ್ತೇನೆ.

**ಮೈತ್ರೇಯರು ಹೇಳುತ್ತಾರೆ:—**

ಪ್ರಚೇತರುಗಳು ತಮ್ಮ ತಂದೆಯ ಅಪ್ಪಣೆಯನ್ನು ಪಡೆದುಕೊಂಡು ಹೊರಟು ಸಮುದ್ರ ಮಧ್ಯದಲ್ಲಿ ರುದ್ರ ಗೀ ತೆ ಯ ಜಪ ತಪೋ ಯಜ್ಞಗಳಿಂದ ಶ್ರೀ ಹರಿಯನ್ನು ತೃಪ್ತಿಪಡಿಸಿದರು. ಹತ್ತು ಸಹಸ್ರ ವರ್ಷಗಳ ಸೇವಾನಂತರ ಭಗವಾನ್ ವಿಷ್ಣುವು ಪ್ರಕಟ ನಾಗಿ ತನ್ನ ಪ್ರಕಾಶದಿಂದ ತಪಸ್ಸಿನಿಂದುಂಟಾದ ಅವರ ಕ್ಲೇಶಗಳನ್ನು ದೂರಮಾಡಿದನು. ಗರುಡನ ಹೆಗಲಿನ ಮೇಲೆ ಕುಳಿತಿರುವ ಶ್ರೀ ಹರಿಯ ಶ್ಯಾಮಸುಂದರಮೂರ್ತಿಯು ಸುಮೇರು ಪರ್ವತದ ಮೇಲಿನ ಶ್ಯಾಮಮೇಘದಂತೆ ಕಾಣಿಸಿತು. ಆ ಮೂರ್ತಿಯು, ಕ ಂ ಠ ದ ಲ್ಲಿ ಕೌಸ್ತುಭಮಣಿಯನ್ನು ಧರಿಸಿ ದಿವ್ಯ ಪೀತಾಂಬರವನ್ನುಟ್ಟು ಪ್ರಕಟ ವಾದ ಆ ದಿವ್ಯ ಮೂರ್ತಿಯು ತನ್ನ ತೇಜಸ್ಸಿನಿಂದ ದಶದಿಕ್ಕುಗಳಿಂದ ಅಂಧಕಾರವನ್ನು ಹೋಗಲಾಡಿಸಿತು. ಥಳಥಳನೆ ಹೊಳೆಯುತ್ತಿರುವ ದಿವ್ಯ ಸುವರ್ಣಾಭರಣಗಳಿಂದ ಕಪೋಲಗಳು ಮತ್ತು ಮುಖವು ಅಪೂರ್ವ ಶೋಭೆಯನ್ನು ಬೀರುತ್ತಿತ್ತು. ಶಿರದಲ್ಲಿ ದಿವ್ಯಕಿರೀಟವು ಶೋಭಿಸುತ್ತಿತ್ತು. ಅಷ್ಟಭುಜಗಳಲ್ಲಿ ದಿವ್ಯ ಅಸ್ತ್ರ ಶಸ್ತ್ರಗಳು ಅಲಂ ಕೃತವಾಗಿದ್ದವು. ಅನುಚರರು ಸುರಶ್ರೇಷ್ಠರು ಮುನಿಗಳು ಆ ದಿವ್ಯ ಸುಂದರ ಮೂರ್ತಿಯನ್ನು ಸೇವೆಮಾಡುತ್ತಿದ್ದರು. ಗರುಡನು ಸ್ವತಃ ಕಿನ್ನರರೂಪವನ್ನು ಧಾರಣೆ ಮಾಡಿಕೊಂಡು ಆ ದೇವನ ಪವಿತ್ರ ಕೀರ್ತಿಯನ್ನು ಗಾನಮಾಡುತ್ತಿದ್ದನು. ಪರಮಾತ್ಮನ ಕಂಠದಲ್ಲಿ ವನಮಾಲೆಯು ಶೋಭಿಸುತ್ತಿತ್ತು. ಅಷ್ಟಭುಜಗಳ ಮಧ್ಯೆ ಲಕ್ಷ್ಮಿಯು ಕುಳಿತಿದ್ದಳು.

ಆ ಆದಿ ಪುರುಷನು ಈ ರೀತಿ ಪ್ರಕಟವಾಗಿ ದಯಾದೃಷ್ಟಿಯಿಂದ ಪ್ರಾಚೀನಬರ್ಹಿಯ ಪುತ್ರರನ್ನು ನೋಡುತ್ತಾ ಮೇಘದಂತೆ ಗಂಭೀರವಾದ ಧ್ವನಿಯಿಂದ ಹೇಳಿದನು.— "ಎಲೈ ರಾಜಕುಮಾರರೇ ! ನಿಮಗೆ ಕಲ್ಯಾಣವಾಗಲಿ, ನನ್ನಿಂದ ನಿಮಗೆ ಬೇಕಾದ ವರಗಳನ್ನು ಕೇಳಿಕೊಳ್ಳಿರಿ. ನಿಮ್ಮಲ್ಲಿ ಪರಸ್ಪರ ಪ್ರಗಾಢ ಪ್ರೇಮವಿದೆ. ನಿಮ್ಮ ಸ್ವಭಾವವೂ ಏಕಪ್ರಕಾರವಾಗಿದೆ. ಆದುದರಿಂದ ನಿಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಯಾವನೊಬ್ಬನು ನಿತ್ಯವೂ ಸಂಧ್ಯಾ ಸಮಯದಲ್ಲಿ ನಿಮ್ಮನ್ನು ಸ್ಮರಣೆಮಾಡುವನೋ ಅವನು ದೊಡ್ಡ ಭ್ರಾತೃವತ್ಸಲನಾಗುವನು. ಸಮಸ್ತ ಪ್ರಾಣಿಗಳಲ್ಲಿಯೂ ಮಿತ್ರಭಾವವನ್ನು ಹೊಂದುವನು. ಯಾರು ಪ್ರಾತಃಕಾಲ ಸಾಯಂಕಾಲಗಳಲ್ಲಿ ಏಕಾಗ್ರ ಚಿತ್ತದಿಂದ ರುದ್ರಗೀತೆಯಿಂದ ನನ್ನ ಸ್ತೋತ್ರ ಮಾಡುವರೋ ಅವರಿಗೆ ನಿರ್ಮಲ ಬುದ್ಧಿಯನ್ನು ಕೊಟ್ಟು ಅವರು ಇಷ್ಟಪಟ್ಟ ವರವನ್ನು ಕೊಡುವೆನು. ನೀವು ನಿಮ್ಮ ತಂದೆಯ ಆಜ್ಞೆಯನ್ನು ಸಂತೋಷದಿಂದ ಪಾಲಿಸಿದಿರಿ. ಆದುದರಿಂದ ನಿಮ್ಮ ಕೀರ್ತಿಯು ಮೂರು ಲೋಕಗಳಲ್ಲಿಯೂ, ಬೆಳಗಲಿ! ನಿಮಗೆ ಒಬ್ಬ ಬಹಳ ಪ್ರಸಿದ್ಧನಾದ ಪುತ್ರನು ಹುಟ್ಟುವನು. ಆ ನಿಮ್ಮ ಪುತ್ರನು ಗುಣದಲ್ಲಿ ಬ್ರಹ್ಮನಂತೆ ಇರುವನು. ಅವನ ವಂಶದಿಂದ ಮೂರು ಲೋಕಗಳು ತುಂಬುವುವು. ದೇವಾಧಿಪತಿಯಾದ ಇಂದ್ರನು ಕಂಡುಋಷಿಯ ತಪಸ್ಸಿಗೆ ವಿಘ್ನವನ್ನುಂಟುಮಾಡುವ ಉದ್ದೇಶ್ಯದಿಂದ ಪ್ರಮ್ಲೋಚಾ ಎಂಬ ಅಪ್ಸರ ಸ್ತ್ರೀಯನ್ನು ಕಳುಹಿಸಿದನು. ಆ ಅಪ್ಸರೆಯಲ್ಲಿ ಕಂಡುಋಷಿಯ ವೀರ್ಯದಿಂದ ಒಬ್ಬ ಕಮಲನಯನೆಯಾದ ಕನ್ಯೆಯು ಹುಟ್ಟಿದಳು. ಆ ಅಪ್ಸರೆಯು ಆ ಕನ್ಯೆಯನ್ನು ಬಿಟ್ಟು ಸ್ವರ್ಗಕ್ಕೆ ತೆರಳಿದಳು. ಆ ಕನ್ಯೆಯನ್ನು ವೃಕ್ಷಗಳು ರಕ್ಷಿ

ಸಿದವು. ಆ ಕನ್ಯೆಯು ಹಸಿವು ಬಾಯಾರಿಕೆಯಿಂದ ಅಳುತ್ತಿರಲು ಔಷಧಿಗಳಿಗೆ ರಾಜನಾದ ಚಂದ್ರನು ಕರುಣೆಯಿಂದ ತನ್ನ ಅಮೃತ ಮಯವಾದ ಕಿರುಬೆರುಳನ್ನು ಆ ಮಗುವಿನ ಬಾಯಿಯಲ್ಲಿ ಇಟ್ಟು ರಕ್ಷಿಸಿದನು. ನಿಮ್ಮ ತಂದೆಯು ನಿಮಗೆ ವಿಷ್ಣುವಿನ ಅನುಗ್ರಹವನ್ನು ಪಡೆದು ಪ್ರಜೆಗಳನ್ನು ಉತ್ಪನ್ನಮಾಡಿ ಎಂದು ಆಜ್ಞೆಮಾಡಿದ್ದ ನಲ್ಲವೆ? ಆದುದರಿಂದ ನೀವು ಆ ಸುಂದರಿಯನ್ನು ವಿವಾಹ ಮಾಡಿಕೊಳ್ಳಿ. ಸಾವಕಾಶ ಮಾಡಬೇಡಿ. ನೀವು ಹತ್ತು ಜನರೂ ಒಂದೇ ಶೀಲ, ಒಂದೇ ರೂಪ, ಒಂದೇ ನಾಮ, ಒಂದೇ ಧರ್ಮವುಳ್ಳವರಾದುದರಿಂದ ಈ ಕನ್ಯೆಯು ನಿಮ್ಮೆಲ್ಲರಿಗೂ ಪತ್ನಿಯಾಗಲಿ. ಈ ಕನ್ಯೆಯ ಸ್ವಭಾವವೂ ಧರ್ಮವೂ ನಿಮಗೆ ಯೋಗ್ಯವಾಗಿವೆ. ಇವಳು ತನ್ನ ಹೃದಯವನ್ನು ನಿಮಗೆ ಅರ್ಪಣಮಾಡುವಳು.

ನನ್ನ ಕೃಪೆಯಿಂದ ನಿಮ್ಮ ಪ್ರಭಾವವು ಕಮ್ಮಿಯಾಗುವುದಿಲ್ಲ. ನೀವು ಬಹುಕಾಲ–ಅನೇಕ ದಿವ್ಯ ಸಹಸ್ರ ವರ್ಷಗಳ ವರೆಗೆ ಭೂಮಿಯ ಭೋಗಗಳನ್ನು ಅನುಭವಿಸುವಿರಿ. ನಂತರ ನಿಮಗೆ ನನ್ನಲ್ಲಿ ಭಕ್ತಿಯು ವೃದ್ಧಿಯಾಗುವುದು. ಕಾಮಕ್ರೋಧಗಳಿಂದ ಬಿಡಲ್ಪಡುವಿರಿ. ನಿಮ್ಮ ಕಾಮನೆಗಳೆಲ್ಲಾ ಪೂರ್ತಿಯಾಗುವುವು. ಆಗ ಈ ನರಕ ತುಲ್ಯ ಸಂಸಾರ ಭೋಗದಿಂದ ವಿರಕ್ತರಾಗಿ ನನ್ನ ಪರಮ ಧಾಮವನ್ನು ಹೊಂದುವಿರಿ. ರಾಜಕುಮಾರರೇ! ಯಾರು ಗ್ರಹಸ್ಥಾಶ್ರಮದಲ್ಲಿದ್ದು ಕೊಂಡು ಸತ್ಕರ್ಮಗಳನ್ನು ಮಾಡುತ್ತಾ ನನ್ನ ಚರ್ಚೆಯಲ್ಲಿ, ಧ್ಯಾನದಲ್ಲಿ, ದಿವ್ಯಚರಿತ್ರೆಯ ಕಥನದಲ್ಲಿ ಹಗಲು ರಾತ್ರಿಗಳನ್ನು ಕಳೆಯುವರೋ ಅವರಿಗೆ ಸಂಸಾರವು ಬಂಧನಕಾರಣವಾಗುವುದಿಲ್ಲ. ನನ್ನ ಕಥೆ ಗಳನ್ನು ಕೇಳುವುದರಿಂದ, ಆ ನನ್ನ ಕಥೆಗಳನ್ನು ಕೀರ್ತನೆ-ಮಾಡುವ

ಬ್ರಹ್ಮಜ್ಞಾನಿಗಳ ಮೂಲಕ ನಿನ್ನ ಕಥೆಗಳನ್ನು ಕೇಳುವವರ ಹೃದಯದಲ್ಲಿ ನಾನೇ ಸ್ವಯಂ ಪ್ರಕಟನಾಗುತ್ತೇನೆ. ಆಗ ನನ್ನ ಕಥೆಗಳು ಹೊಸ ಹೊಸದಾಗಿಯೇ ಅನುಭವಕ್ಕೆ ಬರುತ್ತವೆ. ನಾನೇ ಪರಬ್ರಹ್ಮನು. ನನ್ನನ್ನು ಹೊಂದಿದವರು ಪುನಃ ಶೋಕ, ಮೋಹ, ಮದಾದಿಗಳ ವಶನಾಗ ಬೇಕಾಗಿಲ್ಲ."

ಪುರುಷಾರ್ಥ ಪ್ರದನಾದ ಶ್ರೀ ಹರಿಯು ಹೀಗೆ ಹೇಳುತ್ತಲೇ ಆ ಪ್ರಚೇತಸರು ಕೈಗಳನ್ನು ಜೋಡಿಸಿಕೊಂಡು ಗದ್ಗದ ಸ್ವರದಿಂದ ಪರಮಾತ್ಮನನ್ನು ಸ್ತೋತ್ರ ಮಾಡಲಾರಂಭಿಸಿದರು.—

"ಕ್ಲೇಶನಾಶಕನಾದ ಶ್ರೀಹರಿಯೇ, ನಿನ್ನನ್ನು ವಂದಿಸುತ್ತೇವೆ. ಎಲ್ಲಾ ವೇದಗಳೂ, ನಿನ್ನ ಉದಾರ ಗುಣವು, ದಿವ್ಯ ನಾಮಗಳೂ ಸಮಸ್ತ ವಿಷಯಗಳ (ಸುಖಗಳ) ಸಾಧನೆ ಎಂದು ಹೇಳುತ್ತಾರೆ ದೇವಾ ! ನೀನು ವಾಕ್ಕಿಗೂ, ಮನಸ್ಸಿಗೂ ಅತೀತನು. ಇಂದ್ರಿಯಗಳ ಮೂಲಕ ನಿನ್ನನ್ನು ಗುರ್ತಿಸುವುದು ಅಸಂಭವವು. ನಾಥಾ ! ನೀನು ಸದಾ ಸರ್ವದಾ ನಿನ್ನ ಆನಂದಮಯ ಸ್ಥಿತಿಯಲ್ಲಿ ರಮಮಾಣ ಮಾಡುತ್ತಿರುವುದರಿಂದ ನೀನು ಶುದ್ಧನು, ಶಾಂತನು. ನಮ್ಮ ಮನಸ್ಸಿನ ಮೋಹದಿಂದ ನಿನ್ನಲ್ಲಿ ದ್ವೈತಭಾವವು ಕಾಣ ಬರುವುದು. ವಾಸ್ತವವಾಗಿ ನೀನೇ ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶಗಳಿಗಾಗಿ ಮಾಯೆಯ ಗುಣಗಳಿಂದ ಬ್ರಹ್ಮಾದಿ ಮೂರ್ತಿಗಳನ್ನೂ ಧಾರಣೆಮಾಡಿರುವೆ. ನಿನಗೆ ನಮಸ್ಕಾರ. ಪ್ರಭೋ ! ನೀನು ಶುದ್ಧ ಸತ್ವಮಯನು, ಶಕ್ತಿಮಯನು ನಿನ್ನನ್ನು ತಿಳಿಯುವುದರಿಂದ ಸಂಸಾರ ಬಂಧನವು ಕತ್ತರಿಸಿ ಹೋಗುವುದು. ನಿನಗೆ ಪ್ರಣಾಮ

ಗಳು. ನೀನೇ ಹರಿಯು, ವಾಸುದೇವನು. ಶ್ರೀ ಕೃಷ್ಣನು. ಭಕ್ತ ವತ್ಸಲನು. ನಿನಗೆ ನಮಸ್ಕಾರವು. ನಿನ್ನ ನಾಭಿಯಿಂದ ವಿಶ್ವರೂಪ ಕಮಲವು ಉತ್ಪನ್ನವಾಯಿತು. ನಿನ್ನ ಚರಣವೂ ಕಮಲಕ್ಕೆ ಸಮಾನ ವಾಗಿ ಅರುಣ ವರ್ಣವಾಗಿದೆ, ಕೋಮಲವಾಗಿದೆ. ನೀನು ಕಮಲಗಳ ಮಾಲೆಯನ್ನು ಧರಿಸಿರುವೆ. ಹೇ ಕಮಲಲೋಚನ! ನಿನಗೆ ನಮಸ್ಕಾರವು. ನಿನ್ನ ಪೀತಾಂಬರವು ಪದ್ಮರಾಗಕ್ಕೆ ಸಮಾನವಾಗಿ ಪೀತವರ್ಣ ವಾಗಿದೆ. ನೀನು ಸಮಸ್ತ ಜೀವರುಗಳ ಆವಾಸಸ್ಥಾನವಾಗಿರುವೆ. ಸಮಸ್ತ ಕರ್ಮಗಳಿಗೂ ಸಾಕ್ಷಿಯಾಗಿರುವೆ. ನಿನ್ನನ್ನು ವಂದಿಸುವೆವು. ನಿನ್ನ ಮಂಗಳಮಯ ರೂಪವನ್ನು ದರ್ಶನಮಾಡುವುದರಿಂದ ಸಮಸ್ತ ಕ್ಲೇಶಗಳೂ ನಾಶವಾಗುವುವು. ನಮ್ಮ ಕ್ಲೇಶಗಳನ್ನು ನಾಶಮಾಡು ವುದಕ್ಕಾಗಿಯೇ ನೀನು ಈ ಮನೋಹರ ರೂಪದಿಂದ ದರ್ಶನ ಕೊಟ್ಟಿ ರುವೆ. ಇದಕ್ಕಿಂತಲೂ ಹೆಚ್ಚಿನ ಕೃಪೆಯು ಇದೆಯೇ ? ಹೇ ಅಮಂಗಲ ನಾಶಕನೇ ! ಹೇ ನಾಥ ! "ಇದು ನಮ್ಮದು" ಎಂದು ವಿಚಾರಮಾಡು ವುದರಿಂದಲೇ ಸೇವಕರಿಗೆ ಸಂತೋಷವಾಗುವುದು. ಹೇ ಪ್ರಭೋ ! ನೀನು ಸರ್ವಾಂತರ್ಯಾಮಿಯು ನಾವು ನಿನ್ನ ಉಪಾಸಕರು. ನಾವು ನಿನ್ನನ್ನು ಇಚ್ಛಿಸುವೆವು ಎಂಬುದು ನಿನಗೆ ತಿಳಿಯದೇ ? ಹೇ ದೇವಾ ! ನಮಗೆ ಬೇಕಾದುದು ನಿನ್ನ ಅನುಗ್ರಹ ಮಾತ್ರ. ಹೇ ವಿಶ್ವನಾಥ ! ಸಾಕ್ಷಾತ್ ಮೋಕ್ಷದಾಯಕನಾದ ನೀನು ನಮ್ಮ ಮೇಲೆ ಅನುಗ್ರಹಮಾಡಿದಮೇಲೆ ನಮಗಿನ್ನೇನು ಬೇಕು ? ನಮಗೆ ನಿನ್ನ ದಯೆಯು ಒಂದೇ ಬೇಕಾದುದು. ಪ್ರಭೋ ! ನೀನು ಪರಮ ಪರಮೇಶ್ವರನು. ಸಮಸ್ತ ಅಭೀಷ್ಟಗಳನ್ನು ಕೊಡುವವನು. ನಿನ್ನ ವಿಭೂತಿಗಳಿಗೆ ಕೊನೆ ಮೊದಲಿಲ್ಲ. ಆದುದರಿಂದ ನಿನ್ನನ್ನು ಅನಂತ ನೆನ್ನುವರು. ನೀನು ಅಪ್ಪಣೆಕೊಟ್ಟುದರಿಂದ ನಾವು ಈಗ ಒಂದು

ವರವನ್ನು ಕೇಳುತ್ತೇವೆ. ಭ್ರಮರಕ್ಕೆ ಅನಾಯಾಸವಾಗಿ ಕಲ್ಪವೃಕ್ಷವು ಸಿಕ್ಕಿದಮೇಲೆ ಇತರ ವೃಕ್ಷಗಳ ಸಮೀಪಕ್ಕೆ ಹೋಗಲು ಇಚ್ಛಿಸುವುದಿಲ್ಲ. ಹಾಗೆಯೇ ನಾವೂ ಸಹ ಸಮಸ್ತ ಕಾಮನೆಗಳನ್ನು ಪೂರ್ಣಮಾಡುವ ನಿನ್ನ ಚರಣಕಮಲಗಳ ಆಶ್ರಯವನ್ನು ಹೊಂದಿದಮೇಲೆ ಮತ್ತೇನನ್ನೂ ಅಪೇಕ್ಷಿಸೆವು. ಎಲ್ಲಿಯವರೆಗೆ ಕರ್ಮವಶವಾದ ಈ ಸಂಸಾರದಲ್ಲಿ ಮಾಯೆಯಿಂದ ಬಂಧಿಸಲ್ಪಟ್ಟು ತಿರುಗುತ್ತಿರುವೆವೋ ಅಲ್ಲಿಯವರೆಗೆ ಪ್ರತಿಯೊಂದು ಜನ್ಮದಲ್ಲಿಯೂ ನಿನ್ನ ಅನುಚರರಾದ ಭಕ್ತರ ಸಂಗವನ್ನು ದಯಪಾಲಿಸಬೇಕು. ಎಂಬುದೇ ನಾವು ಕೇಳುತ್ತಿರುವ ವರವು. ಭಗವನ್ ! ಸ್ವರ್ಗ ಮತ್ತು ಮೋಕ್ಷಗಳು ನಿನ್ನ ಭಕ್ತರ ಸಂಗಕ್ಕೆ ಸಮಾನವಾಗುವುದಂತೂ ಇರಲಿ. ಅದರ ಒಂದು ಕಣಕ್ಕೆ–ಲೇಶಾಂಶಕ್ಕೆ ಸಮಾನವಾಗಲಾರವು. ಜಗತ್ತಿನ ವೈಭವಗಳು ಇದಕ್ಕೆ ಸರಿದೂಗಬಲ್ಲವೇ ? ನಿನ್ನ ಭಕ್ತರ ಸಂಗದಲ್ಲಿ ವಿಷಯ ವಾಸನೆಯನ್ನು ನಷ್ಟಮಾಡುವ ನಿನ್ನ ಚರಿತ್ರೆಗಳ ವಿಚಾರವು– ಚರ್ಚೆಯು ಇರುವುದು. ಯಾರೂ ಮತ್ತೊಬ್ಬರೊಡನೆ ದ್ವೇಷ ಮಾಡುವುದಿಲ್ಲ.ಅಲ್ಲಿ ಯಾವಪ್ರಕಾರದ ಚಿಂತೆಯೂ ಇರುವುದಿಲ್ಲ, ಭಯವೂ ಇರುವುದಿಲ್ಲ. ಸಂಗರಹಿತರಾದ ಆ ಸಜ್ಜನರು ಸಂಸಾರದಿಂದ ವಿರಕ್ತರಾದವರಿಗೆ ಏಕಮಾತ್ರ ಗತಿಯಾಗಿದ್ದಾರೆ. ಅವರು ಸಾಕ್ಷಾತ್ ನಾರಾಯಣನ ಯಶಸ್ಸನ್ನು, ಮಹಿಮೆಯನ್ನು ಬಾರಿಬಾರಿಗೂ ವರ್ಣನೆ ಮಾಡುತ್ತಿರುತ್ತಾರೆ, ಸಂಸಾರದ ದುಃಖಗಳಿಂದ ಭೀತನಾದ ಯಾವನು ತಾನೇ ಸತ್ಸಂಗಕ್ಕೆ ಆಶೆಪಡುವುದಿಲ್ಲ ? ಹೇ ಪ್ರಭೋ ! ನಿನ್ನ ಭಕ್ತರಾದ ಸಜ್ಜನರು ತಮ್ಮ ಚರಣ ರಜಸ್ಸಿನಿಂದ ಪೃಥ್ವಿಯನ್ನು ಪವಿತ್ರಗೊಳಿಸುತ್ತಾ ಸಂಚರಿಸುತ್ತಿರುವರು. ಸಾಕ್ಷಾತ್ ತೀರ್ಥ ಸ್ವರೂಪತೇ

ಆಗಿರುವರು. ಭಗವನ್ ! ನಾವು ಸತ್ಸಂಗದ ಫಲವನ್ನು ಅನುಭವಿಸಿದ್ದೇವೆ. ನಿನ್ನ ಪ್ರಿಯಮಿತ್ರ ಭಗವಾನ್ ಶಂಕರನ ಒಂದು ಕ್ಷಣ ಮಾತ್ರದ ಸಂಗದಿಂದ ನಮಗೆ ನಿನ್ನ ದರ್ಶನ ಲಾಭವಾಯಿತು. ಜನ್ಮ ಮರಣರೂಪ ರೋಗಕ್ಕೆ ಚಿಕಿತ್ಸೆಯು ಬಲು ಕಷ್ಟಕರವಾದುದು. ಅಂತಹ ರೋಗಕ್ಕೆ ನೀನೇ ವೈದ್ಯನು. ಭವರೋಗ ವೈದ್ಯನು. ನೀನು ಗತಿಹೀನರಿಗೆ ಗತಿಸ್ವರೂಪನು. ಪ್ರಭೋ ! ನಾವು ಮನಸ್ಸಿಟ್ಟು ಯಾವ ವೇದಪಾಠ ಮಾಡಿದ್ದೇವೆಯೋ ಗೋಬ್ರಾಹ್ಮಣ ಗುರುಗಳ ಸೇವೆಮಾಡಿ ಅವರ ಅನುಗ್ರಹವನ್ನು ಸಂಪಾದಿಸಿರುವೆವೋ ದೊಡ್ಡವರ ಸ್ನೇಹವನ್ನು ಮತ್ತು ಹಿರಿಯರಿಗೆ ಪ್ರಣಾಮವನ್ನು ಮಾಡಿರುವೆವೋ, ಅನ್ನಾಹಾರಗಳಿಲ್ಲದೆ ಜಲ ಮಧ್ಯದಲ್ಲಿ ಯಾವ ಘೋರ ತಪಸ್ಸನ್ನು ಆಚರಿಸಿರುವೆವೋ ಅದೆಲ್ಲವನ್ನೂ ನಿನ್ನ ತೃಪ್ತಿಗಾಗಿ ನಿನಗೆ ಅರ್ಪಣೆಮಾಡುತ್ತೇವೆ. ದೇವ ! ನೀನು ಪರಮ ಪುರುಷನು. ನಿನ್ನ ಸಂತೋಷವೇ ನಮಗೆ ಪರಮಾನುಗ್ರಹವು. ಹೇ ಹರಿಯೇ ! ಮನುಗಳು, ಬ್ರಹ್ಮನು, ಶಂಕರನು ತಪೋಜ್ಞಾನಗಳಿಂದ ಚಿತ್ತಶುದ್ಧಿಯನ್ನು ಹೊಂದಿದ ಯೋಗಿಗಳು, ಇವರೆಲ್ಲರೂ ನಿನ್ನ ಮಹಿಮೆಯ ಪಾರವನ್ನು ತಿಳಿಯಲಾರದೆ ತಂತಮ್ಮ ಶಕ್ತ್ಯನುಸಾರ ನಿನ್ನನ್ನು ಸ್ತೋತ್ರ ಮಾಡುತ್ತಿರುವಾಗ ನಮ್ಮಂತಹ ಅಜ್ಞಾನಿಗಳು ನಮ್ಮ ಬುದ್ಧಿಗೆ ಅನುಸಾರವಾಗಿ ನಿನ್ನನ್ನು ಸ್ತುತಿಸಿದರೆ ಅದು ತಪ್ಪಾಗಲಾರದು. ಪ್ರಭೋ ! ನೀನು ಸರ್ವಸಮನು, ವಿಶುದ್ಧನಾದ ಪರಮ ಪುರುಷನು. ಸತ್ವ ಮೂರ್ತಿಯಾದ ವಾಸುದೇವನು ನಿನ್ನನ್ನು ನಮಸ್ಕರಿಸುವೆವು."

ಬಂದು ಮುಂತಾಗಿ ಪ್ರಾಚೀನಬರ್ಹಿಯ ಪುತ್ರರಾದ ಪ್ರಚೇತಸರು

ಸ್ತೋತ್ರ ಮಾಡಲು ಭಕ್ತವತ್ಸಲನಾದ ಭಗವಂತನು ಪ್ರಸನ್ನನಾಗಿ "ಮಕ್ಕಳೇ ! ನೀವು ಅಪೇಕ್ಷಿಸಿದ ಸತ್ಸಂಗವು ನಿಮಗೆ ದೊರಕಲಿ" ಎಂದು ಅನುಗ್ರಹಿಸಿ ತನ್ನ ಪರಮಧಾಮಕ್ಕೆ ತೆರಳಿದನು. ಆ ಪ್ರಚೇತರು ಬಾರಿಬಾರಿಗೂ ಹರಿಯನ್ನು ನೋಡುತ್ತಿದ್ದರೂ ಅವರಿಗೆ ತೃಪ್ತಿಯಾಗಲಿಲ್ಲ.

ಶ್ರೀ ಹರಿ ಪರಮಾತ್ಮನು ಹೊರಟುಹೋದ ನಂತರ ಆ ಪ್ರಚೇತರು ಸಮುದ್ರ ಮಧ್ಯದಿಂದ ಎದ್ದು ಹೊರಗೆ ಬಂದರು. ಭೂಮಿಯನ್ನೆಲ್ಲಾ ವೃಕ್ಷಗಳು ಆವರಿಸಿದ್ದವು. ಭೂಮ್ಯಾಕಾಶಗಳು ಒಂದಾಗುವಂತೆ ವೃಕ್ಷಗಳು ಎತ್ತರವಾಗಿ ಬೆಳೆದಿದ್ದವು. ಇದನ್ನು ನೋಡುತ್ತಲೇ ಪ್ರಚೇತರಿಗೆ ಕೋಪವು ಬಂದಿತು. ಮರಗಳನ್ನೂ ಲತೆಗಳನ್ನೂ ಸುಟ್ಟುಬಿಡಬೇಕೆಂಬ ಅಭಿಪ್ರಾಯದಿಂದವರು ನೋಡಲು ಅವರ ಕೋಪದಿಂದ ಕಾಲಾಗ್ನಿಯಂತಹ ಭಯಾನಕ ಅಗ್ನಿಯೂ ವಾಯುವೂ ಹೊರಹೊರಟವು. ಆ ಅಗ್ನಿಯಿಂದ ಭೂಮಿಯಲ್ಲಿನ ವೃಕ್ಷಗಳು ಸುಟ್ಟು ಭಸ್ಮವಾಗುತ್ತಿರುವುದನ್ನು ನೋಡಿ ಬ್ರಹ್ಮನು ಅಲ್ಲಿಗೆ ಬಂದು ಯುಕ್ತಿಯುಕ್ತ ವಚನಗಳಿಂದ ಅವರ ಕ್ರೋಧವನ್ನು ಶಾಂತಗೊಳಿಸಿದನು. ಸುಡದೆ ಉಳಿದಿದ್ದ ವೃಕ್ಷಗಳು ಭಯಭೀತರಾಗಿ ಬ್ರಹ್ಮನ ಅಪ್ಪಣೆಯಂತೆ ತಮ್ಮಲ್ಲಿಟ್ಟುಕೊಂಡಿದ್ದ ಕಂಡು ಋಷಿಯ ವೀರ್ಯದಿಂದುತ್ಪನ್ನವಾದ ಆ ಕನ್ಯೆಯನ್ನು ಅವರಿಗೆ ಒಪ್ಪಿಸಿದು.ವು

ಆ ಕನ್ಯೆಯ ಹೆಸರು ಮಾರಿಷಾ ಎಂದು. ಬ್ರಹ್ಮನ ಆಜ್ಞೆಯಂತೆ ಆ ಪ್ರಚೇತರು ಆ ಕನ್ಯೆಯನ್ನು ವಿವಾಹವಾದರು. ಆಕೆಯ

ಗರ್ಭದಲ್ಲಿ ಅವರಿಗೆ ದಕ್ಷ ಎಂಬ ಪುತ್ರನು ಹುಟ್ಟಿದನು. ಶಂಕರನನ್ನು ಯಜ್ಞದಲ್ಲಿ ನಿರಾದರ ಮಾಡಿದ ಅಪರಾಧದಿಂದ ಬ್ರಹ್ಮಪುತ್ರನಾದ ದಕ್ಷನೇ ಕ್ಷತ್ರಿಯ ಜನ್ಮವನ್ನು ಹೊಂದಿ ಬಂದವನು. ಚಾಕ್ಷುಷ ಮನ್ವಂತರವು ಹುಟ್ಟಿದ ನಂತರ ಕಾಲವಶದಿಂದ ಪೂರ್ವ ದೇಹವು ನಷ್ಟವಾಗಿ ಈಶ್ವರನ ಆಜ್ಞೆಯಂತೆ ಪ್ರಜಾಸೃಷ್ಟಿಯನ್ನು ಮಾಡಿದನು. ಈತನು ಹುಟ್ಟುತ್ತಿರುವಂತೆಯೇ ತನ್ನ ತೇಜಸ್ಸಿನಿಂದ ಇತರರ ತೇಜಸ್ಸನ್ನು ಹಿಂದೆ ಹಾಕಿ, ತನ್ನ ತೇಜಸ್ಸಿನಿಂದ ಬೆಳಗಿದನು. ಎಲ್ಲಾ ಕಾರ್ಯಗಳಲ್ಲಿಯೂ ಚತುರನಾದುದರಿಂದ ದಕ್ಷ ಎಂಬ ಹೆಸರು ಬಂದಿತು. ಪ್ರಜಾಸೃಷ್ಟಿಯನ್ನು ಮುಂದುವರಿಸಲು ಬ್ರಹ್ಮನು ಈ ದಕ್ಷನಿಗೆ ಪ್ರಜಾಪತಿಯ ಪಟ್ಟವನ್ನು ಕಟ್ಟಿದನು. ದಕ್ಷನು ಮರೀಚಿ ಆದಿ ಉಳಿದ ಪ್ರಜಾಪತಿಗಳನ್ನು ತಮ್ಮ ತಮ್ಮ ಕಾರ್ಯದಲ್ಲಿ ನಿಯುಕ್ತರಾಗುವಂತೆ ನಿಯಮಿಸಿದನು.

ದಿವ್ಯ ಸಹಸ್ರವರ್ಷಗಳು ರಾಜ್ಯಭಾರದಲ್ಲಿ ಕಳೆದ ನಂತರ ಪ್ರಚೇತರಿಗೆ ದಿವ್ಯ ಜ್ಞಾನವು ಉತ್ಪನ್ನವಾಯಿತು. "ದಿವ್ಯ ಸಹಸ್ರ ವರ್ಷಗಳ ನಂತರ ನೀವು ನನ್ನ ಪರಮ ಧಾಮಕ್ಕೆ ಬರುತ್ತೀರಿ" ಎಂದು ಪರಮಾತ್ಮನು ಹೇಳಿದುದು ಅವರಿಗೆ ಸ್ಮರಣೆಗೆ ಬಂದಿತು. ತಮ್ಮ ಪತ್ನಿಯ ರಕ್ಷಣೆಯನ್ನು ಮಗನ ವಶಕ್ಕೆ ಒಪ್ಪಿಸಿ ಸಂನ್ಯಾಸ ಗ್ರಹಣೆಮಾಡಿ ಮನೆಯನ್ನು ಬಿಟ್ಟರು. ಪಶ್ಚಿಮ ದಿಕ್ಕಿನಲ್ಲಿ ಸಮುದ್ರ ತಟವನ್ನು ಸೇರಿ ಜಾಜಲಿ ಎಂಬ ಋಷಿಯು ತಪಸ್ಸು ಮಾಡಿ ಸಿದ್ಧಿಯನ್ನು ಪಡೆದ ಸ್ಥಾನದಲ್ಲಿ ಬ್ರಹ್ಮಯಜ್ಞವನ್ನು—ಯಾವುದರಿಂದ ಜಗತ್ತು ಬ್ರಹ್ಮಮಯವಾಗಿ ಕಾಣ ಬರುವುದೋ ಆ ಸಾಧನೆಯನ್ನು ಅನುಷ್ಠಾನ ಮಾಡಿದರು ಪ್ರಾಣಮನವಾಣಿಗಳನ್ನು ಹದ್ದಿಗೆ ತಂದು

ಬಾಹ್ಯವಿಷಯಗಳಲ್ಲಿ ಆಸಕ್ತವಾದ ದೃಷ್ಟಿಯನ್ನು ಹಿಂದಿರುಗಿಸಿ ಆಸನವನ್ನು ಸ್ಥಿರ ಮಾಡಿದರು. ವಿಷಯಗಳಿಂದ ನಿವೃತ್ತವಾದ ನಿರ್ಮಲ ಚಿತ್ತವನ್ನು ನಿರಾಕಾರ ಬ್ರಹ್ಮನಲ್ಲಿ ನಿಲ್ಲಿಸಿದರು. ಶರೀರವನ್ನು ನೆಟ್ಟಗೆ ನಿಲ್ಲಿಸಿ ಧ್ಯಾನಕ್ಕೆ ಕುಳಿತರು. ಅಷ್ಟುಹೊತ್ತಿಗೆ ಸರಿಯಾಗಿ ದೇವದಾನವ ಪೂಜಿತರಾದ ನಾರದಋಷಿಗಳು ಅಲ್ಲಿಗೆ ಬಂದರು. ಅವರು ಬರುತ್ತಿದ್ದಂತೆಯೇ ಆ ಪ್ರಚೇತರು ಎದ್ದುನಿಂತು ಪ್ರಣಾಮ ಮಾಡಿ ಅಭಿನಂದನ ಪೂರ್ವಕ ಯಥಾಯೋಗ್ಯವಾಗಿ ಪೂಜಿಸಿದರು. ನಾರದರು ಸುಖಪೂರ್ವಕವಾಗಿ ಆಸನದಲ್ಲಿ ಕುಳಿತನಂತರ ಪ್ರಚೇತರು ಅವರಲ್ಲಿ ಪ್ರಾರ್ಥಿಸಿದರು.

"ಹೇ ಭಗವನ್ ! ತಮ್ಮ ಆಗಮನದಿಂದ ನಾವು ಧನ್ಯರಾದೆವು. ಸೂರ್ಯನಂತೆ ಜಗತ್ತಿನ ಜೀವರಾಶಿಗಳಿಗೆ ಜ್ಞಾನಪ್ರದಾನ ಮಾಡುವುದಕ್ಕಾಗಿಯೆ ನೀವು ಭೂಮಿಯಲ್ಲಿ ಸಂಚರಿಸುತ್ತಿರುವಿರಿ. ಭಗವಾನ್ ಶಂಕರನಿಂದ, ಮಹಾವಿಷ್ಣುವಿನಿಂದ ಉಪದೇಶ ಮಾಡಲ್ಪಟ್ಟ ಜ್ಞಾನವು ಗೃಹಸ್ಥಾಶ್ರಮದಲ್ಲಿ ಆಸಕ್ತರಾಗಿದ್ದುದರಿಂದ ಮರೆತುಹೋಗಿದೆ. ಯಾವ ಜ್ಞಾನದಿಂದ ದುಸ್ತರವಾದ ಸಂಸಾರ ಸಾಗರದಿಂದ ನಾವು ಪಾರಾಗುವೆವೋ ಆ ತತ್ವಜ್ಞಾನವನ್ನು ನಮಗೆ ಉಪದೇಶಮಾಡಿ ಅನುಗ್ರಹಿಸಬೇಕು."

ನಾರದರು ಸ್ವಲ್ಪಹೊತ್ತು ಧ್ಯಾನಮಗ್ನರಾಗಿದ್ದು ನಂತರ ಹೇಳಿದರು.

"ಎಲೈ ಪ್ರಚೇತರೆ ! ವಿಶ್ವರೂಪನಾದ ಶ್ರೀಹರಿಯ ಸೇವೆ ಮಾಡುವುದರಿಂದಲೇ ಮನುಷ್ಯನ ಜನ್ಮ, ಕರ್ಮ, ಆಯು, ಮನಸ್ಸು,

ವಚನಗಳು ಸಾರ್ಥಕ ಹೊಂದುವುವು. ಮನುಷ್ಯನ (1)ಮೂರು ಜನ್ಮಗಳು ಹರಿಸೇವೆ ಮಾಡದಿದ್ದರೆ ನಿಷ್ಫಲವಾಗುವುವು. ಹರಿ ಚರ್ಚೆಯಿಲ್ಲದೆ ಸಂಪೂರ್ಣ ವೇದೋಕ್ತ ಕರ್ಮಗಳನ್ನು ಮಾಡಿದುದರಿಂದಾಗಲಿ ದೇವತೆಗಳಂತೆ ಅಪರಿಮಿತ ಆಯುಸ್ಸನ್ನು ಪಡೆದುದರಿಂದಾಗಲಿ ಉಪಯೋಗವಿಲ್ಲ. ಹಾಗೆಯೇ ಹರಿಚರ್ಚೆಯಿಲ್ಲದೆ ವೇದಪಾರಾಯಣದಿಂದಾಗಲೀ ತಪಸ್ಸಿನಿಂದಾಗಲೀ ವಾಕ್ಚಾತುರ್ಯದಿಂದಾಗಲೀ ಚಾತುರ್ಯ, ಸೂಕ್ಷ್ಮ ಬುದ್ಧಿ, ಬಲ, ಇಂದ್ರಿಯ ಶಕ್ತಿಗಳಿಂದಾಗಲೀ ಪ್ರಯೋಜನವಿಲ್ಲ. ಎಲ್ಲಿ ಆತ್ಮಶಾಂತಿದಾಯಕನಾದ ಶ್ರೀಹರಿಯು ಇಲ್ಲವೋ ಅಂತಹ ಯೋಗ ಸಾಂಖ್ಯ ಸ್ವಾಧ್ಯಾಯ ಸಂನ್ಯಾಸಗಳು ಯಾವ ಲಾಭವನ್ನು ಕೊಡಬಲ್ಲವು ? ಜಗತ್ತಿನಲ್ಲಿನ ಪ್ರಿಯವಸ್ತುಗಳಲ್ಲೆಲ್ಲಾ ಆತ್ಮವೇ ಪ್ರಧಾನ ಪ್ರಿಯವು. ಹರಿಯು ಎಲ್ಲರ ಹೃದಯದಲ್ಲಿಯೂ ಆತ್ಮಸ್ವರೂಪದಿಂದ ನಿಂತಿದ್ದಾನೆ. ಆತನಿಗಿಂತ ಪ್ರಿಯವಾದುದು ಜಗತ್ತಿನಲ್ಲಿ ಯಾವುದಿದೆ ? ಮರದ ಬೇರಿಗೆ ನೀರೆರೆದರೆ ಅದರ ಶಾಖೋಪಶಾಖೆಗಳಿಗೆಲ್ಲಾ ಜಲಸೇಚನವಾಗುವಂತೆ, ಭೋಜನಮಾಡಿದರೆ ಸಮಸ್ತ ಇಂದ್ರಿಯಗಳಿಗೂ ತೃಪ್ತಿಯಾಗುವಂತೆ, ಶ್ರೀಹರಿಯನ್ನು ಪೂಜಿಸಿದರೆ ಸಮಸ್ತ ದೇವತೆಗಳನ್ನೂ ಪೂಜಿಸಿದಂತೆಯೇ ಆಗುವುದು. ಜಲವು ಸೂರ್ಯನಿಂದ ಹೊರಟು [illegible] ಅವನನ್ನೇ ಹೋಗಿ ಸೇರುವಂತೆ, ಸ್ಥಾವರ ಜಂಗಮಾತ್ಮಕ[illegible] ವಸ್ತುಗಳು ಭೂಮಿಯಿಂದ ಉತ್ಪನ್ನವಾಗಿ ಅಲ್ಲಿಯೇ ಲೀನವಾ[illegible] ಚೇತನಾಚೇತನ ರೂಪವಾದ ಈ ವಿಶ್ವವು ಈಶ್ವರನಿಂದಲೇ ಹೊರಹೊರಟು (2)ಸಮಯಾನುಸಾರವಾಗಿ ಆತನಲ್ಲಿಯೇ ಲಯಹೊಂದುವುದು.

---

(1) ಗರ್ಭದಲ್ಲಿ ಶುಕ್ಲಶೋಣಿತಗಳ [illegible] ಲನದಿಂದ ಹುಟ್ಟಿದುದು ಮೊದಲನೆಯದು. ಗಾಯತ್ರಿ ಉಪದೇಶದಿ [illegible] ಹುಟ್ಟಿದುದು ಎರಡನೆಯದು. ಯಜ್ಞದೀಕ್ಷೆಯಿಂದ ಉದ್ಭವಿಸಿದುದು ಮೂರನೆ[illegible].

(2) ಈಶ್ವರನ ಇಚ್ಛೆಯೇ ಸಮಯ [illegible] ಅನುಸರಿಸುವುದು ಸಮಯಾನುಸಾರ

ಆ ವಿಶ್ವಾತ್ಮನ ಪದವು ಸೂರ್ಯನಂತೆ ಪ್ರಕಾಶಮಾನವಾದುದು. ಇಂದ್ರಿಯಗಳು ಸಚೇತನವಾಗಿರದಿದ್ದರೂ ಪ್ರಾಣವು ಜಾಗ್ರತವಾಗಿರುವಂತೆ ಈ ವಿಶ್ವ ಪ್ರಪಂಚವು ಇಲ್ಲದಿದ್ದರೂ ಅದು ಮಾತ್ರ ಪ್ರಕಾಶಯುಕ್ತವಾಗಿರುತ್ತದೆ ... ಜ್ಞಾನವಾಗುವುದರಿಂದ ಮಾಯೆಯ—ಬ್ರಹ್ಮನ ಭೇದವು ತಿಳಿದ ನಂತರ ಭ್ರಾಂತಿಯು ದೂರವಾಗುವುದು. ಆಕಾಶದಲ್ಲಿ ಮೇಘ, ಅಂಧಕಾರ, ಪ್ರಕಾಶಗಳು ಕ್ರಮವಾಗಿ ಪ್ರಕಟವಾಗಿ ಲೀನವಾಗುವಂತೆ ತಮಸ್ಸು, ರಜಸ್ಸು, ಸತ್ವ ರೂಪಿಣಿಯಾದ ಮಾಯಾಶಕ್ತಿಯ ಸಂಸಾರ ಪ್ರವಾಹವು ಪರಮಾತ್ಮನಿಂದಲೇ ... ಲೀನವಾಗುವುವು.

ಆದುದರಿಂದ ನೀವೆಲ್ಲರೂ ಪರಸ್ಪರ ಅನನ್ಯ ಭಾವದಿಂದ ದೇವನನ್ನು ಭಜಿಸಿರಿ. ಆತನು ಸಮಸ್ತ ದೇಹಧಾರಿಗಳಿಗೂ ಆತ್ಮನು. ಜಗತ್ತಿನ ನಿಮಿತ್ತಕಾರಣನಾದ ಕರ್ತನು ಆತನೇ. ಆತನೇ ಉಪಾದಾನ ಕಾರಣನಾದ ಪರಮ ಪುರುಷನು. ಆತನು ತನ್ನ [ಪ್ರಕೃತಿ] ತೇಜಸಿನಿಂದ ... ಗುಣಗಳ ... ವನ್ನು ನಷ್ಟಮಾಡುತ್ತಾನೆ. ಆದುದರಿಂದ ಆತನೇ ಪರಮೇಶ್ವರ ... ಸಮಸ್ತ ಪ್ರಾಣಿಗಳಮೇಲೆಯೂ ದಯೆಯನ್ನಿಡುವುದರಿಂದ, ... ಸಿಕ್ಕಿದರೆ ಅಷ್ಟರಲ್ಲಿಯೇ ತೃಪ್ತಿಪಡುವುದರಿಂದ, ಎಲ್ಲಾ ಇಂದ್ರಿಯಗಳನ್ನು ಶಾಂತವಾಗಿರಿಸುವುದರಿಂದ, ಭಗವಂತನು ಪ್ರಸನ್ನನಾಗುತ್ತಾನೆ. ಸಾಧು ಜನಗಳ ನಿರ್ಮಲ ಹೃದಯಾಕಾಶದಲ್ಲಿ ನಿರಂತರ ... ಯಾಗುತ್ತಿರುವ ಅವರ ಭಕ್ತಿ

ಭಾವನೆಯಿಂದ ಆಕರ್ಷಿಸಲ್ಪಟ್ಟು ಕಟ್ಟಿಹಾಕಲ್ಪಟ್ಟವನಂತೆ ವಿವಶನಾಗಿ ಅಲ್ಲಿಯೇ ನಿಲ್ಲುತ್ತಾನೆ. ಅಲ್ಲಿಂದ ಕದಲುವುದಿಲ್ಲ.

ಆದರೆ ಯಾವ ಮಂದ ಬುದ್ಧಿಗಳು ಧನ, ವೀರ್ಯ, ಕುಲ ರೂಪಗಳಿಂದ ಮದೋನ್ಮತ್ತರಾಗಿ ಅಕಿಂಚನರಾದ ಸಾಧುಗಳಿಗೆ ಅವಮಾನ ಮಾಡುತ್ತಾರೆಯೋ ಅವರ ಸೇವೆಯನ್ನು ಖಂಡಿತವಾಗಿಯೂ ಸ್ವೀಕರಿಸುವುದಿಲ್ಲ. ಭಕ್ತಿರಸರಸಿಕನಾದ ಭಗವಂತನು ಯಾರಿಗೆ ಸರ್ವಸ್ವವೋ ಅಂತಹ ನಿರ್ಧನರಾದ ಸಾಧುಗಳು ಆತನಿಗೆ ಅತ್ಯಂತ ಪ್ರಿಯರು ಸಕಾಮಕರ್ಮಿಗಳಾದ ನರಪತಿಗಳನ್ನು ದೇವತೆಗಳನ್ನು ಸ್ವತಃ ಲಕ್ಷ್ಮಿಯನ್ನೂ ಲಕ್ಷಿಸದಿರುವ ಶ್ರೀ ಹರಿಯು ಭಕ್ತಪರಾಧೀನನಾಗಿ ದೀನರಾದ ಸಾಧುಗಳ ಹೃದಯದಲ್ಲಿ ವಾಸಿಸುತ್ತಿರುವನಾದುದರಿಂದ ವಿವೇಕಿಯಾದ ಪುರುಷನು ಒಂದುಕ್ಷಣವನ್ನೂ ವ್ಯರ್ಥಮಾಡದೆ ಸದಾ ಸರ್ವದಾ ಆ ಭಗವಂತನನ್ನೇ ಧ್ಯಾನಿಸುತ್ತಿರಬೇಕು ”

ಬ್ರಹ್ಮಪುತ್ರನಾದ ನಾರದರು ಹೀಗೆ ಹೇಳಿ ಬ್ರಹ್ಮಲೋಕಕ್ಕೆ ಹೊರಟುಹೋದರು. ನಾರದರ ಮುಖಾರವಿಂದದಿಂದ ಹೊರಟ ಉಪದೇಶಾಮೃತದಿಂದ ತೃಪ್ತರಾಗಿ ಆ ಪ್ರಚೇತರು ಶ್ರೀಹರಿಯ ಚರಣ ಕಮಲಗಳಲ್ಲಿ ಲೀನರಾಗಿ ಬ್ರಹ್ಮಗತಿಯನ್ನು ಪಡೆದರು.

ಮೈತ್ರೇಯರಿಂದ ಈ ಪರಮ ಮಂಗಳ ಅಧ್ಯಾತ್ಮ ಜ್ಞಾನವನ್ನು ಕೇಳಿ ವಿದುರನು ತೃಪ್ತನಾಗಿ ತನ್ನ ಬಂಧುಗಳನ್ನು ನೋಡಲು ಹಸ್ತಿನಾಪುರಕ್ಕೆ ಪ್ರಯಾಣಮಾಡಿದನು.

ಹರಿಪಾರಾಯಣರಾದ ಪ್ರಚೇತರ ಈ ಕಥೆಯನ್ನು ಯಾರು ಕೇಳುತ್ತಾರೆಯೋ ಅವರಿಗೆ ಧನ ಐಶ್ವರ್ಯ, ಆಯುಸ್ಸು ಬಲ, ಯಶಸ್ಸು, ಮಂಗಳ ಮತ್ತು ಸದ್ಗತಿಗಳು ಪ್ರಾಪ್ತವಾಗುತ್ತವೆ.



